# ನಮಾಝ್

## ಫಿಕ್ಹುಸ್ಸುನ್ನಃ (ಭಾಗ - 1)

[ಇಸ್ಲಾಮೀ ಕರ್ಮಶಾಸ್ತ್ರ]

✍ ಇಬ್ರಾಹೀಮ್ ಸಈದ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಸನ್ಮಾರ್ಗ ವಾರಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದ ಮರ್ಹೂಮ್ ಇಬ್ರಾಹೀಮ್ ಸಈದ್‌ರಿಂದ ವಿರಚಿತ ಫಿಕ್ಹುಸ್ಸುನ್ನಃ ಭಾಗ-1ರ ನಾಲ್ಕನೆಯ ಪರಿಷ್ಕೃತ ಆವೃತ್ತಿಯು ಇದೀಗ ನಿಮ್ಮ ಕೈಯಲ್ಲಿದೆ. ಇಸ್ಲಾಮ್ ಧರ್ಮದ ಆರಾಧನಾ ಕರ್ಮಗಳ ವಿಧಿ-ವಿಧಾನಗಳನ್ನು ಕುರ್‌ಆನ್ ಹದೀಸ್ ಮತ್ತು ಕರ್ಮಶಾಸ್ತ್ರದ ಬೆಳಕಿನಲ್ಲಿ ವಿವರಿಸುವ ಈ ಗ್ರಂಥದಲ್ಲಿ 'ನಮಾಝ್'ನ ಕುರಿತಾದ ವಿಷಯಗಳನ್ನು ಮಾತ್ರ ಅಳವಡಿಸಲಾಗಿದೆ.

ಲೋಕದಾದ್ಯಂತ ನಾಲ್ಕು ಮದ್‌ಹಬ್‌ಗಳ ಅನುಯಾಯಿಗಳು ಹರಡಿಕೊಂಡಿದ್ದರೂ ಭಾರತದ ಉಪಭೂಖಂಡದಲ್ಲಿ ಶಾಫಿಈ ಮತ್ತು ಹನಫೀ ಕರ್ಮಶಾಸ್ತ್ರವನ್ನು ಅನುಸರಿಸುವವರೇ ಹೆಚ್ಚು. ಅಹ್ಲೆ ಹದೀಸ್‌ನವರೂ ಗಣನೀಯ ಸಂಖ್ಯೆಯಲ್ಲಿದ್ದಾರೆ. ಆದರೆ ಆಚಾರ ಕರ್ಮಗಳಿಗೆ ಸಂಬಂಧಿಸಿದ ಹದೀಸ್‌ಗಳನ್ನು ವಿವರಿಸಿದ ನಂತರ ಕರ್ಮಶಾಸ್ತ್ರೀಯ ಭಿನ್ನಾಭಿಪ್ರಾಯಗಳಿಗೆ ಅವಕಾಶವಿರುವೆಡೆಗಳಲ್ಲಿ ಅದನ್ನು ಸ್ಪಷ್ಟೀಕರಿಸಲಾಗಿದೆ.

ಇದರ ಅಧ್ಯಯನದಿಂದ ಮೂರು ವರ್ಗಗಳ ಜನರು ಏಕಪ್ರಕಾರ ಪ್ರಯೋಜನ ಪಡೆಯಬಹುದು. ಇಷ್ಟು ಸಮಗ್ರವಾಗಿ ವಿವರಿಸುವ ಗ್ರಂಥ ಕನ್ನಡ ಭಾಷೆಯಲ್ಲಿ ಬೇರೆ ಇಲ್ಲ. ಆದುದರಿಂದ ಕನ್ನಡ ಜನತೆಯ ಮಟ್ಟಿಗೆ ಇದು ಪ್ರಯೋಜನಕಾರಿಯಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಮುನ್ನುಡಿ

ಕನ್ನಡ ಭಾಷೆಯಲ್ಲಿ ಇಸ್ಲಾಮಿನ ಆರಾಧನಾ ವಿಧಿಗಳನ್ನು ಸಮಗ್ರವಾಗಿ ವಿವರಿಸುವ ಒಂದು ಗ್ರಂಥದ ಅಗತ್ಯ ಹಲವು ಕಾಲಗಳಿಂದ ಇತ್ತು. 'ಫಿಕ್ಹುಸ್ಸುನ್ನಃ' ಎಂಬ ಈ ಇಸ್ಲಾಮೀ ಕರ್ಮಶಾಸ್ತ್ರ ಗ್ರಂಥದ ಮೂಲಕ ಆ ಅಗತ್ಯವನ್ನು ತಕ್ಕ ಮಟ್ಟಿಗೆ ಪೂರೈಸುವ ಪ್ರಯತ್ನ ಮಾಡಲಾಗಿದೆ. ಇದು ಪ್ರಸಿದ್ಧ ಇಸ್ಲಾಮೀ ವಿದ್ವಾಂಸ ಮೌ| ಮುಹಮ್ಮದ್ ಆಸಿಮ್ ಅಲ್ ಹದ್ದಾದ್ ಅವರು ಬರೆದ 'ಫಿಕ್ಹುಸ್ಸುನ್ನಃ' ಎಂಬ ಗ್ರಂಥವನ್ನು ಮೂಲಾಧಾರವಾಗಿಟ್ಟು ರಚಿಸಿದ ಒಂದು ಸ್ವತಂತ್ರ ಕೃತಿಯಾಗಿದೆ.

ಕರ್ನಾಟಕದ ಎಲ್ಲ ಮುಸ್ಲಿಮರನ್ನು ದೃಷ್ಟಿಯಲ್ಲಿಟ್ಟು ಪ್ರತಿಯೊಂದು ವಿಧಿಗೂ ಹದೀಸ್‌ನ ಆಧಾರ ನೀಡುವುದರ ಜತೆಗೆ ಇಲ್ಲಿನ ಪ್ರಮುಖ ಕರ್ಮಶಾಸ್ತ್ರ ಪದ್ಧತಿಗಳಾದ ಹನಫಿ, ಶಾಫಿಈ ಕರ್ಮಶಾಸ್ತ್ರ ಗ್ರಂಥಗಳಲ್ಲಿರುವ ವಿಧಿಗಳನ್ನೂ ವಿವರಿಸಲಾಗಿದೆ. ಈ ರೀತಿ ಈ ಗ್ರಂಥವು ಹನಫೀ, ಶಾಫಿಈ ಕರ್ಮಶಾಸ್ತ್ರಗಳನ್ನನುಸರಿಸುವವರಿಗೂ ಅಹ್ಲುಲ್ ಹದೀಸ್‌ಗಳಿಗೂ ಏಕಪ್ರಕಾರ ಉಪಯುಕ್ತವಾಗಿದೆ.

ಯಾವುದೇ ಕರ್ಮಶಾಸ್ತ್ರ ಪದ್ಧತಿಯನ್ನು ಅನುಸರಿಸುವವರು ಇತರರ ದೃಷ್ಟಿಕೋನಗಳನ್ನೂ ಅರಿಯುವ ಮತ್ತು ಆ ಬಗ್ಗೆ ಇರುವ ತಪ್ಪು ಕಲ್ಪನೆಗಳನ್ನು ನೀಗಿಸಿಕೊಳ್ಳುವ ಅವಕಾಶವೂ ಈ ಗ್ರಂಥದ ಮೂಲಕ ಲಭಿಸುತ್ತದೆ.

ಸಾಮಾನ್ಯ ಕರ್ಮಶಾಸ್ತ್ರ ಪುಸ್ತಕಗಳಲ್ಲಿರುವಂತೆ ಕೇವಲ ವಿಧಿಗಳನ್ನು ಮಾತ್ರ ವಿವರಿಸುತ್ತಾ ಹೋಗದೆ ಈ ಪುಸ್ತಕದಲ್ಲಿ ಹೆಚ್ಚಿನ ವಿಧಿಗಳನ್ನು ಹದೀಸ್‌ಗಳ ಆಧಾರ ಸಹಿತ ನೀಡಲಾಗಿದೆ. ಅಧಿಕೃತ ಗ್ರಂಥಗಳಿಂದ ಹದೀಸನ್ನು ಉದ್ಧರಿಸುವ ಮೂಲಕ ಪ್ರವಾದಿ ಮುಹಮ್ಮದ್‌ರ(ಸ) ಅನುಸರಣೆಯ ಸ್ಫೂರ್ತಿ ಬೆಳೆಸಲು ಪ್ರಯತ್ನಿಸಲಾಗಿದೆ. ಅದುವೇ ನಮ್ಮಲ್ಲಿ ಕರ್ಮಶಾಸ್ತ್ರ ವಿಧಿಗಳ ಮೂಲಾಧಾರವಾಗಿದೆ. ಗ್ರಂಥದ ಈ ಮೊದಲನೆಯ ಭಾಗವು ಇಸ್ಲಾಮಿನ ಅತ್ಯಂತ ಮಹತ್ವದ ಆರಾಧನಾ ಕರ್ಮವಾದ ನಮಾಝ್‌ನ ಕುರಿತ ಸಮಗ್ರ ವಿವರಗಳನ್ನು ಒಳಗೊಂಡಿದೆ. ಮುಂದಿನ ಭಾಗಗಳಲ್ಲಿ 'ಮಯ್ಯತ್ ಸಂಸ್ಕಾರ', 'ಝಕಾತ್', 'ಉಪವಾಸ ವ್ರತ' ಮತ್ತು 'ಹಜ್ಜ್'ನ ಕುರಿತ ವಿವರಗಳಿರುವುವು.

'ಫಿಕ್ಹುಸ್ಸುನ್ನಃ' ಎಂಬ ಮೂಲ ಗ್ರಂಥದ ರಚನೆಯಲ್ಲಿ 'ಸಿಹಾಹುಸ್ಸಿತ್ತ' ಎಂಬ ಅಧಿಕೃತ ಆರು ಹದೀಸ್ ಗ್ರಂಥಗಳಲ್ಲದೆ ಇತರ ಹಲವು ಹದೀಸ್ ಗ್ರಂಥಗಳು ಮತ್ತು 'ನೈಲುಲ್ ಔತಾರ್', 'ಹಿದಾಯತುಲ್ ಮುಜ್ತಹಿದ್', 'ಅಲ್ ಫಿಕ್ಹು ಅಲಾ ಮದಾಹಿಬಲ್ ಅರ್‌ಬಅ'

ಮುಂತಾದ ಅನೇಕ ಕರ್ಮಶಾಸ್ತ್ರ ಗ್ರಂಥಗಳಿಂದ ಪ್ರಯೋಜನ ಪಡೆಯಲಾಗಿದೆ. ಅಲ್ಲಾಹನು ಇದರ ಪ್ರತಿಫಲವನ್ನು ಆ ಎಲ್ಲ ಹದೀಸ್ ಸಂಗ್ರಹಕಾರರಿಗೂ ಕರ್ಮಶಾಸ್ತ್ರಜ್ಞರಿಗೂ ವಿಶೇಷವಾಗಿ 'ಫಿಕ್ಹುಸ್ಸುನ್ನಃ'ದ ಗ್ರಂಥಕರ್ತರಿಗೂ ನೀಡಿ ಅನುಗ್ರಹಿಸಲಿ. ಆಮೀನ್

ಈ ಗ್ರಂಥದಲ್ಲಿ ಪ್ರತಿಯೊಬ್ಬರೂ ಬಾಯಿಪಾಠ ಮಾಡಬೇಕಾದ ಆಯತ್, ದಿಕ್ರ್, ದುಆ, ಸಲಾತ್ ಇತ್ಯಾದಿಗಳನ್ನು ಅರಬಿ ಲಿಪಿಯಲ್ಲಿ ನೀಡುವುದರ ಜತೆಗೆ ಅದರ ಕನ್ನಡ ಲಿಪಿಯಂತರವನ್ನೂ ನೀಡಲಾಗಿದೆ. ಅರಬಿ ಲಿಪಿ ಗೊತ್ತಿಲ್ಲದವರು ಅದನ್ನು ಕಲಿಯುವ ಪ್ರಯತ್ನ ಮಾಡುವುದರ ಜತೆಗೆ ಅರಬಿ ಬಲ್ಲವರಿಂದ ಸರಿಯಾದ ಉಚ್ಚಾರವನ್ನು ಕಲಿತು ಅದನ್ನು ಬಾಯಿಪಾಠ ಮಾಡಿಕೊಳ್ಳಬಹುದು.

ಅಲ್ಲಾಹನು ಈ ಪ್ರಯತ್ನವನ್ನು ಬರಹಗಾರನ ಪಾಲಿಗೆ ಒಂದು ಸತ್ಕರ್ಮವಾಗಿ ಮಾಡಲಿ ಮತ್ತು ಅತ್ಯಧಿಕ ಜನರಿಗೆ ಇದರಿಂದ ಪ್ರಯೋಜನ ದೊರಕಲಿ ಎಂದು ಅಲ್ಲಾಹನಲ್ಲಿ ವಿನಮ್ರವಾಗಿ ಪ್ರಾರ್ಥಿಸುತ್ತೇನೆ.

ವಮಾ ತೌಫೀಕೀ ಇಲ್ಲಾ ಬಿಲ್ಲಾಹ್

28.03.1417 ಹಿ. ಶ. — ವಸ್ಸಲಾಮ್

13.08.1996 ಕ್ರಿ. ಶ. — ಇಬ್ರಾಹೀಮ್ ಸಈದ್

# ಅನುಕ್ರಮಣಿಕೆ

# ಶುಚಿತ್ವ

ಎಲ್ಲ ರೀತಿಯ ಮಾಲಿನ್ಯದಿಂದ ತನ್ನ ದೇಹ ಮತ್ತು ವಸ್ತ್ರಗಳನ್ನು ಶುದ್ಧವಾಗಿಡುವುದು ಮುಸ್ಲಿಮನ ಮಟ್ಟಿಗೆ ಅಗತ್ಯವಾಗಿದೆ. ಅಲ್ಲಾಹನು ಈ ರೀತಿ ಆದೇಶಿಸಿರುವನು:

"ನಿಮ್ಮ ವಸ್ತ್ರಗಳನ್ನು ಶುದ್ಧವಾಗಿಡಿರಿ."

ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು: "ಶುಚಿತ್ವವು ಸತ್ಯವಿಶ್ವಾಸದ ಅರ್ಧಾಂಶವಾಗಿದೆ." **(ಬುಖಾರಿ, ಮುಸ್ಲಿಮ್)**

## ಮಾಲಿನ್ಯದ ವಿಧಗಳು

**1. ಶವ:** ತನ್ನಿಂತಾನೆ ಸತ್ತ ಪ್ರಾಣಿಯನ್ನು ಶವವೆನ್ನುತ್ತಾರೆ. ಅದೇ ರೀತಿ ಕತ್ತು ಹಿಸುಕಿ ಕೊಲ್ಲಲ್ಪಟ್ಟ ಪ್ರಾಣಿ, ಎತ್ತರದಿಂದ ಬಿದ್ದು ಸತ್ತ ಪ್ರಾಣಿ, ಕ್ರೂರ ಪ್ರಾಣಿಯು ಹರಿದು ತಿಂದ ಪ್ರಾಣಿ, ಯಾವುದಾದರೂ ಬಲಿಪೀಠದಲ್ಲಿ ಕೊಯ್ಯಲ್ಪಟ್ಟ ಪ್ರಾಣಿ ಅಥವಾ ಕೊಯ್ಯುವಾಗ ಅಲ್ಲಾಹನ ಹೊರತು ಇತರರ ಹೆಸರೆತ್ತಿ ಕೊಯ್ದ ಪ್ರಾಣಿಗಳು ಕೂಡಾ ಶವದ ವಿಧಿಗೇ ಸೇರುತ್ತವೆ. ಈ ಎಲ್ಲ ಪ್ರಾಣಿಗಳ ಪ್ರಸ್ತಾಪವು ಪವಿತ್ರ ಕುರ್‌ಆನಿನಲ್ಲಿದೆ. ಅರಬರು ಜೀವಂತ ಪ್ರಾಣಿಗಳ ದೇಹದಿಂದ ಮಾಂಸದ ತುಂಡನ್ನು ಕೊಯ್ದು ತೆಗೆಯುತ್ತಿದ್ದರು. ಇದೂ ಶವದ ಸಾಲಿಗೇ ಸೇರುತ್ತದೆ. ಪ್ರವಾದಿ(ಸ) ಹೀಗೆ ಹೇಳಿರುವರು:

"ಜೀವಂತ ಪ್ರಾಣಿಯ ದೇಹದಿಂದ ಮಾಂಸದ ತುಂಡನ್ನು ಕೊಯ್ದು ತೆಗೆದರೆ ಅದು ಕೂಡಾ ಶವವೆನಿಸುತ್ತದೆ."

**(ವರದಿ: ಅಬುಲ್ ವಾಕಿದ್ ಲೈಸೀ, ಅಬೂ ದಾವೂದ್, ತಿರ್ಮಿದಿ)**

ಈ ಬಗ್ಗೆ ಎಲ್ಲ ಕರ್ಮಶಾಸ್ತ್ರ ಪಂಡಿತರ ಒಮ್ಮತವಿದೆ.

**.(ಹಿದಾಯತುಲ್ ಮುಜ್ತಹಿದ್- ಭಾಗ-1, ಪುಟ: 61)**

ಈ ಕೆಳಗಿನ್ನ ವಸ್ತುಗಳು ಶವದ ವಿಧಿಯಿಂದ ಹೊರತಾಗಿವೆ-

(ಅ) ಸತ್ತ ಮೀನು, ಮಿಡತೆ, ನೊಣ (ಇದೇ ರೀತಿ ದೇಹದಲ್ಲಿ ಕೆಂಪು ರಕ್ತವಿಲ್ಲದ ಇತರ ಪ್ರಾಣಿಗಳು ಉದಾ: ಇರುವೆ, ಜೇನುನೊಣ ಇತ್ಯಾದಿ ಕೂಡಾ ಇಮಾಮ್ ಅಬೂ ಹನೀಫಾರವರ ಪ್ರಕಾರ ಶವದ ವಿಧಿಯಿಂದ ಹೊರತಾಗಿವೆ. ಆದರೆ ಇಮಾಮ್ ಶಾಫಿಈ(ರ) ಅದನ್ನು ಒಪ್ಪುವುದಿಲ್ಲ. ಶಾಫಿಈ ಕರ್ಮಶಾಸ್ತ್ರದಂತೆ ಈ ವಸ್ತುಗಳನ್ನು ನೀರಿನಲ್ಲಿ ಮುಳುಗಿಸಿದರೆ

ಅಥವಾ ಅವುಗಳು ಬಿದ್ದುದರಿಂದ ನೀರಿನ ರುಚಿ, ಬಣ್ಣ ಅಥವಾ ವಾಸನೆ ಬದಲಾದರೆ ನೀರು ಮಲಿನವಾಗುತ್ತದೆ.)

ಪ್ರವಾದಿ(ಸ) ಹೀಗೆ ಹೇಳಿರುವರು:

"ನಮಗೆ ಎರಡು ಸತ್ತ ಪ್ರಾಣಿಗಳನ್ನು ಮತ್ತು ಎರಡು ರಕ್ತಗಳನ್ನು ಧರ್ಮಸಮ್ಮತ ಗೊಳಿಸಲಾಗಿದೆ. ಸತ್ತ ಪ್ರಾಣಿಗಳೆಂದರೆ ಮೀನು ಮತ್ತು ಮಿಡತೆ. ಎರಡು ರಕ್ತಗಳೆಂದರೆ ಯಕೃತ್ ಮತ್ತು ಗುಲ್ಮ."

**(ವರದಿ: ಅಬ್ದುಲ್ಲಾ ಬಿನ್ ಉಮರ್(ರ) - ಅಹ್ಮದ್, ಶಾಫಿಈ, ಇಬ್ನು ಮಾಜ:, ಬೈಹಕಿ, ದಾರಕುತ್ನಿ)**

"ನಿಮ್ಮ ಪೈಕಿ ಯಾರದಾದರೂ ಪಾನೀಯದಲ್ಲಿ ನೊಣ ಬಿದ್ದರೆ ಅದನ್ನು ಮುಳುಗಿಸಿ ತೆಗೆದು ಎಸೆಯಲಿ. ಏಕೆಂದರೆ ಅದರ ಒಂದು ರೆಕ್ಕೆಯಲ್ಲಿ ರೋಗವಿದೆ, ಮತ್ತೊಂದರಲ್ಲಿ ಗುಣವಿದೆ." **(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಅಬೂ ದಾವೂದ್, ಅಹ್ಮದ್, ಇಬ್ನು ಮಾಜ)**

(ಆ) ಸತ್ತ ಪ್ರಾಣಿಯ ಜೀವವಿಲ್ಲದ ವಸ್ತುಗಳು. ಉದಾ- ಹಲ್ಲು, ರೋಮ ಮತ್ತು ಉಣ್ಣೆ ಕೂಡಾ ಇಮಾಮ್ ಅಬೂ ಹನೀಫಾರವರ ಪ್ರಕಾರ ಶವದ ವಿಧಿಯಿಂದ ಹೊರತಾಗಿವೆ. ಆದರೆ ಇಮಾಮ್ ಶಾಫಿಈಯವರ ಪ್ರಕಾರ ಎಲುಬು ಮತ್ತು ರೋಮದಲ್ಲಿ ಜೀವವಿರುತ್ತದಾದ್ದರಿಂದ ಅದು ಮಲಿನವಾಗಿದೆ.

**2. ರಕ್ತ:** ಪವಿತ್ರ ಕುರ್‌ಆನ್‌ನಿಂದ ವ್ಯಕ್ತವಾಗುವಂತೆ ಹರಿಯುತ್ತಿರುವ ರಕ್ತವು ಮಲಿನವಾಗಿದೆ. ಆದರೆ ಒಂದಿಷ್ಟು ರಕ್ತವು ಕ್ಷಮಾರ್ಹವಾಗಿದೆ.

ಹ. ಆಯಿಶಾ(ರ) ಹೀಗೆ ಹೇಳಿರುವರು: "ನಾವು ಮಾಂಸ ತಿನ್ನುತ್ತಿದ್ದೆವು ಮತ್ತು ಮಡಕೆಯ ಮೇಲ್ಭಾಗದಲ್ಲಿ ರಕ್ತದ ಗೆರೆಗಳು ಇರುತ್ತಿದ್ದುವು."

ಇಮಾಮ್ ಹಸನ್ ಬಸರೀ(ರ) ಹೀಗೆ ಹೇಳಿರುವರು: "ಸಹಾಬಿಗಳು ಗಾಯಗೊಂಡ ಸ್ಥಿತಿಯಲ್ಲಿ ನಮಾಝ್ ಮಾಡುತ್ತಿದ್ದರು." **(ಬುಖಾರಿ)**

ಹ. ಅಬ್ದುಲ್ಲಾ ಬಿನ್ ಉಮರ್(ರ) ಹೀಗೆ ಹೇಳಿರುವರು: "ಹ. ಉಮರ್‌ರವರ(ರ) ಮೇಲೆ ಆಕ್ರಮಣ ನಡೆದಾಗಲೂ ಅವರು ನಮಾಝ್ ಮಾಡಿಸುತ್ತಿದ್ದರು. ಆಗ ಅವರ ದೇಹದಿಂದ ರಕ್ತ ಹರಿಯುತ್ತಿತ್ತು." **(ಬುಖಾರಿ)**

**3. ಹಂದಿ:** ಹಂದಿ ಮಾಂಸವು ಮಲಿನವಾಗಿದೆ ಎಂಬುದು ಸರ್ವಸಮ್ಮತ ವಿಷಯ. ಪವಿತ್ರ ಕುರ್‌ಆನಿನಲ್ಲಿ ಅದನ್ನು ಸ್ಪಷ್ಟವಾಗಿ ನಿಷೇಧಿಸಲಾಗಿದೆ.

**4. ನಾಯಿ:** ಪ್ರವಾದಿ(ಸ) ಹೀಗೆ ಹೇಳಿರುವರು: "ನಿಮ್ಮಲ್ಲಿ ಯಾರದಾದರೂ ಪಾತ್ರೆಗೆ ನಾಯಿ ಬಾಯಿ ಹಾಕಿದರೆ ಅದನ್ನು ಅವನು ಏಳು ಸಲ ತೊಳೆಯಲಿ. ಮೊದಲ ಬಾರಿ ಮಣ್ಣಿನಿಂದ." **(ಬುಖಾರಿ, ಮುಸ್ಲಿಮ್, ಅಹ್ಮದ್)**

ಈ ಹದೀಸ್‌ನ ಆಧಾರದಲ್ಲಿ ಹನಫೀ ಕರ್ಮಶಾಸ್ತ್ರ ಪ್ರಕಾರ ನಾಯಿಯ ಜೊಲ್ಲು ಮಾತ್ರ ಮಲಿನವಾಗಿದೆ. ಆದರೆ ಇಮಾಮ್ ಶಾಫಿಈ ಮತ್ತು ಹೆಚ್ಚಿನ ಕರ್ಮಶಾಸ್ತ್ರಜ್ಞರ ಪ್ರಕಾರ ನಾಯಿಯ ಜೊಲ್ಲು ಮಾತ್ರವಲ್ಲ ಅದರ ದೇಹ ಮತ್ತು ಪ್ರತಿಯೊಂದು ವಸ್ತು ಮಲಿನವಾಗಿದೆ.

**5. ವಾಂತಿ:** ವಾಂತಿಯು ಮಲಿನವಾಗಿದೆ ಎಂಬುದು ಸರ್ವಸಮ್ಮತ ವಿಷಯ. ಪ್ರವಾದಿ(ಸ) ವಾಂತಿ ತಾಗಿದ ಬಟ್ಟೆಯನ್ನು ತೊಳೆಯಲು ಹ. ಅಮ್ಮಾರ್‌ರವರಿಗೆ(ರ) ಆದೇಶಿಸಿದ್ದರು.

**6. ಮನುಷ್ಯನ ಮಲ-ಮೂತ್ರ:** ಇವು ಮಲಿನವಾಗಿದೆ ಎಂಬುದು ಸರ್ವಸಮ್ಮತ. ಮೊಲೆಹಾಲನ್ನೇ ಕುಡಿಯುವ ಮತ್ತಿತರ ಆಹಾರವನ್ನು ಸೇವಿಸಲು ಆರಂಭಿಸದ ಗಂಡು ಮಗುವಿನ ಮೂತ್ರ ತಾಗಿದರೆ ಕೇವಲ ನೀರು ಚಿಮುಕಿಸಿದರೆ ಸಾಕಾಗುವುದು.

"ಪ್ರವಾದಿ ಮುಹಮ್ಮದ್‌ರವರ(ಸ) ಬಳಿ ಹ. ಉಮ್ಮು ಕೈಸ್(ರ) ತಮ್ಮ (ಗಂಡು) ಮಗುವೊಂದನ್ನು ತಂದರು. ಅದಿನ್ನೂ ಆಹಾರ ಸೇವಿಸಲು ಆರಂಭಿಸಿರಲಿಲ್ಲ. ಅದು ಪ್ರವಾದಿವರ್ಯರ(ಸ) ಮಡಿಲಲ್ಲಿ ಮೂತ್ರ ಮಾಡಿತು. ಆಗ ಪ್ರವಾದಿ(ಸ) ನೀರು ತರಿಸಿ ಅದನ್ನು ಬಟ್ಟೆಯ ಮೇಲೆ ಚಿಮುಕಿಸಿದರು. ಅದನ್ನು ತೊಳೆಯಲಿಲ್ಲ."

(ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಪ್ರವಾದಿ(ಸ) ಹೀಗೆ ಹೇಳಿರುವರು: "ಗಂಡು ಮಗುವಿನ ಮೂತ್ರಕ್ಕೆ ನೀರು ಚಿಮುಕಿಸಲಾಗುವುದು ಮತ್ತು ಹೆಣ್ಣು ಮಗುವಿನ ಮೂತ್ರವನ್ನು ತೊಳೆಯಲಾಗುವುದು."

(ವರದಿ: ಹ. ಅಲೀ(ರ)- ಮುಸ್ನದ್ ಇಮಾಮ್ ಅಹ್ಮದ್)

ಆದರೆ ಹನಫೀ ಕರ್ಮಶಾಸ್ತ್ರದಂತೆ ಗಂಡು ಮಗುವಿನ ಮೂತ್ರವನ್ನೂ ತೊಳೆಯಬೇಕು.

**7. ಮದೀ ಮತ್ತು ವದೀ:** ಮದೀ ಎಂದರೆ ಕಾಮೋದ್ರೇಕದ ವೇಳೆ ವೀರ್ಯಕ್ಕಿಂತ ಮೊದಲು ಹೊರಡುವ ದ್ರವ ಮತ್ತು ವದೀ ಎಂದರೆ ಕೆಲವರಿಗೆ ಮೂತ್ರದ ನಂತರ ಹೊರಡುವ ಒಂದು ದ್ರವ. ಇವೆರಡೂ ಮಲಿನವಾಗಿವೆಯೆಂಬುದು ಸರ್ವಸಮ್ಮತ ವಿಷಯ. ಆದರೆ ಇದರಿಂದ ಸ್ನಾನವು ಕಡ್ಡಾಯವಾಗುವುದಿಲ್ಲ. ಕೇವಲ ವುಝೂ ಮಾಡಿದರೆ ಸಾಕು.

"ಹ. ಅಲೀ(ರ) ಹೇಳಿರುತ್ತಾರೆ: ನನಗೆ ಮದೀ ಹೆಚ್ಚಾಗಿ ಹೊರಡುತ್ತಿತ್ತು. ಆದರೆ ನಾನು ಆ ಬಗ್ಗೆ ಪ್ರವಾದಿವರ್ಯರಲ್ಲಿ(ಸ) ವಿಚಾರಿಸಲು ಸಂಕೋಚಪಡುತ್ತಿದ್ದೆ. ನಾನು ಈ ಬಗ್ಗೆ ಪ್ರವಾದಿವರ್ಯರಲ್ಲಿ(ಸ) ವಿಚಾರಿಸುವಂತೆ ಒಬ್ಬ ವ್ಯಕ್ತಿಗೆ ಹೇಳಿದೆ. ಅವರು ವಿಚಾರಿಸಿದಾಗ ಪ್ರವಾದಿ(ಸ) ಹೀಗೆ ಹೇಳಿದರು: "ವುಝೂ ಮಾಡಿರಿ ಮತ್ತು ನಿಮ್ಮ ಗುಪ್ತಾಂಗವನ್ನು ತೊಳೆದುಕೊಳ್ಳಿ." (ಬುಖಾರಿ)

ಹ. ಸಹ್ಲ್ ಬಿನ್ ಹನೀಫ್(ರ) ಹೇಳುತ್ತಾರೆ- "ನಾನು 'ಮದೀ' ಹೊರಡುವ ತೊಂದರೆಯಿಂದಾಗಿ ಆಗಾಗ ಸ್ನಾನ ಮಾಡಿಕೊಳ್ಳುತ್ತಿದ್ದೆ. ನನ್ನ ಈ ಸ್ಥಿತಿಯನ್ನು ಒಮ್ಮೆ ಪ್ರವಾದಿವರ್ಯರಲ್ಲಿ(ಸ) ತೋಡಿಕೊಂಡೆ. ನಾನು ಬಟ್ಟೆಗೆ ತಾಗಿದುದನ್ನು ಏನು ಮಾಡಬೇಕು ಎಂದು ವಿಚಾರಿಸಿದೆ. ಆಗ ಪ್ರವಾದಿ(ಸ) ಹೇಳಿದರು- ಒಂದು ಬೊಗಸೆ ನೀರು ತೆಗೆದುಕೊಂಡು 'ಮದೀ' ತಾಗಿದೆ ಎಂದು ನೀವು ಭಾವಿಸುವ ಕಡೆಗೆ ಚಿಮುಕಿಸಿರಿ."

(ಅಹ್ಮದ್, ತಿರ್ಮಿದಿ, ಇಬ್ನು ಮಾಜಃ)

**8. ವೀರ್ಯ:** ವೀರ್ಯದ ಕುರಿತು ಎರಡು ರೀತಿಯ ಹದೀಸ್‌ಗಳಿವೆ. ಕೆಲವದರಲ್ಲಿ ಅದನ್ನು ತೊಳೆಯಬೇಕೆಂದಿದೆ. ಇನ್ನು ಕೆಲವದರಲ್ಲಿ ಅದನ್ನು ಒರೆಸಿ ತೆಗೆಯಬೇಕೆಂದಿದೆ.

ಹ. ಆಯಿಶಾ(ರ) ಹೇಳುತ್ತಾರೆ: "ನಾನು ಪ್ರವಾದಿವರ್ಯರ(ಸ) ಬಟ್ಟೆಯಿಂದ ವೀರ್ಯವನ್ನು, ಅದು ಒಣಗಿದ್ದರೆ ಒರೆಸಿ ತೆಗೆಯುತ್ತಿದ್ದೆ ಮತ್ತು ಅದು ಒದ್ದೆಯಾಗಿದ್ದರೆ ತೊಳೆಯುತ್ತಿದ್ದೆ." (ಮುಸ್ನದ್ ಅಹ್ಮದ್)

ಈ ಹದೀಸ್‌ಗಳ ಆಧಾರದಲ್ಲಿ ಇಮಾಮ್ ಶಾಫಿಈಯವರ(ರ) ಪ್ರಕಾರ ವೀರ್ಯವು ಶುದ್ಧವಾಗಿದೆ ಮತ್ತು ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಅದು ಮಲಿನವಾಗಿದೆ.

**9. ನಿಷಿದ್ಧ ಪ್ರಾಣಿಗಳ ಮಾಂಸ ಮತ್ತು ಮಲ-ಮೂತ್ರ:** ಇವೆಲ್ಲವೂ ಮಲಿನವಾಗಿವೆ.

ಹ. ಅನಸ್(ರ) ಹೇಳುತ್ತಾರೆ- "ಖೈಬರ್ ವಿಜಯದ ದಿನ ನಮಗೆ ಸಾಕು ಪ್ರಾಣಿಗಳ ಧಾರಾಳ ಮಾಂಸ ಸಿಕ್ಕಿತು. ಅಷ್ಟರಲ್ಲಿ ಪ್ರವಾದಿವರ್ಯರ(ಸ) ಕಡೆಯಿಂದ ಒಬ್ಬ ಉದ್ಘೋಷಕ ಬಂದು ಈ ರೀತಿ ಘೋಷಿಸಿದರು- ಅಲ್ಲಾಹ್ ಮತ್ತು ಆತನ ಪ್ರವಾದಿಯವರು ನಿಮ್ಮನ್ನು ಸಾಕು ಕತ್ತೆಗಳ ಮಾಂಸ ತಿನ್ನುವುದರಿಂದ ತಡೆದಿರುವರು. ಏಕೆಂದರೆ ಅದು ಮಲಿನವಾಗಿದೆ."

(ಬುಖಾರಿ, ಮುಸ್ಲಿಮ್)

"ಹ. ಇಬ್ನು ಮಸ್‌ಊದ್(ರ) ಹೇಳುತ್ತಾರೆ- ಒಮ್ಮೆ ಪ್ರವಾದಿ(ಸ) ಮೂತ್ರ ವಿಸರ್ಜನೆಗಾಗಿ ಹೊರಟರು ಮತ್ತು ತನಗಾಗಿ ಮೂರು ಹೆಂಟೆಗಳನ್ನು ಹುಡುಕಿ ತರಲು ನನ್ನಲ್ಲಿ ಆಜ್ಞಾಪಿಸಿದರು. ನನಗೆ ಎರಡು ಹೆಂಟೆಗಳು ಸಿಕ್ಕಿದುವು. ಮೂರನೆಯದು ಸಿಗಲಿಲ್ಲ. ಆಗ ನಾನು ಒಣಗಿದ ಲದ್ದಿಯ ತುಂಡೊಂದನ್ನು ಎತ್ತಿ ತಂದೆ. ಪ್ರವಾದಿ(ಸ) ಎರಡೂ ಹೆಂಟೆಗಳನ್ನು ತೆಗೆದುಕೊಂಡರು ಮತ್ತು ಲದ್ದಿಯ ತುಂಡನ್ನು ಎಸೆಯುತ್ತಾ 'ಇದು ಮಲಿನವಾಗಿದೆ' ಎಂದರು. ಇನ್ನೊಂದು ವರದಿಯ ಪ್ರಕಾರ 'ಇದು ಕತ್ತೆಯ ಲದ್ದಿಯಾಗಿದೆ' ಎಂದರು."

(ಬುಖಾರಿ, ಇಬ್ನು ಮಾಜಃ, ಇಬ್ನು ಖುಝೈಮ)

**10. ಶರಾಬು:** ಇದು ಮಲಿನವಾಗಿದೆ ಎಂಬುದು ಪವಿತ್ರ ಕುರ್‌ಆನಿನಿಂದ ವ್ಯಕ್ತವಾಗುತ್ತದೆ.

## ಮಾಲಿನ್ಯ ದೂರೀಕರಿಸುವ ವಿಧಾನಗಳು

ವಿಭಿನ್ನ ವಸ್ತುಗಳ ಮಾಲಿನ್ಯವು ವಿಭಿನ್ನ ವಿಧಾನಗಳಿಂದ ದೂರವಾಗುತ್ತದೆ.

**1. ಶರೀರ ಅಥವಾ ವಸ್ತ್ರ:** ಶರೀರ ಅಥವಾ ವಸ್ತ್ರ ಮಲಿನವಾದರೆ ಆ ಮಾಲಿನ್ಯವು ನೀಗುವ ತನಕ ಅದನ್ನು ನೀರಿನಿಂದ ತೊಳೆಯಬೇಕು.

"ಪ್ರವಾದಿವರ್ಯರ(ಸ) ಬಳಿ ಓರ್ವ ಮಹಿಳೆ ಬಂದು ವಿಚಾರಿಸಿದರು- ನಮ್ಮ ಪೈಕಿ ಯಾರದಾದರೂ ವಸ್ತ್ರಕ್ಕೆ ಮುಟ್ಟಿನ ರಕ್ತ ತಾಗಿದರೆ ಏನು ಮಾಡಬೇಕು? ಆಗ ಪ್ರವಾದಿ(ಸ) ಹೇಳಿದರು- ಅದನ್ನು ಒರೆಸಿ ತೆಗೆದು ತೊಳೆಯಬೇಕು. ಅನಂತರ ಅದನ್ನುಟ್ಟು ನಮಾಝ್ ಮಾಡಬಹುದು."

(ವರದಿ: ಹ. ಅಸ್ಮಾ ಬಿನ್ತಿ ಅಬೂಬಕರ್(ರ)- ಬುಖಾರಿ, ಮುಸ್ಲಿಮ್)

ಈ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಆದರೆ ಮನುಷ್ಯನ ವಿಭಿನ್ನ ಅನಿವಾರ್ಯತೆಗಳನ್ನು ಪರಿಗಣಿಸಿ ಹನಫೀ ಕರ್ಮಶಾಸ್ತ್ರದಲ್ಲಿ ಬಟ್ಟೆಗೆ ತಗಲಿದ ಒಂದು ರೂಪಾಯಿ ನಾಣ್ಯದಷ್ಟು ದೊಡ್ಡ ಗಾತ್ರದ ಮಾಲಿನ್ಯವು ಕ್ಷಮಾರ್ಹವಾಗಿದೆ. ಅಷ್ಟರ ಮಟ್ಟಿನ ಮಾಲಿನ್ಯ ತಾಗಿದ್ದರೆ ಆ ವಸ್ತ್ರದೊಂದಿಗೆ ಮಾಡಿದ ನಮಾಝ್ ಸಿಂಧುವೆನಿಸುವುದು. ಆದರೆ ಹಾಗೆ ಮಾಡುವುದು ಮಕ್ರೂಹ್(ಆಕ್ಷೇಪಾರ್ಹ) ಆಗುತ್ತದೆ. ಶಾಫಿಈ ಕರ್ಮಶಾಸ್ತ್ರ ಪ್ರಕಾರ ಸಾಮಾನ್ಯವಾಗಿ ಕಣ್ಣಿಗೆ ಕಾಣಿಸದಂತಹ ಮಾಲಿನ್ಯ ಮಾತ್ರ ಕ್ಷಮಾರ್ಹವಾಗಿದೆ.

**2. ನೆಲ:** ನೆಲವು ಮಲಿನವಾದರೆ ನೀರು ಹಾಯಿಸುವುದರಿಂದ ಅದು ಶುದ್ಧವಾಗುತ್ತದೆ.

"ಒಬ್ಬ ಹಳ್ಳಿಗ ಮಸೀದಿಗೆ ಬಂದ ಮತ್ತು ಮಸೀದಿಯ ಅಂಗಳದಲ್ಲಿ ಕುಳಿತು ಮೂತ್ರ ಮಾಡತೊಡಗಿದ. ಸಹಾಬಿಗಳು ಅವನನ್ನು ತಡೆಯಲು ಮತ್ತು ಹಿಡಿಯಲು ಧಾವಿಸಿದರು. ಆದರೆ ಪ್ರವಾದಿ(ಸ) ಹೇಳಿದರು- ಅವನು ಮೂತ್ರ ಮಾಡಲಿ ಮತ್ತು ಆ ಮೂತ್ರದ ಮೇಲೆ ಒಂದು ಕೊಡ ನೀರು ಹಾಯಿಸಿಬಿಡಿರಿ. ಏಕೆಂದರೆ ನೀವು ಸೌಲಭ್ಯ ಉಂಟು ಮಾಡುವವರಾಗಿ ಕಳುಹಿಸಲ್ಪಟ್ಟಿರುತ್ತೀರಿ, ಕಠಿಣತೆ ತೋರುವವರಾಗಿ ಕಳುಹಿಸಲ್ಪಟ್ಟಿಲ್ಲ."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಅಹ್ಮದ್,
ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ನೀರು ಹಾಯಿಸುವುದರಿಂದ ನೆಲವು ಶುದ್ಧವಾಗುವ ಬಗ್ಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಆದರೆ ಹನಫೀ ಕರ್ಮಶಾಸ್ತ್ರದಂತೆ ನೆಲವನ್ನು ಅಗೆಯುವುದು ಮತ್ತು ಅದಕ್ಕೆ ಮೂರು ಬಾರಿ ನೀರು ಹಾಯಿಸುವುದು ಅಥವಾ ಒಂದು ಸಲ ಚೆನ್ನಾಗಿ ನೀರು ಹಾಯಿಸುವುದು ಅಗತ್ಯ. ಗಾಳಿ ಅಥವಾ ಬಿಸಿಲಿನಿಂದ ಅದು ಒಣಗಿ ಮಾಲಿನ್ಯದ ಪ್ರಭಾವವು ಅಳಿದು ಹೋದರೆ ಕೂಡಾ ನೆಲ ಶುದ್ಧವಾಗುತ್ತದೆ. ಆದರೆ ಆ ನೆಲದಲ್ಲಿ ಕೇವಲ ನಮಾಝ್ ಮಾಡಬಹುದೇ ವಿನಾ ಅದರಿಂದ ತಯಮ್ಮುಮ್ ಮಾಡಲಾಗದು.

**3. ತುಪ್ಪ, ಎಣ್ಣೆ ಇತ್ಯಾದಿ:** "ತುಪ್ಪದಲ್ಲಿ ಇಲಿ ಬಿದ್ದರೆ ಏನು ಮಾಡಬೇಕು? ಎಂದು ಒಬ್ಬರು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದರು. ಆಗ ಪ್ರವಾದಿ(ಸ)- ಅದರ ಅಕ್ಕಪಕ್ಕದಲ್ಲಿರುವ ತುಪ್ಪವನ್ನು ಎಸೆದು ಉಳಿದುದನ್ನು ಸೇವಿಸಿರಿ."

**(ವರದಿ: ಹ. ಅಬ್ದುಲ್ಲಾ ಬಿನ್ ಅಬ್ಬಾಸ್ ಮತ್ತು ಹ. ಮೈಮೂನ(ರ)- ಬುಖಾರಿ)**

ಅರ್ಥಾತ್ ತುಪ್ಪವು ಗಟ್ಟಿಯಾಗಿದ್ದರೆ ಮಲಿನವಾಗಿರಬಹುದೆಂದು ಸಂಶಯವಿರುವಷ್ಟು ತುಪ್ಪ ಎಸೆದರೆ ಸಾಕಾಗುವುದು. ಆದರೆ ಕರಗಿದ ತುಪ್ಪ ಅಥವಾ ಎಣ್ಣೆಗೆ ಮಲಿನ ವಸ್ತು ಬಿದ್ದರೆ ಅದು ಪೂರ್ಣವಾಗಿ ಮಲಿನವಾಗುತ್ತದೆಂಬುದೇ ಹೆಚ್ಚಿನ ಕರ್ಮಶಾಸ್ತ್ರಜ್ಞರ ಅಭಿಪ್ರಾಯ.

ಹನಫೀ ಕರ್ಮಶಾಸ್ತ್ರದಂತೆ ತುಪ್ಪ ಅಥವಾ ಎಣ್ಣೆಯಲ್ಲಿ ಮೂರು ಸಲ ನೀರು ಹಾಕಿ ಹೊರ ಚೆಲ್ಲಿದರೆ ಅದು ಶುದ್ಧವಾಗುತ್ತದೆ ಅಥವಾ ತಳದಲ್ಲಿ ರಂಧ್ರವಿರುವ ಒಂದು ಪಾತ್ರೆ ತೆಗೆದು ರಂಧ್ರವನ್ನು ಯಾವುದಾದರೂ ವಸ್ತುವಿನಿಂದ ಮುಚ್ಚಿ ಬಿಡಬೇಕು. ತರುವಾಯ ಅದರಲ್ಲಿ ತುಪ್ಪ ಅಥವಾ ಎಣ್ಣೆ ಹಾಕಿ ಮೇಲೆ ನೀರು ಹಾಕಬೇಕು. ತುಪ್ಪ ಅಥವಾ ಎಣ್ಣೆ ಮೇಲೆ ಬಂದ ನಂತರ ರಂಧ್ರದ ಮುಖಾಂತರ ನೀರು ತೆಗೆದು ಬಿಡಬೇಕು. ಈ ವಿಧಾನದಿಂದಲೂ ಅದನ್ನು ಶುದ್ಧ ಮಾಡಬಹುದು.

**(ಅಲ್ ಫಿಕ್ಹ್ ಅಲಲ್ ಮದಾಹಿಬಲ್ ಅರ್‌ಬಅ- ಭಾಗ-1, ಪುಟ:22)**

**4. ಸತ್ತ ಪ್ರಾಣಿಯ ಚರ್ಮ:** ಸತ್ತ ಪ್ರಾಣಿಯ ಚರ್ಮವು ಹದ ಮಾಡುವುದರಿಂದ ಶುದ್ಧವಾಗುತ್ತದೆ. ಆ ಬಳಿಕ ಅದನ್ನು ಯಾವುದೇ ರೀತಿಯಲ್ಲಿ ಉಪಯೋಗಿಸಬಹುದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಹದ ಮಾಡುವುದರಿಂದ ಚರ್ಮವು ಶುದ್ಧವಾಗುತ್ತದೆ."

**(ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್)**

**5. ಕನ್ನಡಿ, ಖಡ್ಗ ಇತ್ಯಾದಿ:** ಇಂತಹ ವಸ್ತುಗಳಿಗೆ ಮಾಲಿನ್ಯ ತಾಗಿದರೆ ಅದರ ಕಲೆಯು ಇಲ್ಲದಾಗುವಷ್ಟು ಒರೆಸಿದರೆ ಸಾಕಾಗುವುದು. ಸಹಾಬಿಗಳು ಖಡ್ಗಗಳನ್ನು ಧರಿಸಿಯೇ ನಮಾಝ್ ಮಾಡುತ್ತಿದ್ದರು. ಅದಕ್ಕೆ ತಾಗಿದ ರಕ್ತವನ್ನು ಒರೆಸಿ ಬಿಡುತ್ತಿದ್ದರು. ಈ ಬಗ್ಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ.

**6. ಪಾದರಕ್ಷೆ:** ಪಾದರಕ್ಷೆಗೆ ಏನಾದರೂ ಮಾಲಿನ್ಯ ತಾಗಿದರೆ ಅದು ಒಣಗಿದ್ದಾಗಿದ್ದರೆ ನೆಲಕ್ಕೆ ಒರೆಸಿದರೆ ಶುದ್ಧವಾಗುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು: "ನಿಮ್ಮ ಪೈಕಿ ಯಾರದಾದರೂ ಪಾದರಕ್ಷೆಗೆ ಮಾಲಿನ್ಯ ತಾಗಿದರೆ ಮಣ್ಣು ಅದನ್ನು ಶುದ್ಧಗೊಳಿಸುತ್ತದೆ."

**(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)**

# ನೀರಿನ ವಿಧಿಗಳು

ನೀರು ಎಲ್ಲ ಕರ್ಮಶಾಸ್ತ್ರಜ್ಞರ ಪ್ರಕಾರ ಸ್ವಯಂ ಶುದ್ಧವೂ(ತಾಹಿರ್) ಶುದ್ಧ ಮಾಡುವಂತಹದ್ದೂ(ಮುತಹ್ಹರ್) ಆಗಿದೆ. ಇದರಲ್ಲಿ ಭೂಮಿಯಿಂದ ಹೊರಡುವ ಮತ್ತು ಆಕಾಶದಿಂದ ಸುರಿಯುವ ನೀರು ಸೇರಿದೆ. ನೀರಿನ ಐದು ವಿಧಗಳಿವೆ. ಅವುಗಳನ್ನು ಶುದ್ಧ-ಅಶುದ್ಧ ಎಂಬ ದೃಷ್ಟಿಯಲ್ಲಿ ಇಲ್ಲಿ ವಿವರಿಸಲಾಗುತ್ತಿದೆ:

### 1. ಸಮುದ್ರ ಮತ್ತು ನದಿಯ ನೀರು

ಈ ನೀರು ತಾಹಿರ್ ಮತ್ತು ಮುತಹ್ಹರ್ ಆಗಿದೆ.

"ಒಬ್ಬರು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದರು- ನಾವು ಸಮುದ್ರದ ಪ್ರಯಾಣ ಮಾಡುತ್ತೇವೆ. ನಮ್ಮ ಬಳಿ ಸ್ವಲ್ಪವೇ ನೀರಿರುತ್ತದೆ. ಅದನ್ನು ನಾವು ವುಝೂ ಮಾಡಲು ಬಳಸಿದರೆ ದಾಹದಿಂದ ಬಳಲಬೇಕಾದೀತು. ನಾವು ಸಮುದ್ರದ ನೀರಿನಿಂದ ವುಝೂ ಮಾಡಬಹುದೆ? ಆಗ ಪ್ರವಾದಿ(ಸ) ಹೇಳಿದರು- ಅದು ಶುದ್ಧವಾಗಿದೆ ಮತ್ತು ಅದರ ಸತ್ತ ಮೀನು ಧರ್ಮಸಮ್ಮತವಾಗಿದೆ."

(ವರದಿ: ಅಬೂ ಹುರೈರಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

ಇದೇ ರೀತಿ ಬಹಳ ಸಮಯದಿಂದ ಒಂದೆಡೆ ಸೇರಿರುವ ನೀರು ಕೂಡಾ ಶುದ್ಧವಾಗಿದೆ. ಆದರೆ ಅದರಲ್ಲಿ ಯಾವುದೇ ಮಲಿನ ವಸ್ತು ಬಿದ್ದಿರಬಾರದು. ಕೇವಲ ಮರದ ಎಲೆಗಳು ಅಥವಾ ಮಣ್ಣು ಬೀಳುದರಿಂದ ಅದು ಅಶುದ್ಧವಾಗುವುದಿಲ್ಲ.

### 2. ಸಾಬೂನು ಇತ್ಯಾದಿ ಬೆರೆತ ನೀರು

ನೀರಿನ ಬಣ್ಣ, ವಾಸನೆ ಮತ್ತು ರುಚಿಯ ಪೈಕಿ ಯಾವುದಾದರೂ ವ್ಯತ್ಯಾಸವಾಗದಿದ್ದರೆ ಅದು ಶುದ್ಧವಾಗಿದೆ.

"ಪ್ರವಾದಿ(ಸ) ಮತ್ತು ಹ. ಮೈಮೂನ(ರ) ನಾದಿದ ಹಿಟ್ಟಿನ ಅಂಶ ಸೇರಿದ್ದ ಪಾತ್ರೆಯ ನೀರಿನಿಂದ ಸ್ನಾನ ಮಾಡಿದ್ದರು."

(ವರದಿ: ಹ. ಉಮ್ಮು ಹಾನಿ(ರ)- ಅಹ್ಮದ್, ನಸಾಈ, ಇಬ್ನು ಖುಝೈಮ)

ನೀರಿನ ಬಣ್ಣ, ವಾಸನೆ ಮತ್ತು ರುಚಿಯ ಪೈಕಿ ಯಾವುದು ಬದಲಾಗಿದ್ದರೂ ಅದು ಎಲ್ಲ ಕರ್ಮಶಾಸ್ತ್ರಜ್ಞರ ಪ್ರಕಾರವೂ ತಾಹಿರ್ ಆಗಿದೆ. ಇಮಾಮ್ ಶಾಫಿಈಯವರ(ರ) ಪ್ರಕಾರ ಅದರಿಂದ ವುಝೂ ಆಗುವುದಿಲ್ಲ. ಇಮಾಮ್ ಅಬೂ ಹನೀಫಾರ(ರ) ಪ್ರಕಾರ ವುಝೂ

ಆಗುತ್ತದೆ. ಆದರೆ ಕಾಯಿಸಿದಾಗ ಅದರಲ್ಲೇನಾದರೂ ಮಾರ್ಪಾಟು ಆದರೆ ಅಂತಹ ನೀರಿನಿಂದ ವುಝೂ ಆಗುವುದಿಲ್ಲ.

### 3. ಮಲಿನ ವಸ್ತು ಬಿದ್ದ ನೀರು

ಮಲಿನ ವಸ್ತು ಬಿದ್ದುದರಿಂದಾಗಿ ನೀರಿನ ಬಣ್ಣ, ವಾಸನೆ ಮತ್ತು ರುಚಿಯ ಪೈಕಿ ಯಾವುದಾದರೂ ಬದಲಾವಣೆಯಾಗಿದ್ದರೆ ಅದು ಅಶುದ್ಧವೆಂಬುದು ಸರ್ವಸಮ್ಮತ ವಿಷಯ.

ಮಲಿನ ವಸ್ತು ಬಿದ್ದುದರಿಂದ ಬಣ್ಣ, ವಾಸನೆ ಮತ್ತು ರುಚಿಯಲ್ಲಿ ಯಾವುದೇ ಬದಲಾವಣೆಯಾಗದಿದ್ದರೆ ಮತ್ತು ನೀರು ಎರಡು ದೊಡ್ಡ ಬಿಂದಿಗೆಯಷ್ಟು ಇದ್ದರೆ ಶುದ್ಧವಾಗಿರುತ್ತದೆ. ಅದಕ್ಕಿಂತ ಕಡಿಮೆ ಇದ್ದರೆ ಅಶುದ್ಧವಾಗುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀರು ಹಜರ್(ನೀರು ತುಂಬಿದ ಚರ್ಮದ ಚೀಲ ಬರುತ್ತಿದ್ದ ಅರೇಬಿಯಾದ ಒಂದು ಪ್ರಸಿದ್ಧ ಸ್ಥಳ)ನ ಎರಡು ಚೀಲ ಅಥವಾ ಅದಕ್ಕಿಂತ ಹೆಚ್ಚಿದ್ದರೆ ಅದು ಮಲಿನವಾಗುವುದಿಲ್ಲ."

**(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಮುಸ್ನದ್ ಅಹ್ಮದ್, ತಿರ್ಮಿದಿ, ನಸಾಈ)**

ಇಮಾಮ್ ಶಾಫಿಈಯವರ(ರ) ಅಭಿಮತವೂ ಇದುವೇ ಆಗಿದೆ.

ಆದರೆ ಇಮಾಮ್ ಅಬೂ ಹನೀಫಾರ(ರ) ಅಭಿಪ್ರಾಯದಂತೆ ನೀರಿನಲ್ಲಿ ಮಲಿನ ವಸ್ತು ಬಿದ್ದು ಅದು ನೀರಿನಲ್ಲಿ ಹರಡಿದೆ ಎಂಬ ಬಲವಾದ ಗುಮಾನಿ ಇದ್ದರೆ ಆ ನೀರು ಅಶುದ್ಧವಾಗುತ್ತದೆ. ಅದರಿಂದ ಅದರ ಬಣ್ಣ, ವಾಸನೆ ಮತ್ತು ರುಚಿಯಲ್ಲಿ ಬದಲಾವಣೆಯಾಗದಿದ್ದರೂ ಸರಿಯೆ. ಈ ನೀರನ್ನು ಬಳಸುವುದು ಮಾಲಿನ್ಯವನ್ನು ಬಳಸಿದಂತೆ ಮತ್ತು ಮಾಲಿನ್ಯದಿಂದ ದೂರವಿರಲು ಅಲ್ಲಾಹನು ಆಜ್ಞಾಪಿಸಿದ್ದಾನೆ ಎಂದು ಅವರು ಹೇಳುತ್ತಾರೆ.

### 4. ಬಳಸಲ್ಪಟ್ಟ ನೀರು

ಬಳಸಲ್ಪಟ್ಟ ನೀರೆಂದರೆ ಒಮ್ಮೆ ವುಝೂ ಅಥವಾ ಸ್ನಾನಕ್ಕೆ ಬಳಸಲ್ಪಟ್ಟ ನೀರು. ಈ ನೀರು ತಾಹಿರ್ ಆಗಿದೆ. ಮುತಹ್ಹರ್ ಅಲ್ಲ. ಆದ್ದರಿಂದ ವುಝೂ ಮತ್ತು ಸ್ನಾನದ ಹೊರತು ಇತರ ಅಗತ್ಯಗಳಿಗೆ ಅದನ್ನು ಬಳಸಬಹುದು.

ಹ. ಜಾಬಿರ್(ರ) ಹೇಳುತ್ತಾರೆ. "ನಾನು ಅಸ್ವಸ್ಥನಾಗಿದ್ದೆ. ಯಾವುದೇ ಮಾತು ನನಗೆ ತಿಳಿಯುತ್ತಿರಲಿಲ್ಲ. ಪ್ರವಾದಿ(ಸ) ನನ್ನನ್ನು ನೋಡಲು ಬಂದರು. ಅವರು ವುಝೂ ಮಾಡಿದರು ಮತ್ತು ವುಝೂವಿನ ನೀರನ್ನು ನನ್ನ ಮೇಲೆ ಹಾಕಿದರು."

**(ಬುಖಾರಿ, ಮುಸ್ಲಿಮ್)**

ವುಝೂವಿನಲ್ಲಿ ಬಳಸಲ್ಪಟ್ಟುದರಿಂದ ನೀರು ಅಶುದ್ಧವಾಗುವುದಿಲ್ಲವೆಂದು ಈ ಹದೀಸ್‌ನಿಂದ ತಿಳಿದು ಬರುತ್ತದೆ. ಆದರೆ ಇತರ ಕೆಲವು ಹದೀಸ್‌ಗಳಲ್ಲಿ ಸ್ನಾನ ಅಥವಾ

ವುಝೂ ಮಾಡಿದ ನೀರಿನಿಂದ ಪುನಃ ವುಝೂ ಅಥವಾ ಸ್ನಾನ ಮಾಡುವುದನ್ನು ತಡೆದಿರುವರು. ಆದ್ದರಿಂದ ಇಂತಹ ನೀರು ತಾಹಿರ್ ಆಗಿದ್ದರೂ ಮುತಹ್ಹರ್ ಅಲ್ಲ ಎಂದು ತಿಳಿಯುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರೆಂದು ಹ. ಅಬೂ ಹುರೈರಾ(ರ) ವರದಿ ಮಾಡಿರುವರು: "ನಿಮ್ಮ ಪೈಕಿ ಯಾರೂ ಜನಾಬತ್‌ನ ಸ್ಥಿತಿಯಲ್ಲಿ ನಿಂತ ನೀರಿನಲ್ಲಿ ಸ್ನಾನ ಮಾಡಬಾರದು."

"ಹ. ಅಬೂ ಹುರೈರಾ(ರ) ಈ ಹದೀಸ್ ಹೇಳುವಾಗ ಜನರು ಹೀಗೆ ವಿಚಾರಿಸಿದರು- ಹಾಗಾದರೆ ಅವನೇನು ಮಾಡಬೇಕು? ಆಗ ಅಬೂ ಹುರೈರಾ(ರ) ಹೇಳಿದರು- ಅವನು ಅದನ್ನು ಕೈಯಿಂದ ತೆಗೆದು ಸ್ನಾನ ಮಾಡಬೇಕು."

(ಮುಸ್ಲಿಮ್, ಇಬ್ನು ಮಾಜಃ)

ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರದ ವಿಧಿಯೂ ಇದುವೇ ಆಗಿದೆ.

### 5. ಎಂಜಲು(ಕುಡಿದು ಬಿಟ್ಟ) ನೀರು

1) ಮನುಷ್ಯನು (ಅವನು ಮುಸ್ಲಿಮ್ ಆಗಿದ್ದರೂ-ಅಲ್ಲದಿದ್ದರೂ) ಕುಡಿದು ಉಳಿದ ನೀರು ಶುದ್ಧ(ತಾಹಿರ್ ಮತ್ತು ಮುತಹ್ಹರ್)ವಾಗಿದೆ. ಆ ನೀರನ್ನು ಕುಡಿದ ವ್ಯಕ್ತಿ ಜನಾಬತ್‌ನ ಸ್ಥಿತಿಯಲ್ಲಿದ್ದರೂ ಮುಟ್ಟಿನ ಸ್ಥಿತಿಯಲ್ಲಿದ್ದರೂ ಸರಿಯೆ.

ಹ. ಆಯಿಶಾ(ರ) ಹೇಳುತ್ತಾರೆ: "ನಾನು ಮುಟ್ಟಿನ ಸ್ಥಿತಿಯಲ್ಲಿರುವಾಗ ಪಾತ್ರೆಯಿಂದ ನೀರು ಕುಡಿದು ಪ್ರವಾದಿವರ್ಯರಿಗೆ(ಸ) ನೀಡುತ್ತಿದ್ದೆ. ಆಗ ಅವರು ಪಾತ್ರೆಗೆ ನಾನು ಬಾಯಿ ಹಚ್ಚಿದಲ್ಲೇ ಬಾಯಿ ಹಚ್ಚಿ ನೀರು ಕುಡಿಯುತ್ತಿದ್ದರು." (ಮುಸ್ಲಿಮ್)

2) ಧರ್ಮಸಮ್ಮತ ಜಾನುವಾರುಗಳ ಎಂಜಲು ನೀರು ಕೂಡಾ ಶುದ್ಧವಾಗಿದೆ ಎಂಬುದು ಸರ್ವಸಮ್ಮತ ವಿಷಯ. ಏಕೆಂದರೆ ಅದರ ಮಾಂಸವು ತಿನ್ನಲು ಧರ್ಮಸಮ್ಮತವಾಗಿದ್ದು ಅದರ ಜೊಲ್ಲು ಕೂಡಾ ಶುದ್ಧವಾಗಿದೆ.

(ಅಲ್ ಮುಗ್ನೀ- ಭಾಗ-1, ಪುಟ:44)

3) ಹೇಸರಗತ್ತೆ, ಕತ್ತೆ ಮತ್ತು ಬೇಟೆ ಪಕ್ಷಿಗಳ ಎಂಜಲು ನೀರು ಕೂಡಾ ಶುದ್ಧವಾಗಿದೆ.

(ತಾಹಿರ್ ಮತ್ತು ಮುತಹ್ಹರ್)

"ಒಬ್ಬ ವ್ಯಕ್ತಿ ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದರು- 'ನಾವು ಕತ್ತೆಯ ಎಂಜಲು ನೀರಿನಿಂದ ವುಝೂ ಮಾಡಬಹುದೆ?' ಆಗ ಪ್ರವಾದಿ(ಸ) ಹೇಳಿದರು- ಮಾಡಬಹುದು. ಮಾತ್ರವಲ್ಲ, ಎಲ್ಲ ಕ್ರೂರ ಮೃಗಗಳ ಎಂಜಲಿನಿಂದಲೂ" ಎಂದು ಉತ್ತರಿಸಿದರು.

(ವರದಿ: ಹ. ಜಾಬಿರ್(ರ)- ಮುಸ್ನದ್ ಇಮಾಮ್ ಶಾಫಿಈ, ದಾರಕುತ್ನಿ, ಬೈಹಕಿ)

ಇದುವೇ ಇಮಾಮ್ ಶಾಫಿಈಯವರ(ರ) ಅಭಿಪ್ರಾಯವಾಗಿದೆ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಕ್ರೂರ ಮೃಗಗಳ ಎಂಜಲು ನೀರು ಅಶುದ್ಧವಾಗಿದೆ. ಅವರ ಅಭಿಪ್ರಾಯದಂತೆ ಮೇಲಿನ ಹದೀಸ್‌ನಲ್ಲಿ ಉಲ್ಲೇಖಿತವಾಗಿರುವುದು ಹೆಚ್ಚಿನ ಪ್ರಮಾಣದ ನೀರಿನ ಕುರಿತಾಗಿದೆ.

4) ಬೆಕ್ಕಿನ ಎಂಜಲು ನೀರು ಕೂಡಾ ಶುದ್ಧವಾಗಿದೆ. ಆದರೆ ಇಮಾಮ್ ಅಬೂ ಹನೀಫಾರವರು(ರ) ಬೆಕ್ಕನ್ನೂ ಕ್ರೂರ ಮೃಗದ ಸಾಲಿಗೆ ಸೇರಿಸಿ ಅದರ ಎಂಜಲನ್ನು ಅಶುದ್ಧವೆನ್ನುತ್ತಾರೆ.

5) ನಾಯಿಯ ಎಂಜಲು ನೀರು ಅಶುದ್ಧವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು: ನಿಮ್ಮ ಪೈಕಿ ಯಾರದಾದರೂ ಪಾತ್ರೆಗೆ ನಾಯಿ ಬಾಯಿ ಹಾಕಿದರೆ ಅದನ್ನವನು ಏಳು ಸಲ ತೊಳೆಯಲಿ. ಮೊದಲ ಸಲ ಮಣ್ಣಿನಿಂದ ಮತ್ತು ಉಳಿದ ಆರು ಸಲ ನೀರಿನಿಂದ.

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಮುಸ್ನದ್ ಅಹ್ಮದ್)

## ಮಲ-ಮೂತ್ರ ವಿಸರ್ಜನೆ

ಮಲ-ಮೂತ್ರ ವಿಸರ್ಜನೆಯ ಕುರಿತು ಈ ಕೆಳಗಿನ ಶಿಷ್ಟಾಚಾರಗಳು ಹದೀಸ್‌ಗಳಿಂದ ತಿಳಿದು ಬರುತ್ತವೆ:

1. ಮಲ-ಮೂತ್ರ ವಿಸರ್ಜನೆಗೆ ಕುಳಿತುಕೊಳ್ಳಲು, ಯಾರಿಗೂ ಕಾಣಿಸದಂತಹ ಸ್ಥಳವನ್ನು ಹುಡುಕಬೇಕು. ಬಯಲಿನಲ್ಲಿ ಮಲ-ಮೂತ್ರ ವಿಸರ್ಜಿಸುವುದಾದರೆ ಜನರಿಗೆ ಕಾಣಿಸದಷ್ಟು ದೂರ ಹೋಗಬೇಕು.

"ಪ್ರವಾದಿ(ಸ) ಮಲ-ಮೂತ್ರ ವಿಸರ್ಜನೆಗೆ ಯಾರಿಗೂ ಕಾಣಿಸದಷ್ಟು ದೂರ ಹೋಗುತ್ತಿದ್ದರು." (ವರದಿ: ಜಾಬಿರ್ ಬಿನ್ ಅಬ್ದುಲ್ಲಾ(ರ)- ಅಬೂ ದಾವೂದ್)

2. ಮಲ-ಮೂತ್ರ ವಿಸರ್ಜನೆಯ ವೇಳೆ ಅಲ್ಲಾಹನ ಹೆಸರಿರುವ ಯಾವುದೇ ವಸ್ತುವನ್ನು ತನ್ನ ಜೊತೆ ಇಟ್ಟುಕೊಳ್ಳಬಾರದು. .

"ಪ್ರವಾದಿವರ್ಯರ(ಸ) ಕೈಯಲ್ಲಿ 'ಮುಹಮ್ಮದರ್‌ರಸೂಲುಲ್ಲಾಹ್' ಎಂಬ ಮುದ್ರೆ ಇರುವ ಒಂದು ಉಂಗುರವಿತ್ತು. ಮಲ-ಮೂತ್ರ ವಿಸರ್ಜನೆಗೆ ಹೋಗುವಾಗ ಅವರು ಅದನ್ನು ತೆಗೆದಿರಿಸುತ್ತಿದ್ದರು."

(ವರದಿ: ಹ. ಅನಸ್(ರ)- ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ)

3. ಮಲ-ಮೂತ್ರ ವಿಸರ್ಜನೆಗೆ ಶೌಚಾಲಯಕ್ಕೆ ಪ್ರವೇಶಿಸುವಾಗ ಮೊದಲು ಎಡಕಾಲನ್ನಿಟ್ಟು, ಈ ರೀತಿ ಪ್ರಾರ್ಥಿಸಬೇಕು.

اَللّٰهُمَّ اِنِّي اَعُوْذُ بِكَ مِنَ الْخُبُثِ وَالْخَبَائِثِ

(بخاری، مسلم، ابوداود، ترمذی، نسائی، ابن ماجة)

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಖುಬುಸಿ ವಲ್ ಖಬಾಯಿಸ್"

ಅರ್ಥ: ಓ ಅಲ್ಲಾಹನೇ, ನಾನು ಗಂಡು ಮತ್ತು ಹೆಣ್ಣು ಶೈತಾನರಿಂದ ನಿನ್ನ ಅಭಯ ಯಾಚಿಸುತ್ತೇನೆ.

(ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

4. ಶೌಚಾಲಯದಲ್ಲಿ ದೇವನಾಮ ಸ್ಮರಣೆಯಾಗಲೀ ಇತರ ಮಾತುಕತೆಯಾಗಲೀ ಮಾಡಬಾರದು. ಯಾರಾದರೂ ಸಲಾಮ್ ಹೇಳಿದರೆ ಅದಕ್ಕೆ ಉತ್ತರಿಸಲೂಬಾರದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಇಬ್ಬರು ಮಲ-ಮೂತ್ರ ವಿಸರ್ಜನೆಗೆ ಹೋದಾಗ ಪರಸ್ಪರ ಮಾತಾಡಬಾರದು. ಏಕೆಂದರೆ ಇದು ಅಲ್ಲಾಹನಿಗೆ ಅಪ್ರಿಯವಾಗಿದೆ."

(ವರದಿ: ಹ. ಅಬೂ ಸಈದ್ ಖುದ್ರೀ(ರ)- ಮುಸ್ನದ್ ಅಹ್ಮದ್, ಅಬೂ ದಾವೂದ್, ಇಬ್ನು ಮಾಜ)

"ಪ್ರವಾದಿ(ಸ) ಮೂತ್ರ ವಿಸರ್ಜನೆಗೆ ಕುಳಿತಿದ್ದರು. ಒಬ್ಬ ವ್ಯಕ್ತಿ ಅಲ್ಲಿಂದ ಹಾದು ಹೋದಾಗ ಅವರಿಗೆ ಸಲಾಮ್ ಹೇಳಿದ. ಆದರೆ ಪ್ರವಾದಿ(ಸ) ಅವನ ಸಲಾಮ್‌ಗೆ ಉತ್ತರಿಸಲಿಲ್ಲ."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಮುಸ್ಲಿಮ್, ತಿರ್ಮಿದಿ,
ಅಬೂ ದಾವೂದ್, ನಸಾಈ, ಇಬ್ನು ಮಾಜಃ)

5. ಮಲ-ಮೂತ್ರ ವಿಸರ್ಜನೆಯ ವೇಳೆ ಕಿಬ್ಲಾದ ಕಡೆಗೆ ಮುಖ ಮಾಡಲೂಬಾರದು. ಬೆನ್ನು ಹಾಕಲೂಬಾರದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ಮಲ-ಮೂತ್ರ ವಿಸರ್ಜನೆಗೆ ಕುಳಿತಾಗ ಕಿಬ್ಲಾದ ಕಡೆಗೆ ಮುಖ ಅಥವಾ ಬೆನ್ನು ಹಾಕದಿರಲಿ."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಮುಸ್ನದ್ ಅಹ್ಮದ್)

ಆದರೆ ಮನೆಯೊಳಗಿನ ಶೌಚಾಲಯಗಳಲ್ಲಿ ಹಾಗೆ ಮಾಡಬಹುದು.

"ಒಂದು ದಿನ ನಾನು ನನ್ನ ಸೋದರಿ ಹಫ್ಸಾರ(ರ) ಮನೆಗೆ ಹೋದಾಗ ಪ್ರವಾದಿ ವರ್ಯರು(ಸ) ಸಿರಿಯಾದ ಕಡೆಗೆ ಮುಖ ಮತ್ತು ಕಅಬಾದ ಕಡೆಗೆ ಬೆನ್ನು ಹಾಕಿ ಶೌಚಕ್ಕೆ ಕುಳಿತಿದ್ದುದನ್ನು ಕಂಡೆ."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಬುಖಾರಿ, ಮುಸ್ಲಿಮ್,
ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಇಮಾಮ್ ಶಾಫಿಈಯವರ(ರ) ಅಭಿಪ್ರಾಯ ಇದುವೇ ಆಗಿದೆ.

ಆದರೆ ಇಮಾಮ್ ಅಬೂ ಹನೀಫಾ(ರ) ಎಲ್ಲ ಸ್ಥಿತಿಯಲ್ಲೂ ಕಿಬ್ಲಾಕ್ಕೆ ಮುಖ ಅಥವಾ ಬೆನ್ನು ಹಾಕುವುದು ನಿಷಿದ್ಧವೆನ್ನುತ್ತಾರೆ. ಏಕೆಂದರೆ ಪ್ರವಾದಿ(ಸ) ಅದರಿಂದ ತಡೆದಿರುವರು. ಮೇಲಿನ ಹದೀಸ್‌ನಲ್ಲಿ ಉಲ್ಲೇಖಿಸಲ್ಪಟ್ಟ ಘಟನೆಯು ಯಾವುದಾದರೂ ಅನಿವಾರ್ಯತೆಯಿಂದ ಆಗಿರಬಹುದೆಂಬುದು ಅವರ ಅಭಿಪ್ರಾಯ.

6. ಮಲ-ಮೂತ್ರ ವಿಸರ್ಜನೆಗೆ ಮೆದುವಾದ ಮತ್ತು ತಗ್ಗಾದ ನೆಲವನ್ನು ಹುಡುಕಬೇಕು. ಇದರಿಂದ ಮೂತ್ರದ ಹನಿಗಳು ಮೈಗೆ ತಾಗುವುದು ತಪ್ಪುತ್ತದೆ.

"ಪ್ರವಾದಿ(ಸ) ಒಂದು ಗೋಡೆಯ ಬಳಿ ಬಂದು ಮೆದುವಾದ ಜಾಗ ನೋಡಿ ಮೂತ್ರ ಮಾಡಿದರು. ಅನಂತರ ಹೀಗೆ ಹೇಳಿದರು- ನಿಮ್ಮ ಪೈಕಿ ಯಾರಾದರೂ ಮೂತ್ರ ವಿಸರ್ಜನೆ ಮಾಡುವಾಗ ಮೆದುವಾದ ನೆಲವನ್ನು ಹುಡುಕಲಿ."

(ವರದಿ: ಹ. ಅಬೂ ಮೂಸಾ(ರ)- ಮುಸ್ನದ್ ಅಹ್ಮದ್, ಅಬೂ ದಾವೂದ್)

7. ಯಾವುದೇ ಪ್ರಾಣಿಯ ಬಿಲದಲ್ಲಿ ಮೂತ್ರ ಮಾಡಬಾರದು.

"ಯಾವುದೇ ಪ್ರಾಣಿಯ ಬಿಲದಲ್ಲಿ ಮೂತ್ರ ಮಾಡುವುದರಿಂದ ಪ್ರವಾದಿ(ಸ) ತಡೆದಿರುವರು."

(ವರದಿ: ಹ. ಅಬ್ದುಲ್ಲಾ ಬಿನ್ ಸರ್ಜಸ್(ರ)- ಮುಸ್ನದ್ ಅಹ್ಮದ್, ಅಬೂ ದಾವೂದ್, ನಸಾಈ, ಹಾಕಿಮ್, ಬೈಹಕಿ, ಇಬ್ನು ಖುಝೈಮ)

8. ಜನರು ಕುಳಿತುಕೊಳ್ಳುವ ಅಥವಾ ನಡೆದಾಡುವ ಸ್ಥಳದಲ್ಲಿ ಮಲ-ಮೂತ್ರ ವಿಸರ್ಜನೆ ಮಾಡಬಾರದು.

"ಪ್ರವಾದಿ(ಸ) ಹೀಗೆ ಹೇಳಿರುವರು- 'ಎರಡು ಶಪಿಸುವ ವಸ್ತುಗಳಿಂದ ದೂರವಿರಿ.' ಸಹಾಬಿಗಳು ವಿಚಾರಿಸಿದರು- 'ಪ್ರವಾದಿವರ್ಯರೇ(ಸ)! ಆ ಎರಡು ಶಪಿಸುವ ವಸ್ತುಗಳು ಯಾವುವು?' 'ಅದು ಜನರು ಕುಳಿತುಕೊಳ್ಳುವ ಅಥವಾ ನಡೆದಾಡುವ ಸ್ಥಳದಲ್ಲಿ ಮಲ-ಮೂತ್ರ ವಿಸರ್ಜನೆ ಮಾಡುವುದಾಗಿದೆ' ಎಂದು ಪ್ರವಾದಿ(ಸ) ಉತ್ತರಿಸಿದರು."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಮುಸ್ನದ್ ಅಹ್ಮದ್, ಅಬೂ ದಾವೂದ್)

9. ಬಚ್ಚಲು ಕೊಟ್ಟಿಗೆ(ಸ್ನಾನ ಗೃಹ)ಯಲ್ಲಿ ಮೂತ್ರ ಮಾಡಬಾರದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರೂ ಸ್ನಾನಗೃಹದಲ್ಲಿ ಮೂತ್ರ ಮಾಡದಿರಲಿ."

(ವರದಿ: ಅಬ್ದುಲ್ಲಾ ಬಿನ್ ಮುಗ್‌ಫಲ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ,)

ಆದರೆ ಸ್ನಾನ ಗೃಹದ ನೆಲವು ಗಟ್ಟಿಯಾಗಿದ್ದರೆ ಮೂತ್ರ ವಿಸರ್ಜನೆ ಮಾಡಿ ಮೇಲಿಂದ ನೀರು ಹೊಯ್ದು ಬಿಟ್ಟರೆ ಅದು ಆಕ್ಷೇಪಾರ್ಹವಲ್ಲವೆಂಬುದು ಎಲ್ಲರ ಅಭಿಮತ.

10. ಹರಿಯುವ ಅಥವಾ ನಿಂತ ನೀರಿನಲ್ಲಿ ಮೂತ್ರ ಮಾಡಬಾರದು.

"ಪ್ರವಾದಿ(ಸ) ಹರಿಯುವ ಮತ್ತು ನಿಂತ ನೀರಿನಲ್ಲಿ ಮೂತ್ರ ಮಾಡುವುದರಿಂದ ತಡೆದಿರುವರು." (ವರದಿ: ಹ. ಜಾಬಿರ್(ರ)- ಮುಸ್ಲಿಮ್, ಅಹ್ಮದ್, ನಸಾಈ, ಇಬ್ನು ಮಾಜಃ)

11. ನಿಂತುಕೊಂಡು ಮೂತ್ರ ವಿಸರ್ಜನೆ ಮಾಡಬಾರದು. ಏಕೆಂದರೆ ಅದರಿಂದ ಶರೀರಕ್ಕೆ ಮೂತ್ರದ ಹನಿಗಳು ತಾಗುವ ಸಾಧ್ಯತೆಯಿದೆ. ಆದರೆ ಅನಿವಾರ್ಯತೆಯಿದ್ದು ಮೂತ್ರದ ಹನಿಗಳು ದೇಹಕ್ಕೆ ತಾಗುವ ಸಾಧ್ಯತೆ ಇಲ್ಲದಿದ್ದರೆ ನಿಂತುಕೊಂಡು ಮೂತ್ರ ಮಾಡುವುದು ಸಮ್ಮತವಾಗಿದೆ.

"ಪ್ರವಾದಿ(ಸ) ಮಲಿನ ವಸ್ತುಗಳ ಒಂದು ರಾಶಿಯ ಬಳಿ ಹೋದರು ಮತ್ತು ನಿಂತು ಕೊಂಡು ಮೂತ್ರ ಮಾಡಿದರು."

(ವರದಿ: ಹ. ಹುದೈಫಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ಅಹ್ಮದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

12. ಮಲ-ಮೂತ್ರ ವಿಸರ್ಜನೆಯ ಬಳಿಕ ಮಾಡುವ ಶೌಚಾಚಾರವನ್ನು ಕೇವಲ ನೀರಿನಿಂದ ಅಥವಾ ಮಣ್ಣಿನ ಹೆಂಟೆಯಿಂದ ಮಾಡಬಹುದು. ಅಥವಾ ಇವೆರಡನ್ನೂ ಉಪಯೋಗಿಸಿ ಮಾಡಬಹುದು. ಪ್ರವಾದಿ(ಸ) ಈ ಎಲ್ಲ ವಿಧಾನಗಳಿಂದಲೂ ಶೌಚಾಚಾರ ಮಾಡುತ್ತಿದ್ದರು.

ಪ್ರವಾದಿ(ಸ) ಹೇಳಿದರು: "ನಿಮ್ಮ ಪೈಕಿ ಯಾರಾದರೂ ಮಲ-ಮೂತ್ರ ವಿಸರ್ಜನೆಗೆ ಹೋದರೆ ಅವನು ಮೂರು ಹೆಂಟೆಗಳಿಂದ ಶೌಚಾಚಾರ ಮಾಡಲಿ. ಏಕೆಂದರೆ ಇದು ಅವನಿಗೆ ಸಾಕಾಗುವುದು." (ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ನಸಾಈ, ದಾರಕುತ್ನಿ)

"ಪ್ರವಾದಿ(ಸ) ಶೌಚಾಲಯಕ್ಕೆ ಪ್ರವೇಶಿಸುವಾಗ ನಾನು ಮತ್ತು ಇನ್ನೊಬ್ಬ ಹುಡುಗ ಒಂದು ಲೋಟೆ ಮತ್ತೊಂದು ಈಟಿ ಹಿಡಿದುಕೊಂಡು ಹೋಗುತ್ತಿದ್ದೆವು. ಪ್ರವಾದಿ(ಸ) ನೀರಿನಿಂದ ಶೌಚ್ಯ ಮಾಡುತ್ತಿದ್ದರು." (ವರದಿ: ಹ. ಅನಸ್(ರ)- ಬುಖಾರಿ, ಮುಸ್ಲಿಮ್)

ಆದರೆ ಹೆಂಟೆ ಮತ್ತು ನೀರುಗಳೆರಡರಿಂದಲೂ ಶೌಚಾಚಾರ ಮಾಡುವುದು ಉತ್ತಮ. ಒಂದು ವೇಳೆ ಎರಡರ ಪೈಕಿ ಒಂದೇ ಸಾಕೆಂದಾದರೆ ನೀರೇ ಉತ್ತಮ.

13. ಶೌಚಾಚಾರಕ್ಕೆ ಬಲಕೈಯನ್ನು ಬಳಸಬಾರದು. "ಒಮ್ಮೆ ಕೆಲವು ಬಹುದೇವಾರಾಧಕರು ಹ. ಸಲ್ಮಾನ್ ಫಾರ್ಸಿಯವರನ್ನು(ರ) ಗೇಲಿ ಮಾಡುತ್ತಾ- ನಿಮ್ಮ ಪ್ರವಾದಿ(ಸ) ನಿಮಗೆ ಮಲ-ಮೂತ್ರ ವಿಸರ್ಜನೆ ಮಾಡುವುದರ ಸಹಿತ ಎಲ್ಲ ವಿಷಯಗಳನ್ನೂ ಕಲಿಸಿದ್ದಾರೆ ಎನ್ನುವಿರಲ್ಲಾ?' ಆಗ ಹ. ಸಲ್ಮಾನ್ ಫಾರ್ಸಿಯವರು ಹೀಗೆಂದರು- ಹೌದು! ನಮ್ಮ ಪ್ರವಾದಿ(ಸ) ನಾವು ಮಲ-ಮೂತ್ರ ವಿಸರ್ಜನೆ ಮಾಡುವಾಗ ಕಿಬ್ಲಾಕ್ಕೆ ಮುಖ ಅಥವಾ ಬೆನ್ನು ಹಾಕಿ ಕುಳಿತಿರುವುದನ್ನು ತಡೆದಿರುವರು. ಅಂತೆಯೇ ಬಲ ಕೈಯಿಂದ ಶೌಚ್ಯ ಮಾಡುವುದರಿಂದ ತಡೆದಿರುವರು. ಮೂರಕ್ಕಿಂತ ಕಡಿಮೆ ಹೆಂಟೆಗಳಿಂದ ಶೌಚಾಚಾರ ಮಾಡುವುದರಿಂದಲೂ ತಡೆದಿರುವರು. ಹಾಗೆಯೇ ಲದ್ದಿ ಅಥವಾ ಎಲುಬಿನಿಂದ ಶೌಚಾಚಾರ ಮಾಡುವುದರಿಂದಲೂ ತಡೆದಿರುವರು."

(ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

14. "ಶೌಚದ ಬಳಿಕ ಕೈಯನ್ನು ನೆಲಕ್ಕೆ ತಿಕ್ಕಿ ಅಥವಾ ಸಾಬೂನಿನಿಂದ ತೊಳೆದು ವಾಸನೆಯನ್ನು ನಿವಾರಿಸಬೇಕು. ಪ್ರವಾದಿ(ಸ) ಶೌಚಾಲಯಕ್ಕೆ ಹೋಗುವಾಗ ಹಿತ್ತಾಳೆಯ ಪಾತ್ರೆಯೊಂದರಲ್ಲಿ ನೀರು ತರುತ್ತಿದ್ದರು. ಅವರು ಶೌಚಾಚಾರ ಮಾಡಿದ ಬಳಿಕ ಕೈಯನ್ನು ನೆಲಕ್ಕೆ ತಿಕ್ಕಿ ತೊಳೆಯುತ್ತಿದ್ದರು."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್, ನಸಾಈ, ಬೈಹಕಿ, ಇಬ್ನು ಮಾಜಃ)

15. ಮೂತ್ರವಿಸರ್ಜನೆಯ ಬಳಿಕ ತನ್ನ ಲುಂಗಿ, ಇಜಾರು ಅಥವಾ ಪ್ಯಾಂಟಿನ ಗುಪ್ತಾಂಗದ ಹತ್ತಿರದ ಭಾಗಕ್ಕೆ ಸ್ವಲ್ಪ ನೀರು ಚಿಮುಕಿಸಿ ಸಂಶಯ ನಿವಾರಿಸಿಕೊಳ್ಳಬೇಕು. "ಮೊಟ್ಟ ಮೊದಲು ಹ. ಜಿಬ್ರೀಲ್(ಅ) ಪ್ರವಾದಿವರ್ಯರ(ಸ) ಬಳಿಗೆ ವಹೀ(ದಿವ್ಯವಾಣಿ) ತಂದಾಗ ಅವರಿಗೆ ವುಝೂ ಮತ್ತು ನಮಾಝ್‌ನ ಕ್ರಮವನ್ನು ಕಲಿಸಿದ್ದರು. ಪ್ರವಾದಿ(ಸ) ವುಝೂ ಮಾಡಿ ಮುಗಿಸಿದ ಬಳಿಕ ಒಂದು ಬೊಗಸೆ ನೀರನ್ನು ತೆಗೆದು ತಮ್ಮ ಗುಪ್ತಾಂಗದ ಭಾಗಕ್ಕೆ ಚಿಮುಕಿಸಿದರು." (ವರದಿ: ಹ. ಝೈದ್ ಬಿನ್ ಹಾರಿಸ(ರ)- ಅಹ್ಮದ್, ದಾರಕುತ್ನಿ)

ಹ. ಅಬ್ದುಲ್ಲಾ ಬಿನ್ ಉಮರ್‌ರವರು(ರ) ತಮ್ಮ ಇಜಾರು ಒದ್ದೆಯಾಗುವ ತನಕವೂ ನೀರು ಚಿಮುಕಿಸುತ್ತಿದ್ದರು.

16. ಶೌಚಾಲಯದಿಂದ ಹೊರ ಬರುವಾಗ ಮೊದಲು ಬಲಕಾಲು ಹೊರಗಿಟ್ಟು ಅನಂತರ ಎಡಕಾಲು ಹೊರಗಿಡಬೇಕು. ಅನಂತರ **'ಗುಫ್‌ರಾನಕ'** (ಓ ಅಲ್ಲಾಹ್! ನಾನು ನಿನ್ನ ಕ್ಷಮೆ ಯಾಚಿಸುತ್ತೇನೆ) ಎಂದು ಹೇಳಬೇಕು.

"ಪ್ರವಾದಿ(ಸ) ಶೌಚಾಲಯದಿಂದ ಹೊರಬಂದಾಗ 'ಗುಫ್‌ರಾನಕ' ಎನ್ನುತ್ತಿದ್ದರು."

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

ಇನ್ನೊಂದು ಹದೀಸ್‌ನಿಂದ ತಿಳಿದು ಬರುವಂತೆ ಶೌಚಾಲಯದಿಂದ ಹೊರ ಬಂದಾಗ ಪ್ರವಾದಿ(ಸ) ಹೀಗೆ ಪ್ರಾರ್ಥಿಸುತ್ತಿದ್ದರು.

اَلْحَمْدُ لِلّٰهِ الَّذِىْ اَذْهَبَ عَنِّى الاَذٰى وَعَافَانِى

"ಅಲ್ ಹಮ್ದುಲಿಲ್ಲಾಹಿಲ್ಲದೀ ಅದ್‌ಹಬ ಅನ್ನಿಲ್ ಅದಾ ವ ಆಫಾನೀ"

ಅರ್ಥ: ನನ್ನಿಂದ ಮಾಲಿನ್ಯವನ್ನು ನೀಗಿಸಿದ ಮತ್ತು ನನಗೆ ಕ್ಷೇಮವನ್ನು ದಯಪಾಲಿಸಿದ ಅಲ್ಲಾಹನಿಗೆ ಸರ್ವಸ್ತುತಿ.

ಆದರೆ ಈ ಹದೀಸ್‌ನ ವರದಿಯ ಪರಂಪರೆ ದುರ್ಬಲವಾಗಿದೆ.

# ವುಝೂ ಅಥವಾ ಅಂಗಸ್ನಾನ

**1. ಕಡ್ಡಾಯ:** ವುಝೂ ಕಡ್ಡಾಯವಾಗಿದೆ ಎಂಬುದು ಪವಿತ್ರ ಕುರ್‌ಆನ್, ಹದೀಸ್ ಮತ್ತು ಸಮುದಾಯದ ಏಕಾಭಿಪ್ರಾಯದಿಂದ ಸಾಬೀತಾಗಿದೆ.

"ಓ ಸತ್ಯವಿಶ್ವಾಸಿಗಳೇ, ನೀವು ನಮಾಝಿಗೆಂದು ಹೊರಟಾಗ ನಿಮ್ಮ ಮುಖಗಳನ್ನು ಮತ್ತು ಮೊಣಕೈ ಗಂಟುಗಳವರೆಗೆ ಕೈಗಳನ್ನು ತೊಳೆದುಕೊಳ್ಳಿರಿ. ತಲೆಯನ್ನು ಸವರಿರಿ ಮತ್ತು ಹರಡು ಗಂಟುಗಳ ತನಕ ಕಾಲುಗಳನ್ನು ತೊಳೆದುಕೊಳ್ಳಿರಿ."

(ಪವಿತ್ರ ಕುರ್‌ಆನ್, 5:6)

ಪ್ರವಾದಿ(ಸ) ಹೇಳಿರುವರು: "ನಿಮ್ಮ ಪೈಕಿ ಯಾರದಾದರೂ ವುಝೂ ಭಂಗವಾದರೆ (ಅಥವಾ ವುಝೂ ಇಲ್ಲದಿದ್ದರೆ) ಅವನು ವುಝೂ ಮಾಡುವ ತನಕ ಅವನ ನಮಾಝನ್ನು ಅಲ್ಲಾಹನು ಸ್ವೀಕರಿಸುವುದಿಲ್ಲ."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಬುಖಾರಿ, ಅಬೂ ದಾವೂದ್, ತಿರ್ಮಿದಿ)

**2. ವುಝೂವಿನ ಮಹತ್ವ:** ವುಝೂವಿನ ಮಹತ್ವದ ಕುರಿತು ಪ್ರವಾದಿ(ಸ) ಅವರಿಂದ ಅನೇಕ ವಚನಗಳು ವರದಿಯಾಗಿವೆ. ಆ ಪೈಕಿ ಒಂದನ್ನು ಇಲ್ಲಿ ಕೊಡುತ್ತಿದ್ದೇವೆ:

"ದಾಸನು ವುಝೂ ಮಾಡುತ್ತಾ ಬಾಯಿ ಮುಕ್ಕಳಿಸುವಾಗ ಅವನ ಬಾಯಿಯ ಪಾಪಗಳು ಹೊರಟು ಹೋಗುತ್ತವೆ. ಅವನು ಮೂಗಿನೊಳಗೆ ನೀರು ಹಾಕುವಾಗ ಮೂಗಿನ ಪಾಪಗಳು ಹೊರಟು ಹೋಗುತ್ತವೆ. ಅವನು ಮುಖ ತೊಳೆಯುವಾಗ ಅವನ ಮುಖದ ಪಾಪಗಳು ಹೊರಟು ಹೋಗುತ್ತವೆ. ಎಷ್ಟರ ವರೆಗೆಂದರೆ ಅವನ ಕಣ್ಣಿನ ರೆಪ್ಪೆಗಳ ಪಾಪಗಳೂ ಹೊರಟು ಹೋಗುತ್ತವೆ. ಅವನು ಕೈಗಳನ್ನು ತೊಳೆಯುವಾಗ ಅವನ ಕೈಗಳ ಪಾಪಗಳು ಹೊರಟು ಹೋಗುತ್ತವೆ. ಎಷ್ಟರ ವರೆಗೆಂದರೆ ಅವನ ಉಗುರುಗಳ ಒಳಗಿನಿಂದಲೂ ಪಾಪಗಳು ಉದುರುತ್ತವೆ. ಅವನ ತಲೆಯ ಪಾಪಗಳು ಹೊರಟು ಹೋಗುತ್ತವೆ. ಎಷ್ಟರ ವರೆಗೆಂದರೆ ಅವನ ಕಿವಿಗಳಿಂದಲೂ ಪಾಪಗಳು ಉದುರುತ್ತವೆ. ಅವನು ಕಾಲುಗಳನ್ನು ತೊಳೆಯುವಾಗ ಅವನ ಕಾಲಿನ ಪಾಪಗಳು ಹೊರಟು ಹೋಗುತ್ತವೆ. ಎಷ್ಟರ ವರೆಗೆಂದರೆ

ಅವನ ಕಾಲಿನ ಉಗುರುಗಳಿಂದಲೂ ಪಾಪಗಳು ಉದುರುತ್ತವೆ. ಅನಂತರ ಅವನು ಮಸೀದಿಯ ಕಡೆಗೆ ಹೋಗುವುದು ಮತ್ತು ನಮಾಝ್ ಮಾಡುವುದು ಅವನ ಕಡೆಯಿಂದ ಹೆಚ್ಚುವರಿ ಪುಣ್ಯ ಕಾರ್ಯವಾಗಿದೆ."

(ವರದಿ: ಅಬ್ದುಲ್ಲಾ ಬಿನ್ ಸುನಾಬಹೀ(ರ)- ಮುವತ್ತಾ ಇಮಾಮ್ ಮಾಲಿಕ್, ನಸಾಈ, ಇಬ್ನು ಮಾಜ, ಹಾಕಿಮ್)

**3. ವುಝೂವಿನ ಸಂಕಲ್ಪ:** ವುಝೂವಿಗೆ ನಿಯ್ಯತ್(ಸಂಕಲ್ಪ) ಅತ್ಯಗತ್ಯ. ಅದನ್ನು ಮಾಡದಿದ್ದರೆ ವುಝೂ ಆಗದು. ಏಕೆಂದರೆ ಎಲ್ಲ ಧಾರ್ಮಿಕ ವಿಧಿಗಳಿಗೆ ಸಂಕಲ್ಪ ಅಗತ್ಯವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು: "ಎಲ್ಲ ಕರ್ಮಗಳೂ ಸಂಕಲ್ಪದೊಂದಿಗಿವೆ."

(ವರದಿ: ಹ. ಉಮರ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ತಿರ್ಮಿದಿ, ಇಬ್ನುಮಾಜ, ಅಹ್ಮದ್)

**4. ವುಝೂವಿನ ಕ್ರಮ:** ಪ್ರವಾದಿವರ್ಯರ(ಸ) ವುಝೂವಿನ ಕ್ರಮವು ಅನೇಕ ಹದೀಸ್‌ಗಳಿಂದ ತಿಳಿದು ಬರುತ್ತದೆ. ನಾವಿಲ್ಲಿ ಆ ಪೈಕಿ ಒಂದು ಹದೀಸನ್ನು ಉದ್ಧರಿಸುತ್ತಿದ್ದೇವೆ:

"ಹ. ಉಸ್ಮಾನ್(ರ) ವುಝೂವಿಗೆ ನೀರು ತರಿಸಿದರು. ಮೊದಲು ಮೂರು ಸಲ ತಮ್ಮ ಕೈಗಳಿಗೆ ನೀರು ಹಾಕಿ ಅವುಗಳನ್ನು ತೊಳೆದರು. ಅನಂತರ ಪಾತ್ರೆಗಳಿಗೆ ಕೈ ಹಾಕಿ ಮೂರು ಸಲ ಬಾಯಿ ಮುಕ್ಕಳಿಸಿದರು. ಮೂಗು ಸೀನಿದರು ಮತ್ತು ಮುಖ ತೊಳೆದರು. ಬಳಿಕ ಮೂರು ಸಲ ಎರಡೂ ಕೈಗಳನ್ನು ಮೊಣಕೈ ತನಕ ತೊಳೆದರು. ಅನಂತರ ತಲೆ ಮತ್ತು ಕಿವಿಗಳನ್ನು ಸವರಿದರು. ತರುವಾಯ ಮೂರು ಸಲ ಎರಡೂ ಕಾಲುಗಳನ್ನು ಹರಡುಗಂಟಿನ ತನಕ ತೊಳೆದರು. ಅನಂತರ, ನಾನು ಪ್ರವಾದಿ(ಸ) ಹೀಗೆಯೇ ವುಝೂ ಮಾಡುತ್ತಿರುವುದನ್ನು ಕಂಡಿದ್ದೇನೆ ಎಂದರು." (ಬುಖಾರಿ, ಮುಸ್ಲಿಮ್)

ವುಝೂವಿನಲ್ಲಿ ಕೆಲವು ವಿಷಯಗಳು ಫರ್ಝ್(ಕಡ್ಡಾಯ) ಮತ್ತು ಇನ್ನು ಕೆಲವು ಸುನ್ನತ್(ಐಚ್ಛಿಕ) ಆಗಿವೆ. ಅವುಗಳ ವಿವರಣೆಯನ್ನು ಪ್ರತ್ಯೇಕವಾಗಿ ನೋಡೋಣ.

**5. ವುಝೂವಿನ ಫರ್ಝ್‌ಗಳು:** 1) ಮುಖ ತೊಳೆಯುವುದು. 2) ಎರಡೂ ಕೈಗಳನ್ನು ಮೊಣಕೈ ತನಕ ತೊಳೆಯುವುದು. 3) ತಲೆಯನ್ನು ಸವರುವುದು. ಹನಫೀ ಕರ್ಮಶಾಸ್ತ್ರದಂತೆ ಕಾಲುಭಾಗ ತಲೆಯನ್ನು ಸವರುವುದು ಕಡ್ಡಾಯ. ಶಾಫಿಈ ಕರ್ಮಶಾಸ್ತ್ರದಂತೆ ನಾಲ್ಕು ಬೆರಳುಗಳು ತಾಗುವಷ್ಟು ಭಾಗವನ್ನು ಸವರುವುದು ಕಡ್ಡಾಯವಾಗಿದೆ. 4) ಎರಡೂ ಕಾಲುಗಳನ್ನು ಹರಡುಗಂಟಿನ ತನಕ ತೊಳೆಯುವುದು.

ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಇವು ನಾಲ್ಕು ಮಾತ್ರ ವುಝೂವಿನ ಕಡ್ಡಾಯ ವಿಧಿಗಳು. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ವುಝೂವಿನ

ಆರಂಭದಲ್ಲಿ (ಅಂದರೆ ಮುಖ ತೊಳೆಯುವಾಗ) ಸಂಕಲ್ಪ ಮಾಡುವುದು ಮತ್ತು ಮೇಲಿನ ಕಡ್ಡಾಯ ವಿಧಿಗಳನ್ನು ಅನುಕ್ರಮ(ತರ್ತೀಬ್)ವಾಗಿ ಮಾಡುವುದು ಕೂಡಾ ಕಡ್ಡಾಯ. ಇವೆರಡೂ ಹನಫೀ ಕರ್ಮಶಾಸ್ತ್ರದಲ್ಲಿ ಸುನ್ನತ್ ಆಗಿವೆ.

**6. ವುಝೂವಿನ ಸುನ್ನತ್‌ಗಳು:** 1. ವುಝೂವಿನ ಆರಂಭದಲ್ಲಿ 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' ಎನ್ನುವುದು.

2. ಹಲ್ಲುಜ್ಜುವುದು. ಹಲ್ಲುಜ್ಜುವುದರ ಮಹತ್ವದ ಬಗ್ಗೆ ಅನೇಕ ಹದೀಸ್‌ಗಳಿವೆ.

"ಪ್ರವಾದಿ(ಸ) ಹೇಳಿದರು- ನನ್ನ ಸಮುದಾಯಕ್ಕೆ ಕಷ್ಟವಾದೀತೆಂಬ ಭಯವಿಲ್ಲದಿರುತ್ತಿದ್ದರೆ ಪ್ರತಿ ಸಲ ವುಝೂ ಮಾಡುವಾಗ ಹಲ್ಲುಜ್ಜಬೇಕೆಂದು ನಾನು ಅವರಿಗೆ ಆಜ್ಞಾಪಿಸುತ್ತಿದ್ದೆ." (ವರದಿ: ಹ. ಅಬೂ ಹುರೈರಾ(ರ)- ಮಾಲಿಕ್, ಶಾಫಿಈ, ಹಾಕಿಮ್, ಬೈಹಕಿ)

3. ಮೂರು ಸಲ ಎರಡೂ ಕೈಗಳನ್ನು ಮಣಿಗಂಟಿನ ತನಕ ತೊಳೆಯುವುದು.

4. ಮೂರು ಸಲ ಬಾಯಿಗೆ ನೀರು ಹಾಕಿ ಮುಕ್ಕಳಿಸುವುದು.

5. ಮೂರು ಸಲ ಮೂಗಿನ ರಂಧ್ರಗಳಿಗೆ ನೀರು ಹಾಕಿ ತೊಳೆಯುವುದು. ಈ ಎರಡು ಕ್ರಿಯೆಗಳನ್ನು ಜೊತೆ ಜೊತೆಯಾಗಿ ಮಾಡಬಹುದು.

6. ಕೈ ಮತ್ತು ಕಾಲುಗಳ ಬೆರಳಿನ ಸಂದುಗಳನ್ನು ತೊಳೆಯುವುದು.

7. ಗಡ್ಡದ ಕೂದಲಿನ ಮಧ್ಯೆ ಬೆರಳು ಹಾಕಿ ತೊಳೆಯುವುದು.

8. ಎಲ್ಲ ಅಂಗಾಂಗಗಳನ್ನು ಮೂರು ಸಲ ತೊಳೆಯುವುದು. ಆದರೆ ಹನಫೀ ಕರ್ಮಶಾಸ್ತ್ರದಂತೆ ತಲೆ ಮತ್ತು ಕಿವಿಯನ್ನು ಒಮ್ಮೆ ಮಾತ್ರ ಸವರುವುದು ಸುನ್ನತ್ ಆಗಿದೆ.

9. ಎರಡೆರಡು ಇರುವ ಅಂಗಾಂಗಗಳನ್ನು ತೊಳೆಯುವಾಗ ಮೊದಲು ಬಲಭಾಗದ ಅಂಗವನ್ನು ತೊಳೆಯುವುದು.

10. ಎಲ್ಲ ಅಂಗಾಂಗಗಳನ್ನು ತಿಕ್ಕಿ ತೊಳೆಯುವುದು.

11. ಎಲ್ಲ ಅಂಗಾಂಗಗಳನ್ನು ನಿರಂತರವಾಗಿ ತೊಳೆಯುವುದು.

12. ಕಿವಿಯನ್ನು ಸವರುವುದು. ಹನಫೀ ಕರ್ಮಶಾಸ್ತ್ರದಂತೆ ತಲೆಯ ಜತೆಗೆ ಕಿವಿಯನ್ನೂ ಸವರಿದರೆ ಸಾಕಾಗುವುದು. ಆದರೆ ಶಾಫಿಈ ಕರ್ಮಶಾಸ್ತ್ರದಂತೆ ಇವೆರಡೂ ಕ್ರಿಯೆಗಳನ್ನು ಬೇರೆ ಬೇರೆ ಮಾಡಬೇಕು.

13. ಹನಫೀ ಕರ್ಮಶಾಸ್ತ್ರದಂತೆ ಕುತ್ತಿಗೆಯನ್ನು ಸವರುವುದು ಸುನ್ನತ್ ಆಗಿದೆ.

14. ನೀರನ್ನು ಮಿತವಾಗಿ ಬಳಸುವುದು.

15. ವುಝೂ ಆದ ನಂತರ ಗುಪ್ತಾಂಗದ ಮೇಲಿನ ವಸ್ತ್ರಕ್ಕೆ ನೀರು ಚಿಮುಕಿಸುವುದು.

16. ವುಝೂ ಮಾಡಿಯಾದ ಬಳಿಕ ಕೆಳಗಿನ ದುಆ ಪಠಿಸುವುದು.'

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರು ವುಝೂ ಮಾಡಿದ ಬಳಿಕ ಈ ದುಆ ಪಠಿಸುತ್ತಾನೋ ಅವನಿಗಾಗಿ ಸ್ವರ್ಗದ ಎಂಟು ಬಾಗಿಲುಗಳೂ ತೆರೆಯಲ್ಪಡುತ್ತವೆ. ಅವನು ತನಗೆ ಬೇಕಾದ ಬಾಗಿಲ ಮೂಲಕ ಸ್ವರ್ಗವನ್ನು ಪ್ರವೇಶಿಸಬಹುದು."

أَشْهَدُ أَنْ لَّآ إِلٰهَ إِلَّا اللّٰهُ وَحْدَهُ لَا شَرِيْكَ لَهُ وَأَشْهَدُ أَنَّ مُحَمَّدًا عَبْدُهُ وَرَسُوْلُهُ اَللّٰهُمَّ اجْعَلْنِيْ مِنَ التَّوَّابِيْنَ وَاجْعَلْنِيْ مِنَ الْمُتَطَهِّرِيْنَ

**"ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ವಅಶ್‌ಹದು ಅನ್ನ ಮುಹಮ್ಮದನ್ ಅಬ್‌ದುಹೂ ವರಸೂಲುಹೂ. ಅಲ್ಲಾಹುಮ್ಮಜ್‌ಅಲ್‌ನೀ ಮಿನತ್ತವ್ವಾಬೀನ ವಜ್‌ಅಲ್‌ನೀ ಮಿನಲ್ ಮುತತಹ್ಹಿರೀನ್."**

ಅರ್ಥ: ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನೂ ಸಹಭಾಗಿಗಳಿಲ್ಲದವನೂ ಆಗಿದ್ದಾನೆಂದು ನಾನು ಸಾಕ್ಷ್ಯವಹಿಸುತ್ತೇನೆ ಮತ್ತು ಮುಹಮ್ಮದ್(ಸ) ಅಲ್ಲಾಹನ ದಾಸರೂ ಅವನ ಸಂದೇಶವಾಹಕರೂ ಆಗಿರುವರೆಂದೂ ನಾನು ಸಾಕ್ಷ್ಯವಹಿಸುತ್ತೇನೆ. ಓ ಅಲ್ಲಾಹ್! ನನ್ನನ್ನು ಪಶ್ಚಾತ್ತಾಪ ಪಡುವವರಲ್ಲಿ ಮತ್ತು ಶುದ್ಧವಾಗುವವರಲ್ಲಿ ಸೇರಿಸು.

(ವರದಿ: ಹ. ಉಮರ್(ರ)- ತಿರ್ಮಿದಿ, ಮುಸ್ಲಿಮ್)

17. ವುಝೂ ಮಾಡಿದ ನಂತರ ಎರಡು ರಕಅತ್ ನಮಾಝ್ ಮಾಡುವುದು ಕೂಡಾ ಸುನ್ನತ್ (ಹನಫಿಯಲ್ಲಿ ಮುಸ್ತಹಬ್) ಆಗಿದೆ.

ಇವಲ್ಲದೆ ಹನಫೀ ಕರ್ಮಶಾಸ್ತ್ರದಂತೆ ವುಝೂವಿನ ಕೆಲವು ಶಿಷ್ಟಾಚಾರಗಳಿವೆ:

1. ವುಝೂವಿಗಾಗಿ ಎತ್ತರದ ಸ್ಥಳದಲ್ಲಿ ಕುಳಿತುಕೊಳ್ಳುವುದು. 2. ಕಿಬ್ಲಾಭಿಮುಖಿವಾಗಿ ಕುಳಿತುಕೊಳ್ಳುವುದು. 3. ನೀರಿಗೆ ಮಣ್ಣಿನ ಪಾತ್ರೆಯನ್ನು ಬಳಸುವುದು. 4. ನೀರಿನ ಪಾತ್ರೆಯನ್ನು ಎಡಬದಿಯಲ್ಲಿಡುವುದು. 5. ಪ್ರತಿಯೊಂದು ಅಂಗವನ್ನು ತೊಳೆಯುವಾಗ 'ಬಿಸ್ಮಿಲ್ಲಾಹ್' ಪಠಿಸುವುದು ಮತ್ತು ನಿಯ್ಯತ್ ಮಾಡುವುದು. 6. ವುಝೂ ಮಾಡುತ್ತಿರುವಾಗ ದೇವಸ್ಮರಣೆಯ ಹೊರತು ಬೇರೆ ಮಾತಾಡದಿರುವುದು. 7. ಕೊನೆಗೆ ವುಝೂ ಮಾಡಿ ಉಳಿದ ನೀರನ್ನು ಕಿಬ್ಲಾಭಿಮುಖಿವಾಗಿ ಕುಳಿತು ಕುಡಿಯುವುದು.

## ವುಝೂ ಭಂಗವಾಗುವುದು

**1. ಮಲ-ಮೂತ್ರ ವಿಸರ್ಜನಾಂಗಗಳಿಂದ ಯಾವುದೇ ವಸ್ತು ಹೊರಬಂದರೆ ವುಝೂ ಭಂಗವಾಗುತ್ತದೆ:**

ಆ ಪೈಕಿ 1) ಮೂತ್ರ ಮತ್ತು 2) ಮಲ.

ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಆದೇಶಿಸಲಾಗಿದೆ:

"ನಿಮ್ಮ ಪೈಕಿ ಯಾರಾದರೂ ಮಲ-ಮೂತ್ರ ವಿಸರ್ಜನೆ ಮಾಡಿಬಂದರೆ (ವುಝೂ ಮಾಡಲಿ)."

3) ವಾಯು: ಪ್ರವಾದಿ(ಸ) ಹೀಗೆ ಹೇಳಿರುವರು: "ನಿಮ್ಮ ಪೈಕಿ ಯಾರದಾದರೂ ವುಝೂ ಭಂಗವಾದರೆ ಅವನು ಪುನಃ ವುಝೂ ಮಾಡುವ ತನಕ ಅಲ್ಲಾಹನು ಅವನ ನಮಾಝನ್ನು ಸ್ವೀಕರಿಸುವುದಿಲ್ಲ. ಇದನ್ನು ಕೇಳಿದ ಹದರ್‌ಮೌತ್‌ನಿಂದ ಬಂದ ಓರ್ವ ವ್ಯಕ್ತಿ ಹ. ಅಬೂ ಹುರೈರಾ(ರ) ಅವರಲ್ಲಿ ಹೀಗೆ ವಿಚಾರಿಸಿದರು- 'ವುಝೂ ಭಂಗವಾಗುವುದೆಂದರೇನು?' ಆಗ ಅಬೂ ಹುರೈರಾ(ರ)- ಶಬ್ದದೊಂದಿಗೆ ಅಥವಾ ಶಬ್ದದ ಹೊರತು ಹಿಂದಿನಿಂದ ವಾಯು ಹೊರಡುವುದು ಎಂದರು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್)

ಆದರೆ ಆ ಬಗ್ಗೆ ವೃಥಾ ಸಂಶಯ ತಾಳುವುದು ಸರಿಯಲ್ಲ.

"ಪ್ರವಾದಿ(ಸ) ಹೀಗೆ ಹೇಳಿರುವರು- ನಿಮ್ಮ ಪೈಕಿ ಯಾರದಾದರೂ ಹೊಟ್ಟೆಯಲ್ಲಿ ಏನಾದರೂ ಅನುಭವವಾದರೆ ಹಾಗೂ ಆ ಬಳಿಕ ಅವನು ತನ್ನ ಹೊಟ್ಟೆಯಿಂದ ಏನಾದರೂ ಹೊರಟಿದೆಯೋ ಇಲ್ಲವೋ ಎಂದು ತಿಳಿಯುವುದು ಕಷ್ಟವಾದರೆ ಅನುಭವಿಸುವ ತನಕ ಅಂದರೆ ವಾಯು ವಿಸರ್ಜನೆಯಾದುದು ಖಾತ್ರಿಯಾಗುವ ತನಕ ಮಸೀದಿಯಿಂದ ಹೊರಡದಿರಲಿ."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್)

4) ವೀರ್ಯ ಮತ್ತು 5) ಮದೀ: ಹ. ಇಬ್ನು ಅಬ್ಬಾಸ್(ರ) ಹೀಗೆ ಹೇಳಿರುವರು- "ವೀರ್ಯ ಹೊರಟರೆ ಸ್ನಾನ ಮಾಡಬೇಕು ಮತ್ತು ಮದೀ ಹೊರಟರೆ ಗುಪ್ತಾಂಗವನ್ನು ತೊಳೆದು ವುಝೂ ಮಾಡಬೇಕು."

(ಬೈಹಕಿ)

**2. ನಿದ್ರೆ:** "ಪ್ರವಾದಿ(ಸ) ಹೀಗೆ ಹೇಳಿರುವರು: ಕಣ್ಣು ವಾಯು ಹೊರಡುವ ಸ್ಥಳದ ಮುಚ್ಚಳವಾಗಿದೆ. ಆದ್ದರಿಂದ ನಿಮ್ಮ ಪೈಕಿ ಯಾರಾದರೂ ನಿದ್ರೆ ಮಾಡಿದರೆ ವುಝೂ ಮಾಡಿಕೊಳ್ಳಲಿ." (ವರದಿ: ಹ. ಅಲೀ(ರ)- ಅಹ್ಮದ್, ಅಬೂ ದಾವೂದ್, ಇಬ್ನು ಮಾಜಃ)

ಆದರೆ ಇದರ ಉದ್ದೇಶ ಗಾಢ ನಿದ್ರೆಯಾಗಿದೆ. ಮನುಷ್ಯನು ಅನಿಯಂತ್ರಿತವಾಗಿ ಬಿಡುವ ಮತ್ತು ನೆಲದ ಮೇಲೆ ಕುಳಿತಿರಲಾರದ ನಿದ್ರೆ.

"ಪ್ರವಾದಿವರ್ಯರ(ಸ) ಸಹಾಬಿಗಳು(ರ) ಇಶಾ ನಮಾಝ್‌ಗಾಗಿ ಕಾಯುತ್ತಿದ್ದರು. ಎಷ್ಟರ ವರೆಗೆಂದರೆ ಕುಳಿತಲ್ಲೇ ಅವರು ತೂಕಡಿಸಲಾರಂಭಿಸುತ್ತಿದ್ದರು. ಅನಂತರ ಅವರು ಎದ್ದು ವುಝೂ ಮಾಡದೆಯೇ ನಮಾಝ್ ಮಾಡುತ್ತಿದ್ದರು."

(ವರದಿ: ಹ. ಅನಸ್(ರ)- ಮುಸ್ಲಿಮ್, ಶಾಫಿಈ, ಅಬೂ ದಾವೂದ್, ತಿರ್ಮಿದಿ)

**3. ಪ್ರಜ್ಞಾಹೀನತೆ:** ಪ್ರಜ್ಞಾಹೀನತೆಯು ಹುಟ್ಟಿನಿಂದಾದರೂ ಮೂರ್ಛೆಯಿಂದಾದರೂ ಅಮಲಿನಿಂದಾದರೂ ಮದ್ದಿನಿಂದಾದರೂ ವುಝೂ ಭಂಗವಾಗುತ್ತದೆ. ಪ್ರಜ್ಞಾಹೀನತೆಯು ಕಡಿಮೆಯಿರಲಿ, ಹೆಚ್ಚಿರಲಿ, ಮನುಷ್ಯನು ನೆಲದ ಮೇಲೆ ಕುಳಿತುಕೊಳ್ಳಲು ಶಕ್ತನಾಗಿರಲಿ, ಇಲ್ಲದಿರಲಿ. ಏಕೆಂದರೆ ಪ್ರಜ್ಞಾಹೀನತೆಯಲ್ಲಿ ಮನುಷ್ಯನಿಗೆ ತನ್ನ ಶರೀರದಿಂದ ಯಾವುದಾದರೂ ವಸ್ತು ವಿಸರ್ಜನೆಯಾದರೂ ಆಗದಿದ್ದರೂ ತಿಳಿಯುವುದಿಲ್ಲ.

**4. ಗುಪ್ತಾಂಗವನ್ನು ಸ್ಪರ್ಶಿಸುವುದು:** ಮಧ್ಯೆ ಯಾವುದೇ ತಡೆ ಇಲ್ಲದ ಸ್ಥಿತಿಯಲ್ಲಿ ಗುಪ್ತಾಂಗವನ್ನು ಸ್ಪರ್ಶಿಸಿದರೆ ವುಝೂ ಭಂಗವಾಗುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾವನು ತನ್ನ ಗುಪ್ತಾಂಗವನ್ನು ಸ್ಪರ್ಶಿಸಿದನೋ ಅವನು ವುಝೂ ಮಾಡದೆ ನಮಾಝ್ ಮಾಡಬಾರದು."

(ವರದಿ: ಹ. ಬುಸ್ರಾ ಬಿನ್ತಿ ಸಫ್ವಾನ್(ರ)- ಅಹ್ಮದ್, ಅಬೂ ದಾವೂದ್, ನಸಾಈ, ಇಬ್ನು ಮಾಜಃ)

ಹ. ಅಬೂ ಹನೀಫಾ(ರ) ಅವರ ಪ್ರಕಾರ ಗುಪ್ತಾಂಗ ಸ್ಪರ್ಶಿಸಿದರೂ ವುಝೂ ಭಂಗವಾಗುವುದಿಲ್ಲ. ಅದಕ್ಕೆ ಈ ಕೆಳಗಿನ ಹದೀಸ್ ಆಧಾರವಾಗಿದೆ.

ಒಬ್ಬ ವ್ಯಕ್ತಿ ಪ್ರವಾದಿ(ಸ) ಅವರಲ್ಲಿ ವಿಚಾರಿಸಿದರು:

"ತನ್ನ ಗುಪ್ತಾಂಗವನ್ನು ಸ್ಪರ್ಶಿಸಿದ ವ್ಯಕ್ತಿಯು ಪುನಃ ವುಝೂ ಮಾಡಬೇಕೇ?" ಅದಕ್ಕೆ ಪ್ರವಾದಿ(ಸ) "ಬೇಡ, ಅದು ನಿಮ್ಮ ಶರೀರದ ಒಂದು ಭಾಗವೇ ಆಗಿದೆ" ಎಂದರು.

(ವರದಿ: ಹ. ತಲಕ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಹ. ಅಬೂ ಹನೀಫಾ(ರ) ಅವರ ಪ್ರಕಾರ ಈ ಹದೀಸ್ ಹಿಂದಿನ ಹದೀಸ್‌ಗಿಂತ ಹೆಚ್ಚು ಪ್ರಬಲವಾಗಿದೆ.

**5. ಮೂಗಿನಿಂದ ರಕ್ತ ಬರುವುದು ಅಥವಾ ವಾಂತಿಯಾಗುವುದು:** ಇವುಗಳಿಂದ ವುಝೂ ಭಂಗವಾಗುತ್ತದೆ. ಆದರೆ ಇಮಾಮ್ ಶಾಫಿಈಯವರ ಪ್ರಕಾರ ಭಂಗವಾಗುವುದಿಲ್ಲ.

ಹ. ಇಬ್ನು ಅಬೀದರ್ದಾ(ರ) ಹೀಗೆ ವರದಿ ಮಾಡಿದ್ದಾರೆ: "ಪ್ರವಾದಿ(ಸ) ವಾಂತಿ ಮಾಡಿದ ನಂತರ ವುಝೂ ಮಾಡಿದರು." (ತಿರ್ಮಿದಿ)

ಇಮಾಮ್ ಶಾಫಿಈಯವರ(ರ) ಪ್ರಕಾರ ಪ್ರವಾದಿ(ಸ) ವುಝೂ ಮಾಡಿದುದಕ್ಕೆ ವಾಂತಿ ಮಾಡಿದುದೇ ಕಾರಣವಾಗಿರಬೇಕಾಗಿಲ್ಲ.

**6. ಸ್ತ್ರೀಯನ್ನು ಸ್ಪರ್ಶಿಸುವುದು:** ಇಮಾಮ್ ಶಾಫಿಈಯವರ ಪ್ರಕಾರ ಪತ್ನಿ ಅಥವಾ ವಿವಾಹ ನಿಷಿದ್ಧವಲ್ಲದ ಇತರ ಸ್ತ್ರೀಯರನ್ನು ಸ್ಪರ್ಶಿಸಿದರೂ ವುಝೂ ಭಂಗವಾಗುತ್ತದೆ.

# ವುಝೂ ಭಂಗವಾಗದ ವಿಷಯಗಳು

ಕೆಲವು ವಿಷಯಗಳ ಬಗ್ಗೆ ಬಾಹ್ಯನೋಟಕ್ಕೆ ಅವುಗಳಿಂದ ವುಝೂ ಭಂಗವಾಗುತ್ತದೆಂದು ಭಾಸವಾಗುತ್ತದೆ. ಆದರೆ ವಾಸ್ತವದಲ್ಲಿ ಅವುಗಳಿಂದ ವುಝೂ ಭಂಗವಾಗುವುದಿಲ್ಲ. ಅವು ಈ ಕೆಳಗಿನಂತಿವೆ:

**1. ಮಹಿಳೆಯರನ್ನು ಸ್ಪರ್ಶಿಸುವುದು**

ಹ. ಆಯಿಶಾ(ರ) ವರದಿ ಮಾಡುತ್ತಾರೆ. ಪ್ರವಾದಿವರ್ಯರು(ಸ) ಅವರಿಗೆ ಮುತ್ತು ಕೊಟ್ಟರು. ಆಗ ಅವರು ಉಪವಾಸ ವ್ರತ ಆಚರಿಸಿದ್ದರು. ಪ್ರವಾದಿ(ಸ) ಹೇಳಿದರು- "ಮುತ್ತು ಕೊಡುವುದರಿಂದ ವುಝೂ ಭಂಗವಾಗುವುದಿಲ್ಲ. ಉಪವಾಸ ವ್ರತವೂ ಭಂಗವಾಗುವುದಿಲ್ಲ."

(ಇಸ್ಹಾಕ್ ಬಿನ್ ರಾಹವಯ್ಯ, ಬಝ್ಝಾರ್)

ಹ. ಆಯಿಶಾ(ರ) ವರದಿ ಮಾಡುತ್ತಾರೆ. "ನಾನು ಪ್ರವಾದಿವರ್ಯರ(ಸ) ಮುಂದೆ ಮಲಗಿದ್ದೆ ಮತ್ತು ನನ್ನ ಕಾಲುಗಳು ಪ್ರವಾದಿವರ್ಯರ(ಸ) ಕಿಬ್ಲಾದ ಕಡೆಗೆ ಇತ್ತು. ಅವರು ಸುಜೂದ್ ಮಾಡುವಾಗ ನನ್ನನ್ನು (ಕೈಯಿಂದ) ಸರಿಸುತ್ತಿದ್ದರು. ನಾನಾಗ ನನ್ನ ಕಾಲುಗಳನ್ನು ಮಡಚಿಕೊಳ್ಳುತ್ತಿದ್ದೆ." (ಬುಖಾರಿ, ಮುಸ್ಲಿಮ್)

ಇದು ಇಮಾಮ್ ಅಬೂ ಹನೀಫಾರವರ(ರ) ಅಭಿಮತವಾಗಿದೆ. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಕುರ್‌ಆನಿನಲ್ಲಿ ಮಹಿಳೆಯನ್ನು ಸ್ಪರ್ಶಿಸಿದರೆ ವುಝೂ ಮಾಡಬೇಕೆಂದು ಆದೇಶಿಸಲಾಗಿರುವುದರಿಂದ ಅದು ಸಾಮಾನ್ಯ ಸ್ಪರ್ಶಕ್ಕೂ ಅನ್ವಯವಾಗುತ್ತದೆ. ಹನಫೀ ಕರ್ಮಶಾಸ್ತ್ರದಂತೆ ಅದು ಸಂಸರ್ಗಕ್ಕೆ ಮಾತ್ರ ಅನ್ವಯಿಸುತ್ತದೆ.

**2. ಗಹಗಹಿಸಿ ನಗುವುದು**

ಇಮಾಮ್ ಶಾಫಿಈ ಮತ್ತು ಇತರ ಕರ್ಮಶಾಸ್ತ್ರಜ್ಞರ ಅಭಿಪ್ರಾಯ ಪ್ರಕಾರ ಗಹಗಹಿಸಿ ನಗುವುದರಿಂದ ವುಝೂ ಭಂಗವಾಗುವುದಿಲ್ಲ. ಹನಫೀ ಕರ್ಮಶಾಸ್ತ್ರದಂತೆ ನಮಾಝ್ ಮಾಡುತ್ತಿರುವಾಗ ಹತ್ತಿರದವನಿಗೆ ಕೇಳಿಸುವಂತೆ ನಕ್ಕರೆ ಅದರಿಂದ ವುಝೂ ಭಂಗವಾಗುತ್ತದೆ.

## ಯಾವೆಲ್ಲಾ ಕಾರ್ಯಗಳಿಗೆ ವುಝೂ ಮಾಡಬೇಕು?

**1. ನಮಾಝ್:** ನಮಾಝ್ ಫರ್ಝ್(ಕಡ್ಡಾಯ) ಆಗಿರಲಿ ಅಥವಾ ಸುನ್ನತ್ ಮತ್ತು ನಫಿಲ್(ಐಚ್ಛಿಕ) ಆಗಿರಲಿ ಎಲ್ಲದಕ್ಕೂ ವುಝೂ ಕಡ್ಡಾಯವಾಗಿದೆಯೆಂಬುದು ಸರ್ವಸಮ್ಮತ ವಿಷಯ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಅಲ್ಲಾಹನು ಶುದ್ಧತೆ(ವುಝೂ) ಇಲ್ಲದೆ ಯಾವ ನಮಾಝನ್ನೂ ಸ್ವೀಕರಿಸುವುದಿಲ್ಲ. ಹಾಗೆಯೇ ಸಮರಾರ್ಜಿತ ಸೊತ್ತಿನಿಂದ ಕದ್ದು ಮಾಡಿದ ದಾನವನ್ನೂ ಸ್ವೀಕರಿಸುವುದಿಲ್ಲ."

(ವರದಿ: ಹ. ಇಬ್ನು ಉಮರ್(ರ)- ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

**2. ಪವಿತ್ರ ಕುರ್‌ಆನಿನ ಸ್ಪರ್ಶ:** ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:
"ಈ ಕುರ್‌ಆನನ್ನು ಪರಿಶುದ್ಧರಲ್ಲದ ಯಾರೂ ಸ್ಪರ್ಶಿಸುವುದಿಲ್ಲ."

## ಯಾವ ಕಾರ್ಯಗಳಿಗೆ ವುಝೂ ಮಾಡುವುದು ಒಳ್ಳೆಯದು?

**1. ಕುರ್‌ಆನ್ ಪಾರಾಯಣ**

ಪವಿತ್ರ ಕುರ್‌ಆನ್ ಪಠಿಸುವಾಗ ಮತ್ತು ಅಲ್ಲಾಹನ ದಿಕ್ರ್(ನಾಮಸ್ಮರಣೆ) ಮಾಡುವಾಗ ವುಝೂ ಮಾಡಿಕೊಂಡಿರುವುದು ಅಪೇಕ್ಷಣೀಯ(ಮುಸ್ತಹಬ್)ವಾಗಿದೆ.

"ಪ್ರವಾದಿ(ಸ) ವುಝೂ ಮಾಡುತ್ತಿದ್ದರು. ನಾನು ಸಲಾಮ್ ಹೇಳಿದಾಗ ಪ್ರವಾದಿ ವರ್ಯರು(ಸ) ಸಲಾಮ್‌ಗೆ ಉತ್ತರ ನೀಡಲಿಲ್ಲ. ಪ್ರವಾದಿ(ಸ) ವುಝೂ ಮುಗಿಸಿದ ನಂತರ ಸಲಾಮ್‌ಗೆ ಉತ್ತರ ಹೇಳಿದರು ಮತ್ತು ಹೀಗೆ ಹೇಳಿದರು- ನಾನು ನಿಮ್ಮ ಸಲಾಮ್‌ಗೆ ಉತ್ತರ ಏಕೆ ನೀಡಲಿಲ್ಲವೆಂದರೆ ಅಲ್ಲಾಹನ ನಾಮಸ್ಮರಣೆಯನ್ನು ಶುದ್ಧವಾಗದೆ ಮಾಡುವುದು ನನಗಿಷ್ಟವಿರಲಿಲ್ಲ."

(ವರದಿ: ಮುಹಾಜಿರ್ ಬಿನ್ ಕನ್‌ಫದ್(ರ)- ಅಹ್ಮದ್, ನಸಾಈ, ಅಬೂ ದಾವೂದ್, ಇಬ್ನು ಖುಝೈಮಃ)

ಅಲ್ಲಾಹನ ಸ್ಮರಣೆಯನ್ನು ಶುದ್ಧ ಅವಸ್ಥೆಯಲ್ಲಿ ಮಾಡುವುದು ಹೆಚ್ಚು ಅಪೇಕ್ಷಣೀಯ. ಆದರೆ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನ ನಾಮಸ್ಮರಣೆಗೆ ಅನುಮತಿಯಿದೆ.

"ಪ್ರವಾದಿ(ಸ) ಅಲ್ಲಾಹನನ್ನು ಎಲ್ಲ ಸ್ಥಿತಿಗಳಲ್ಲೂ ಸ್ಮರಿಸುತ್ತಿದ್ದರು."

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

**2. ಮಲಗುವುದಕ್ಕೆ ಮುಂಚೆ**

ಪ್ರವಾದಿ(ಸ) ಹೀಗೆ ಹೇಳಿರುವರು:

ನೀವು ಮಲಗಲಿಕ್ಕೆ ಹೊರಟಾಗ ನಮಾಝ್‌ಗಾಗಿ ವುಝೂ ಮಾಡುವಂತೆ ವುಝೂ ಮಾಡಿರಿ. ಅನಂತರ ಬಲ ಪಾರ್ಶ್ವಕ್ಕೆ ಒರಗಿ ಮಲಗಿ ಈ ದುಆ ಪಠಿಸಿರಿ:

اَللّٰهُمَّ اَسْلَمْتُ نَفْسِى اِلَيْكَ وَوَجَّهْتُ وَجْهِى اِلَيْكَ وَفَوَّضْتُ اَمْرِى اِلَيْكَ وَاَلْجَأْتُ ظَهْرِى اِلَيْكَ رَغْبَةً وَّرَهْبَةً اِلَيْكَ لَا مَلْجَأَ وَلَا مَنْجَى مِنْكَ اِلَّا اِلَيْكَ اَللّٰهُمَّ آمَنْتُ بِكِتَابِكَ الَّذِىْ اَنْزَلْتَ وَنَبِيِّكَ الَّذِىْ اَرْسَلْتَ .

"ಅಲ್ಲಾಹುಮ್ಮ ಅಸ್ಲಮ್ತು ನಫ್ಸೀ ಇಲೈಕ ವವಜ್ಜಹ್ತು ವಜ್‌ಹೀ ಇಲೈಕ ವ ಫವ್ವದ್‌ತು ಅಮ್ರೀ ಇಲೈಕ. ವ ಅಲ್ ಜಅ್‌ತು ಳಹ್ರೀ ಇಲೈಕ ರಗ್‌ಬತನ್ ವ ರಹ್‌ಬತನ್ ಇಲೈಕ ಲಾ ಮಲ್‌ಜಅ ವಲಾ ಮನ್‌ಜಾ ಮಿನ್‌ಕ ಇಲ್ಲಾ ಇಲೈಕ. ಅಲ್ಲಾಹುಮ್ಮ ಆಮನ್ತು ಬಿಕಿತಾಬಿಕಲ್ಲದೀ ಅನ್‌ಝಲ್ತ ವ ನಬಿಯ್ಯಿಕಲ್ಲದೀ ಅರ್‌ಸಲ್ತ."

ಅರ್ಥ: ಓ ಅಲ್ಲಾಹ್! ನಾನು ನನ್ನ ಪ್ರಾಣವನ್ನು ನಿನ್ನ ವಶಕ್ಕೆ ಒಪ್ಪಿಸಿದೆ. ನನ್ನ ಮುಖವನ್ನು ನಿನ್ನೆಡೆಗೆ ತಿರುಗಿಸಿದೆ. ನನ್ನ ವ್ಯವಹಾರವನ್ನು ನಿನ್ನ ವಶಕ್ಕೆ ಒಪ್ಪಿಸಿದೆ. ನಿನ್ನ ಪ್ರೇಮ ಮತ್ತು ಭಯದೊಂದಿಗೆ ನಿನ್ನನ್ನೇ ಆಶ್ರಯಿಸಿದೆ. ನಿನ್ನಿಂದ ಓಡಿ ಹೋದರೆ ಕೇವಲ ನಿನ್ನಲ್ಲೇ ಆಶ್ರಯ ಮತ್ತು ಮೋಕ್ಷದ ತಾಣವಿದೆ. ಓ ಅಲ್ಲಾಹ್! ನೀನು ಅವತೀರ್ಣ ಗೊಳಿಸಿರುವ ಗ್ರಂಥದ ಮೇಲೆ ನಾನು ವಿಶ್ವಾಸವಿರಿಸಿದೆ ಮತ್ತು ನೀನು ರವಾನಿಸಿದ ಪ್ರವಾದಿಯನ್ನು ನಾನು ನಂಬಿದೆ. ಅರ್ಥಾತ್: ನೀವು ರಾತ್ರಿ ತೀರಿ ಹೋದರೆ ಪ್ರಕೃತಿಯಲ್ಲಿ ಸಾಯುವಿರಿ. ಈ ದುಆದ ನಂತರ ಬೇರಾವ ಮಾತನ್ನೂ ಆಡಬಾರದು.

(ವರದಿ: ಹ. ಬರಾಅ್ ಬಿನ್ ಆಝಿಬ್(ರ)- ಬುಖಾರಿ, ಅಹ್ಮದ್, ತಿರ್ಮಿದಿ)

### 3. ಜನಾಬತ್‌ನ ಸ್ಥಿತಿಯಲ್ಲಿ

"ಪ್ರವಾದಿ(ಸ) ಜನಾಬತ್‌ನ ಸ್ಥಿತಿಯಲ್ಲಿರುತ್ತಾ ತಿನ್ನಲು ಅಥವಾ ಮಲಗಲು ಬಯಸಿದರೆ ನಮಾಝ್‌ಗೆ ವುಝೂ ಮಾಡುವಂತೆ ವುಝೂ ಮಾಡಿಕೊಳ್ಳುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್,
ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

### 4. ಸ್ನಾನಕ್ಕಿಂತ ಮುಂಚೆ

"ಪ್ರವಾದಿ(ಸ) ಜನಾಬತ್‌ನಿಂದ ವುಝೂ ಮಾಡುವಾಗ ಮೊಟ್ಟಮೊದಲು ತಮ್ಮ ಕೈಗಳನ್ನು ತೊಳೆಯುತ್ತಿದ್ದರು. ಅನಂತರ ಬಲಕೈಯಿಂದ ಎಡಕೈಗೆ ನೀರು ಸುರಿದು ತಮ್ಮ ಗುಪ್ತಾಂಗವನ್ನು ತೊಳೆಯುತ್ತಿದ್ದರು. ಅನಂತರ ನಮಾಝ್‌ಗೆ ವುಝೂ ಮಾಡುವಂತೆ ವುಝೂ ಮಾಡುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್,
ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

### 5. ಪ್ರತಿ ನಮಾಝ್‌ಗೆ ಹೊಸ ವುಝೂ ಮಾಡುವುದು

"ಪ್ರವಾದಿ(ಸ) ಪ್ರತಿ ನಮಾಝ್‌ಗೆ ಹೊಸ ವುಝೂ ಮಾಡುತ್ತಿದ್ದರು. ಮಕ್ಕಾ ವಿಜಯದ ದಿವಸ ಪ್ರವಾದಿವರ್ಯರು(ಸ) ಕಾಲುಚೀಲಗಳ ಮೇಲೆ ಮಸಹ್(ಒದ್ದೆ ಕೈಯಿಂದ ಸವರುವುದು) ಮಾಡಿದರು ಮತ್ತು ಐದೂ ನಮಾಝ್‌ಗಳನ್ನು ಒಂದೇ ವುಝೂವಿನಿಂದ ನಿರ್ವಹಿಸಿದರು. ಹ. ಉಮರ್(ರ) ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದರು-

ಪ್ರವಾದಿವರ್ಯರೇ(ಸ)! ಈ ಹಿಂದೆ ತಾವು ಹೀಗೆ ಮಾಡುತ್ತಿರಲಿಲ್ಲ ಅಲ್ಲವೇ? ಆಗ ಪ್ರವಾದಿ(ಸ)- ಓ ಉಮರ್, ನಾನು ಬೇಕು ಬೇಕೆಂದೇ ಹೀಗೆ ಮಾಡಿರುವೆನು ಎಂದರು."

(ವರದಿ: ಹ. ಬುರೈದಾ(ರ)- ಅಹ್ಮದ್, ಮುಸ್ಲಿಮ್)

ಅಮ್ರ್ ಬಿನ್ ತಾಹಿರ್ ಅನ್ಸಾರಿ(ರ) ವರದಿ ಮಾಡಿರುವರು: "ಹ. ಅನಸ್ ಬಿನ್ ಮಾಲಿಕ್(ರ) ಹೀಗೆ ಹೇಳುತ್ತಿದ್ದರು- ಪ್ರವಾದಿ(ಸ) ಪ್ರತಿ ನಮಾಝ್‌ಗೆ ಹೊಸ ವುಝೂ ಮಾಡಿಕೊಳ್ಳುತ್ತಿದ್ದರು. ಆಗ ನಾನು ಕೇಳಿದೆ- ನೀವು ಏನು ಮಾಡುತ್ತಿದ್ದಿರಿ. ಆಗ ಅನಸ್(ರ)- ನಮಗೆ ವುಝೂ ಇರುವ ತನಕ ನಾವು ಒಂದೇ ವುಝೂವಿನಿಂದ ಎಲ್ಲ ನಮಾಝ್‌ಗಳನ್ನು ಮಾಡುತ್ತಿದ್ದೆವು."

(ಬುಖಾರಿ, ಅಹ್ಮದ್)

# ಕಾಲುಚೀಲಗಳ 'ಮಸಹ್'(ಸವರುವುದು)

**1. ಕಾಲುಚೀಲಗಳ ಮಸಹ್(ಸವರುವುದು):** ಇದು ಪ್ರವಾದಿವರ್ಯರಿಂದ(ಸ) ಸಾಬೀತಾಗಿದೆ. ಈ ಬಗ್ಗೆ ಶಿಯಾ ಮತ್ತು ಖಾರಿಜೀಗಳ ಹೊರತು ಇಡೀ ಸಮುದಾಯದಲ್ಲಿ ಒಮ್ಮತವಿದೆ.

"ಹ. ಜರೀರ್(ರ) ಮೂತ್ರವಿಸರ್ಜನೆ ಮಾಡಿದ ನಂತರ ವುಝೂ ಮಾಡಿದರು ಮತ್ತು ತಮ್ಮ ಕಾಲುಚೀಲಗಳ ಮೇಲೆ ಮಸಹ್ ಮಾಡಿದರು. ಜನರು ವಿಚಾರಿಸಿದರು- ಪ್ರವಾದಿ(ಸ) ಹೀಗೆ ಮಾಡುತ್ತಿದ್ದರೇ? ಆಗ ಅವರು- ಹೌದು, ಪ್ರವಾದಿವರ್ಯರು(ಸ) ಮೂತ್ರ ವಿಸರ್ಜನೆ ಮಾಡಿದ ಬಳಿಕ ವುಝೂ ಮಾಡಿ ತಮ್ಮ ಕಾಲುಚೀಲಗಳ ಮೇಲೆ ಮಸಹ್ ಮಾಡುವುದನ್ನು ನಾನು ಕಂಡಿದ್ದೇನೆ. ಹ. ಜರೀರ್(ರ) (ವುಝೂವಿನ ಆಜ್ಞೆ ಇರುವ) ಸೂರಃ ಅಲ್ ಮಾಇದಃ ಅವತೀರ್ಣಗೊಂಡ ಬಳಿಕ ಇಸ್ಲಾಮ್ ಸ್ವೀಕರಿಸಿದವರಾದುದರಿಂದ ಜನರು ಅವರ ವರದಿ ಯನ್ನು ಅತ್ಯಧಿಕ ನಂಬಲರ್ಹವೆಂದು ಪರಿಗಣಿಸುತ್ತಿದ್ದರು."

(ಬುಖಾರಿ, ಮುಸ್ಲಿಮ್)

ಕಾಲುಚೀಲಗಳು ಹರಿದಿದ್ದರೆ ಅಥವಾ ಅದರಲ್ಲಿ ರಂಧ್ರಗಳಿದ್ದರೆ ಮಸಹ್ ಮಾಡುವುದು ಧರ್ಮಸಮ್ಮತವಲ್ಲ.

**2. 'ಮಸಹ್'ನ ನಿಬಂಧನೆ:** ಕಾಲುಚೀಲಗಳ ಮೇಲೆ ಮಸಹ್ ಮಾಡುವುದು ಧರ್ಮಸಮ್ಮತವಾಗಬೇಕಾದರೆ ವುಝೂ ಮಾಡಿಯೇ ಅದನ್ನು ಧರಿಸಿರಬೇಕು.

"ಹ. ಮುಗೀರ ಬಿನ್ ಶುಅ್‌ಬ(ರ) ವರದಿ ಮಾಡುತ್ತಾರೆ. ಒಂದು ರಾತ್ರಿ ನಾನು ಪ್ರವಾದಿವರ್ಯರ(ಸ) ಜೊತೆ ನಡೆಯುತ್ತಿದ್ದೆ. ನಾನು ಒಂದು ಪಾತ್ರೆಯಿಂದ ಅವರ ಕೈಗಳಿಗೆ ನೀರು ಸುರಿದೆ. ಪ್ರವಾದಿ(ಸ) ತಮ್ಮ ಮುಖವನ್ನೂ ಕೈಗಳನ್ನೂ ತೊಳೆದರು. ತಲೆಯನ್ನು

ಸವರಿದರು. ಆಗ ನಾನು ಅವರ ಕಾಲು ಚೀಲಗಳನ್ನು ಕಳಚಲಿಕ್ಕಾಗಿ ಬಗ್ಗಿದೆ. ಆಗ ಅವರು 'ಇರಲಿ ಬಿಡಿ ನಾನು ಅದನ್ನು ಧರಿಸುವಾಗ ಶುದ್ಧವಾಗಿದ್ದೆ' ಎಂದರು."

(ಬುಖಾರಿ, ಮುಸ್ಲಿಮ್, ಅಹ್ಮದ್)

ಇದುವೇ ಇಮಾಮ್ ಶಾಫಿಈಯವರ(ರ) ಅಭಿಮತವಾಗಿದೆ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಕಾಲುಚೀಲ ಧರಿಸುವಾಗ ಕಾಲುಗಳನ್ನು ತೊಳೆದಿದ್ದರೆ ಸಾಕು. ವುಝೂ ಮಾಡಿರಬೇಕಾಗಿಲ್ಲ. ಈ ವ್ಯತ್ಯಾಸಕ್ಕೆ ಕಾರಣ ಮೇಲಿನ ಹದೀಸ್‌ನ ವಿಭಿನ್ನ ವ್ಯಾಖ್ಯಾನಗಳಾಗಿವೆ.

**3. ಕಾಲಿನ ಯಾವ ಭಾಗಕ್ಕೆ ಮಸಹ್ ಮಾಡಬೇಕು?**

ಮಸಹ್ ಕಾಲಿನ ಮೇಲ್ಭಾಗಕ್ಕೆ ಮಾಡಬೇಕು.

"ಹ. ಅಲೀ(ರ) ವರದಿ ಮಾಡುತ್ತಾರೆ- ಧರ್ಮವು ಕೇವಲ ವಿಚಾರದ(ಗುಮಾನಿಯ) ಮೇಲೆ ಆಧಾರಿತವಾಗಿರುತ್ತಿದ್ದರೆ ಕಾಲಿನ ಮೇಲ್ಭಾಗಕ್ಕಿಂತ ಕೆಳಭಾಗದ ಮೇಲೆ ಮಸಹ್ ಮಾಡಬೇಕಾಗಿತ್ತು. ಆದರೆ ನಾನು ಪ್ರವಾದಿವರ್ಯರನ್ನು(ಸ) ಕಾಲಿನ ಮೇಲ್ಭಾಗಕ್ಕೆ ಮಸಹ್ ಮಾಡುವುದಾಗಿ ಕಂಡಿರುತ್ತೇನೆ." (ಅಬೂ ದಾವೂದ್, ದಾರಕುತ್ನಿ)

ಇಮಾಮ್ ಶಾಫಿಈಯವರ(ರ) ಪ್ರಕಾರ ಕಾಲಿನ ಮೇಲ್ಭಾಗ ಮತ್ತು ಕೆಳಭಾಗಗಳೆರಡರ ಮೇಲೂ ಮಸಹ್ ಮಾಡುವುದು ಒಳ್ಳೆಯದು.

**4. ಮಸಹ್‌ನ ಕಾಲಾವಧಿ:** ಕಾಲುಚೀಲಗಳ ಮಸಹ್ ಮಾಡುವ ಕಾಲಾವಧಿ ಊರಲ್ಲಿರುವವರಿಗೆ ಒಂದು ದಿನ ಮತ್ತು ಒಂದು ರಾತ್ರಿ. ಪ್ರಯಾಣಿಕರಿಗೆ ಮೂರು ದಿನ ಮತ್ತು ಮೂರು ರಾತ್ರಿಯಾಗಿದೆ.

"ಪ್ರವಾದಿ(ಸ) ನಮಗೆ ಈ ರೀತಿ ಆಜ್ಞಾಪಿಸಿರುವರು: ನೀವು ಕಾಲುಚೀಲಗಳನ್ನು ಶುದ್ಧಾವಸ್ಥೆಯಲ್ಲಿ ಧರಿಸಿದ್ದುದಾದರೆ ಪ್ರಯಾಣದಲ್ಲಿ ಮೂರು ದಿನ ಮತ್ತು ಮೂರು ರಾತ್ರಿ ಹಾಗೂ ಊರಿನಲ್ಲಿ ಒಂದು ದಿನ ರಾತ್ರಿ ಮಸಹ್ ಮಾಡಬಹುದು. ಜನಾಬತ್ ಅಲ್ಲದೆ ಬೇರಾವ ಕಾರಣಕ್ಕೂ ಅದನ್ನು ಕಳಚಬಾರದು.

(ವರದಿ: ಸಫ್ವಾನ್ ಬಿನ್ ಅಸಾಲ್(ರ)- ಶಾಫಿಈ, ಅಹ್ಮದ್, ಇಬ್ನು ಖುಝೈಮಃ, ತಿರ್ಮಿದಿ, ನಸಾಈ)

◈

# ಸ್ನಾನ

ಸ್ನಾನದ ಆಜ್ಞೆಯು ಪವಿತ್ರ ಕುರ್‌ಆನಿನಲ್ಲಿ ಸ್ಪಷ್ಟವಾಗಿ ಇದೆ:

''ಜನಾಬತ್ (ವೀರ್ಯಸ್ಖಲನ ನಂತರದ ಮಾಲಿನ್ಯ) ಸ್ಥಿತಿಯಲ್ಲಿದ್ದರೆ ಸ್ನಾನ ಮಾಡಿ ಶುದ್ಧರಾಗಿಕೊಳ್ಳಿರಿ.'' (ಪವಿತ್ರ ಕುರ್‌ಆನ್, 5:6)

## 1. ಸ್ನಾನ ಕಡ್ಡಾಯವಾಗುವ ವಿಷಯಗಳು

ಸ್ತ್ರೀ ಅಥವಾ ಪುರುಷನ ವೀರ್ಯವು ನಿದ್ರಾವಸ್ಥೆಯಲ್ಲಾಗಲೀ ಎಚ್ಚರಾವಸ್ಥೆಯಲ್ಲಾಗಲೀ ಹೊರಡುವುದರಿಂದ ಸ್ನಾನ ಕಡ್ಡಾಯವಾಗುತ್ತದೆ.

"ಪ್ರವಾದಿ(ಸ) ಹೇಳಿರುವರು- ನೀರನ್ನು ನೀರಿನಿಂದ ಶುದ್ಧಗೊಳಿಸಿ."

(ವರದಿ: ಹ. ಅಬೂ ಸಈದ್(ರ)- ಮುಸ್ಲಿಮ್)

ಅರ್ಥಾತ್ ವೀರ್ಯಸ್ಖಲನವಾದರೆ ಸ್ನಾನ ಕಡ್ಡಾಯವಾಗಿದೆ. ಇದರ ಬೇರೆ ಬೇರೆ ರೂಪಗಳು ಸಂಭವಿಸಬಹುದು. ಅದನ್ನು ನಾವಿಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇವೆ:

1) ವೀರ್ಯವು ಇಂದ್ರಿಯಾಸಕ್ತಿಯಿಂದಲ್ಲದೆ ರೋಗದಿಂದ ಅಥವಾ ಚಳಿಯಿಂದ ಹೊರಟರೆ ಸ್ನಾನ ಕಡ್ಡಾಯವಲ್ಲ ಎಂಬುದು ಹನಫೀ ಕರ್ಮಶಾಸ್ತ್ರದ ವಿಧಿ.

"ಪ್ರವಾದಿ(ಸ) ಹೇಳಿರುವರು- ನಿಮ್ಮ ವೀರ್ಯವು ಇಂದ್ರಿಯಾಸಕ್ತಿಯಿಂದ ಹೊರಟರೆ ಸ್ನಾನ ಮಾಡಿರಿ." (ವರದಿ: ಹ. ಅಲೀ(ರ)- ಅಬೂ ದಾವೂದ್)

ಇಮಾಮ್ ಶಾಫಿಈಯವರ(ರ) ಪ್ರಕಾರ ವೀರ್ಯವು ಇಂದ್ರಿಯಾಸಕ್ತಿಯಿಂದ ಹೊರಟರೂ ರೋಗ ಅಥವಾ ಇನ್ನಿತರ ಕಾರಣಗಳಿಂದ ಹೊರಟರೂ ಸ್ನಾನ ಕಡ್ಡಾಯವಾಗಿದೆ.

2) ಒಬ್ಬ ವ್ಯಕ್ತಿಗೆ ಸಂಭೋಗದ ಸ್ವಪ್ನ ಬಿದ್ದು ವೀರ್ಯಸ್ಖಲನವಾಗದಿದ್ದರೆ ಅವನಿಗೆ ಸ್ನಾನ ಕಡ್ಡಾಯವಲ್ಲ.

"ಹ. ಉಮ್ಮು ಸಲೀಮ್‌ರವರು(ರ) ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದರು- ಪ್ರವಾದಿ ವರ್ಯರೇ! ಅಲ್ಲಾಹನು ಸತ್ಯವನ್ನು ತಿಳಿಸುವುದರಲ್ಲಿ ನಾಚಿಕೆಪಡುವುದಿಲ್ಲ. ಸ್ತ್ರೀಗೆ ಸಂಸರ್ಗದ ಸ್ವಪ್ನ ಬಿದ್ದರೆ ಆಕೆ ಸ್ನಾನ ಮಾಡಬೇಕೆ? ಆಗ ಪ್ರವಾದಿ(ಸ) ಹೇಳಿದರು- ಹೌದು, ವೀರ್ಯ ಸ್ಖಲನವಾಗಿದ್ದರೆ! ಎಂದರು." (ಬುಖಾರಿ, ಮುಸ್ಲಿಮ್)

3) ಒಬ್ಬ ವ್ಯಕ್ತಿಯು ನಿದ್ರೆಯಿಂದ ಎಚ್ಚೆತ್ತಾಗ ಅವನ ಬಟ್ಟೆ ಅಥವಾ ಹಾಸಿಗೆ ಒದ್ದೆಯಾಗಿದ್ದರೆ, ಸ್ವಪ್ನದಲ್ಲಿ ಸಂಭೋಗ ಆಗಿದ್ದರೂ- ಆಗಿರದಿದ್ದರೂ ಸ್ನಾನ ಕಡ್ಡಾಯವಾಗುತ್ತದೆ. ಒಂದು ವೇಳೆ ಒದ್ದೆಯಾದುದು ವೀರ್ಯದಿಂದ ಆಗಿರದೆ ಮೂತ್ರದಿಂದಾಗಿದ್ದರೆ ಸ್ನಾನ ಕಡ್ಡಾಯವಲ್ಲ.

ಹ. ಆಯಿಶಾ(ರ) ವರದಿ ಮಾಡುತ್ತಾರೆ: "ಒಮ್ಮೆ ಒಬ್ಬ ವ್ಯಕ್ತಿ ಪ್ರವಾದಿವರ್ಯರಲ್ಲಿ(ಸ) ಹೀಗೆ ಪ್ರಶ್ನಿಸುತ್ತಾರೆ- ಒಬ್ಬ ವ್ಯಕ್ತಿಯು (ವಸ್ತ್ರ ಅಥವಾ ಹಾಸಿಗೆ) ಒದ್ದೆಯಾಗಿರುವುದನ್ನು ಕಾಣುತ್ತಾನೆ. ಆದರೆ ಆತನಿಗೆ ಸ್ವಪ್ನ ಕಂಡದ್ದು ನೆನಪಿರುವುದಿಲ್ಲ. ಆಗ ಪ್ರವಾದಿ(ಸ) ಹೇಳಿದರು- ಅವರು ಸ್ನಾನ ಮಾಡಬೇಕು. ಆ ವ್ಯಕ್ತಿ ಮತ್ತೆ ಪ್ರಶ್ನಿಸುತ್ತಾರೆ- ಒಬ್ಬನು ತನಗೆ ಸ್ವಪ್ನ ಸ್ಖಲನ ವಾಗಿದೆ ಎಂದು ಭಾವಿಸುತ್ತಾನೆ. ಆದರೆ (ಬಟ್ಟೆ ಅಥವಾ) ಹಾಸಿಗೆ ಒದ್ದೆಯಾಗಿರುವುದಿಲ್ಲ. ಆಗ ಪ್ರವಾದಿ(ಸ)- ಅವನು ಸ್ನಾನ ಮಾಡಬೇಕಾಗಿಲ್ಲ ಎಂದರು."

(ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

4) ಸ್ತ್ರೀ-ಪುರುಷರ ಗುಪ್ತಾಂಗಗಳ ಮಿಲನ: ಅರ್ಥಾತ್, ಪುರುಷನ ಲಿಂಗವು ಸ್ತ್ರೀಯ ಯೋನಿಯೊಳಗೆ ಪ್ರವೇಶಿಸಿದರೆ, ವೀರ್ಯಸ್ಖಲನವಾದರೂ-ಆಗದಿದ್ದರೂ ಸ್ನಾನ ಕಡ್ಡಾಯ ವಾಗುತ್ತದೆ.

ಇಮಾಮ್ ಸಈದ್ ಬಿನ್ ಮುಸಯ್ಯಿಬ್(ರ) ವರದಿ ಮಾಡುತ್ತಾರೆ:

"ಒಮ್ಮೆ ಹ. ಅಬೂ ಮೂಸಾ ಅಶ್‌ಅರೀ(ರ) ಹ. ಆಯಿಶಾರವರಲ್ಲಿ(ರ) ಹೀಗೆ ಹೇಳಿದರು- ನಾನು ತಮ್ಮಲ್ಲಿ ಒಂದು ವಿಷಯ ಕೇಳಬೇಕೆಂದಿದ್ದೇನೆ ಆದರೆ ನನಗೆ ನಾಚಿಕೆ ಯಾಗುತ್ತದೆ. ಆಗ ಹ. ಆಯಿಶಾ(ರ) ಹೇಳಿದರು- (ಸಂಕೋಚವಿಲ್ಲದೆ) ಕೇಳಿ, ನಾನು ನಿಮ್ಮ ತಾಯಿಯಾಗಿರುವೆನು. ಆಗ ಅವರು ಕೇಳಿದರು- ಪುರುಷನು ಸ್ತ್ರೀಯನ್ನು ಆವರಿಸಿಕೊಳ್ಳುತ್ತಾನೆ. ಆದರೆ ವೀರ್ಯಸ್ಖಲನವಾಗುವುದಿಲ್ಲ. ಆಗ ಹ. ಆಯಿಶಾ(ರ) ಹೇಳಿದರು- ಎರಡು ಗುಪ್ತಾಂಗ ಗಳು ಪರಸ್ಪರ ಕೂಡಿಕೊಂಡಿದ್ದರೆ ಸ್ನಾನ ಕಡ್ಡಾಯವಾಗುತ್ತದೆ."

(ಮುಸ್ನದ್ ಅಹ್ಮದ್, ಮುವತ್ತಾ ಇಮಾಮ್ ಮಾಲಿಕ್)

ಇಬ್ಬರು ಪರಸ್ಪರ ಸಂಸರ್ಗ ನಡೆಸದಿದ್ದರೆ ಹಾಗೂ ವೀರ್ಯ ಸ್ಖಲನವೂ ಆಗದಿದ್ದರೆ ಸ್ತ್ರೀ ಪುರುಷರ ಪೈಕಿ ಯಾರ ಮೇಲೂ ಸ್ನಾನ ಕಡ್ಡಾಯವಿಲ್ಲವೆಂಬುದು ಒಂದು ಸರ್ವ ಸಮ್ಮತ ವಿಷಯ.

5) ಋತುಸ್ರಾವ ಮತ್ತು ಹೆರಿಗೆ ಸ್ರಾವದ ನಂತರ ಸ್ನಾನ ಕಡ್ಡಾಯವಾಗಿದೆ. ಅಲ್ಲಾಹನು ಈ ರೀತಿ ಹೇಳಿರುವನು- ಋತುಸ್ರಾವದ ವೇಳೆ ಮಹಿಳೆಯರನ್ನು ಸಮೀಪಿಸದಿರಿ, ಅವರು ಶುದ್ಧವಾಗುವ ತನಕ. ಮತ್ತೆ ಅವರು ಶುದ್ಧವಾದ ನಂತರ ಅವರನ್ನು ಸಮೀಪಿಸಿರಿ. ಪ್ರವಾದಿ(ಸ) ಹೇಳಿರುವರು- "ಸಾಮಾನ್ಯವಾಗಿ ಎಷ್ಟು ದಿನ ನಿಮಗೆ ಋತುಸ್ರಾವ ಆಗುತ್ತಿತ್ತೋ ಅಷ್ಟು ದಿನ ನಮಾಝ್ ಬಿಟ್ಟು ಬಿಡಿರಿ. ಅನಂತರ ಸ್ನಾನ ಮಾಡಿ ನಮಾಝ್ ಮಾಡಿರಿ."

(ವರದಿ: ಫಾತಿಮ ಬಿನ್ತಿ ಅಬೂ ಹುಬೈಶ್(ರ)- ಬುಖಾರಿ, ಮುಸ್ಲಿಮ್)

ಇಲ್ಲಿ ಋತುಸ್ರಾವದ ವಿಧಿಯನ್ನು ವಿವರಿಸಲಾಗಿದ್ದರೂ ಹೆರಿಗೆಯ ಸ್ರಾವವೂ ಇದೇ ವಿಧಿಯ ವ್ಯಾಪ್ತಿಗೆ ಬರುತ್ತದೆಂಬ ಬಗ್ಗೆ ಸಹಾಬಿಗಳಲ್ಲಿ(ರ) ಒಮ್ಮತವಿದೆ.

## 2. ಜನಾಬತ್‌ನ ಸ್ಥಿತಿಯಲ್ಲಿ ಮಾಡಬಾರದ ಕಾರ್ಯಗಳು

1) ನಮಾಝ್: ಜನಾಬತ್‌ನ ಸ್ಥಿತಿಯಲ್ಲಿ ಫರ್ಝ್, ಸುನ್ನತ್, ನಫಿಲ್ ಯಾವುದೇ ನಮಾಝ್ ಮಾಡಬಾರದು. ಈ ಬಗ್ಗೆ ವಿದ್ವಾಂಸರಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲ.

2) ಜನಾಬತ್‌ನ ಸ್ಥಿತಿಯಲ್ಲಿ ಪವಿತ್ರ ಕುರ್‌ಆನನ್ನು ಸ್ಪರ್ಶಿಸುವುದು ಧರ್ಮ ಸಮ್ಮತವಲ್ಲ. ಈ ವಿಷಯದಲ್ಲೂ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತವಿದೆ. ಅಲ್ಲಾಹನು ಈ ರೀತಿ ಹೇಳಿರುವನು: "ಈ ಕುರ್‌ಆನನ್ನು ಪರಿಶುದ್ಧರಲ್ಲದವರು ಸ್ಪರ್ಶಿಸಬಾರದು."

ಪ್ರವಾದಿವರ್ಯರು(ಸ), ಹ. ಜಾಬಿರ್‌ರವರಿಗೆ(ರ) ಬರೆದ ಪತ್ರದಲ್ಲಿ ಈ ರೀತಿ ಆದೇಶಿಸಿದ್ದರು: "ಕುರ್‌ಆನನ್ನು ಕೇವಲ ಶುದ್ಧವಾದ ಜನರೇ ಸ್ಪರ್ಶಿಸಬೇಕು."

(ನಸಾಈ, ದಾರಕುತ್ನಿ, ಬೈಹಕಿ)

3) ಜನಾಬತ್‌ನ ಸ್ಥಿತಿಯಲ್ಲಿ ಪವಿತ್ರ ಕುರ್‌ಆನಿನ ಪಾರಾಯಣ ಕೂಡಾ ಧರ್ಮ ಸಮ್ಮತ ವಲ್ಲವೆಂಬುದೇ ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರದ ಅಭಿಮತ.

ಪ್ರವಾದಿ(ಸ) ವುಝೂ ಮಾಡಿದರು. ಅನಂತರ ಪವಿತ್ರ ಕುರ್‌ಆನಿನ ಕೆಲವು ಸೂಕ್ತ ಗಳನ್ನು ಪಠಿಸಿದರು ಮತ್ತು ಈ ರೀತಿ ಹೇಳಿದರು: "ಜನಾಬತ್‌ನ ಸ್ಥಿತಿಯಲ್ಲಿಲ್ಲದವನು ಹೀಗೆಯೇ ಮಾಡಬೇಕು. ಆದರೆ ಜನಾಬತ್‌ನ ಸ್ಥಿತಿಯಲ್ಲಿರುವವನು ಒಂದೇ ಒಂದು ಆಯತ್ ಕೂಡಾ ಪಠಿಸಬಾರದು." (ವರದಿ: ಹ. ಅಲೀ(ರ)- ಅಹ್ಮದ್, ಅಬೂ ಯಅ್‌ಲಾ)

4) ಜನಾಬತ್‌ನ ಸ್ಥಿತಿಯಲ್ಲಿರುವವನು ಮಸೀದಿಯಲ್ಲಿ ಕುಳಿತುಕೊಳ್ಳುವುದಾಗಲಿ ನಿಲ್ಲುವುದಾಗಲಿ ಧರ್ಮಸಮ್ಮತವಲ್ಲ.

"ಪ್ರವಾದಿವರ್ಯರು(ಸ) ಮದೀನಾಕ್ಕೆ ಆಗಮಿಸಿ ಅಲ್ಲಿ ಮಸೀದಿ ನಿರ್ಮಾಣ ಮಾಡಿದಾಗ ಕೆಲವು ಸಹಾಬಿಗಳ ಮನೆಯ ಬಾಗಿಲು ಮಸೀದಿಯ ಕಡೆಗಿತ್ತು. ಆಗ ಪ್ರವಾದಿ(ಸ) ಆ ಮನೆಗಳ ದಿಕ್ಕನ್ನು ಮಸೀದಿಯ ಕಡೆಯಿಂದ ಬದಲಾಯಿಸಿ ಎಂದು ಆಜ್ಞಾಪಿಸಿದರು. ಅನಂತರ ಒಮ್ಮೆ ಪ್ರವಾದಿ(ಸ) ನೋಡಿದಾಗ ಜನರು ತಮ್ಮ ಮನೆಗಳ ದಿಕ್ಕನ್ನು ಬದಲಾಯಿಸಿರಲಿಲ್ಲ. ಅಲ್ಲಾಹನ ಕಡೆಯಿಂದ ಈ ಬಗ್ಗೆ ಏನಾದರೂ ವಿನಾಯಿತಿ ಬಂದೀತೆಂದು ಅವರು ನಿರೀಕ್ಷಿಸುತ್ತಿದ್ದರು. ಆದರೆ ಪ್ರವಾದಿಯವರು(ಸ) ಅವರಿಗೆ ಈ ರೀತಿ ಆದೇಶಿಸಿದರು- ಈ ಮನೆಯ ದಿಕ್ಕುಗಳನ್ನು ಮಸೀದಿಯಿಂದ ಬೇರೆಡೆಗೆ ಮಾಡಿಕೊಳ್ಳಿ. ಏಕೆಂದರೆ ಜನಾಬತ್ ಮತ್ತು ಋತುಸ್ರಾವದಲ್ಲಿರು ವವರಿಗೆ ನಾನು ಮಸೀದಿಯನ್ನು ಧರ್ಮಸಮ್ಮತಗೊಳಿಸುವುದಿಲ್ಲ."

(ವರದಿ: ಹ. ಆಯಿಶಾ(ರ)- ಅಬೂ ದಾವೂದ್)

ಮಸೀದಿಯಲ್ಲಿ ಕುಳಿತುಕೊಳ್ಳುವುದು ಮತ್ತು ನಿಲ್ಲುವುದು ಮಾತ್ರ ಜನಾಬತ್‌ನವನಿಗೆ ನಿಷಿದ್ಧವಾಗಿದ್ದು ಅವನು ಅಗತ್ಯ ಬಂದಾಗ ಮಸೀದಿಯನ್ನು ದಾಟಬಹುದು. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ.

"ಅದೇ ರೀತಿಯಲ್ಲಿ ಜನಾಬತ್‌ನ ಸ್ಥಿತಿಯಲ್ಲಿಯೂ ಸ್ನಾನ ಮಾಡಿಕೊಳ್ಳದೆ ನಮಾಝನ್ನು ಸಮೀಪಿಸಬೇಡಿರಿ, ನೀವು ದಾರಿಗರಾಗಿರುವಾಗ ಹೊರತು." (ಪವಿತ್ರ ಕುರ್‌ಆನ್, 4:43)

## 3. ಯಾವ ಕಾರ್ಯಗಳಿಗೆ ಸ್ನಾನ ಸುನ್ನತ್ ಆಗಿದೆ?

**1) ಶುಕ್ರವಾರ:** ಶುಕ್ರವಾರ ಸ್ನಾನ ಮಾಡಬೇಕೆಂದು ಪ್ರವಾದಿ(ಸ) ಬಲವಾಗಿ ತಾಕೀತು ಮಾಡಿದ್ದಾರೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ಜುಮಾ ನಮಾಝ್‌ಗೆ ಬರುವುದಿದ್ದರೆ ಅವರು ಸ್ನಾನ ಮಾಡಿ ಬರಲಿ."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಇನ್ನೊಂದು ಪ್ರವಾದಿ ವಚನವು ಹೀಗಿದೆ:

"ಶುಕ್ರವಾರದ ಸ್ನಾನವು ಪ್ರತಿಯೊಬ್ಬ ವಯಸ್ಕನಿಗೆ ಅಗತ್ಯವಾಗಿದೆ."

(ಬುಖಾರಿ, ಮುಸ್ಲಿಮ್)

ಈ ಮೇಲಿನ ಹದೀಸ್‌ಗಳಲ್ಲಿ ಶುಕ್ರವಾರದ ಸ್ನಾನವು ಕಡ್ಡಾಯವೆಂದು ಭಾಸವಾದರೂ ಇನ್ನು ಕೆಲವು ಹದೀಸ್‌ಗಳ ಆಧಾರದಲ್ಲಿ ಅದನ್ನು ಸುನ್ನತ್ ಎಂದು ಪರಿಗಣಿಸಲಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾವನು ಜುಮಾ ನಮಾಝ್‌ಗಾಗಿ ವುಝೂ ಮಾಡಿದನೋ ಅವನು ಬಹಳ ಉತ್ತಮ ಕಾರ್ಯ ಮಾಡಿದನು. ಯಾವನು ಸ್ನಾನ ಮಾಡಿದನೋ ಅವನು ಅದಕ್ಕಿಂತ ಉತ್ತಮ ಕಾರ್ಯ ಮಾಡಿದನು."

(ವರದಿ: ಹ. ಸಮ್ರ: ಬಿನ್ ಜುಂದುಬ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ)

"ಯಾರು ಉತ್ತಮ ರೀತಿಯಲ್ಲಿ ವುಝೂ ಮಾಡಿ ಜುಮಾ ನಮಾಝ್‌ಗೆ ಬಂದು ಸುಮ್ಮನಿದ್ದು ಖುತ್‌ಬಾ(ಪ್ರವಚನ) ಆಲಿಸುತ್ತಿರುತ್ತಾನೋ ಅವನ ಎರಡು ಶುಕ್ರವಾರಗಳ ನಡುವಿನ ಮತ್ತು ಮೂರು ಅಧಿಕ ದಿನಗಳ ಪಾಪಗಳು ಕ್ಷಮಿಸಲ್ಪಡುತ್ತವೆ."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್)

ಈ ಹದೀಸ್‌ಗಳ ಆಧಾರದಲ್ಲಿ ಕರ್ಮಶಾಸ್ತ್ರದ ನಾಲ್ಕು ಇಮಾಮ್‌ಗಳ ಅಭಿಪ್ರಾಯದಂತೆ ಶುಕ್ರವಾರದ ಸ್ನಾನವು ಸುನ್ನತೆ ಮುಅಕ್ಕದಃ ಆಗಿದೆ.

**2) ಈದ್:** ಈದ್‌ನ ದಿನ ಸ್ನಾನ ಮಾಡುವುದು ಕೂಡಾ ನಾಲ್ಕೂ ಕರ್ಮಶಾಸ್ತ್ರದ ಇಮಾಮರ ಅಭಿಪ್ರಾಯದಂತೆ ಸುನ್ನತೆ ಮುಅಕ್ಕದಃ ಆಗಿದೆ.

**3) ಮಯ್ಯಿತ್‌ಗೆ ಸ್ನಾನ ಮಾಡಿಸಿದ ಬಳಿಕ:** ಮಯ್ಯಿತ್(ಮೃತದೇಹ)ಗೆ ಸ್ನಾನ ಮಾಡಿಸಿದವನು ಆ ಬಳಿಕ ಸ್ವತಃ ಸ್ನಾನ ಮಾಡುವುದು ಅಪೇಕ್ಷಣೀಯವಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಮಯ್ಯಿತ್‌ಗೆ ಸ್ನಾನ ಮಾಡಿಸಿದವನು ಸ್ನಾನ ಮಾಡಬೇಕು ಮತ್ತು ಮಯ್ಯಿತನ್ನು ಎತ್ತಿದವನು ವುಝೂ ಮಾಡಬೇಕು."

**(ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಅಬೂ ದಾವೂದ್, ನಸಾಈ, ತಿರ್ಮಿದಿ)**

ಪ್ರವಾದಿವರ್ಯರ(ಸ) ಈ ಆದೇಶವು ಅಪೇಕ್ಷಣೀಯವೆಂಬರ್ಥದಲ್ಲಿದೆ ಎಂಬುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯ. ಏಕೆಂದರೆ ಹ. ಉಮರ್(ರ) ಈ ರೀತಿ ವರದಿ ಮಾಡಿರುವರು- "ನಾವು ಮಯ್ಯಿತ್‌ಗೆ ಸ್ನಾನ ಮಾಡಿಸುತ್ತಿದ್ದೆವು. ನಮ್ಮ ಪೈಕಿ ಕೆಲವರು ವುಝೂ ಮಾಡುತ್ತಿದ್ದರು ಮತ್ತು ಕೆಲವರು ಮಾಡುತ್ತಿರಲಿಲ್ಲ." **(ಅಲ್ ಖತೀಬ್)**

"ಹ. ಅಬೂಬಕರ್ ಸಿದ್ದೀಕ್(ರ) ನಿಧನರಾದಾಗ ಅವರ ಹೆಂಡತಿ ಅಸ್ಮಾ ಬಿನ್ತಿ ಉಮೈಸ್‌ರವರು(ರ) ಮಯ್ಯಿತ್‌ಗೆ ಸ್ನಾನ ಮಾಡಿಸಿದರು. ಸ್ನಾನ ಮಾಡಿಸಿ ಹೊರಬಂದ ನಂತರ ಅಲ್ಲಿಂದ ಮುಹಾಜಿರ್‌ಗಳು ಮತ್ತು ಇತರ ಸಹಾಬಿಗಳಲ್ಲಿ ಹೀಗೆ ವಿಚಾರಿಸಿದರು: ಇಂದು ತೀವ್ರ ಚಳಿ ಇದೆ. ನಾನು ಉಪವಾಸ ವ್ರತವನ್ನೂ ಆಚರಿಸಿದ್ದೇನೆ. ನಾನು ಸ್ನಾನ ಮಾಡುವುದು ಅಗತ್ಯವೇ? ಆಗ ಅವರು- 'ಇಲ್ಲ' ಎಂದರು." **[ಮುವತ್ತಾ ಇಮಾಮ್ ಮಾಲಿಕ್(ರ)]**

ಆದ್ದರಿಂದ ಇಮಾಮ್ ಶಾಫಿಈಯವರ(ರ) ಅಭಿಪ್ರಾಯದಂತೆ ಮಯ್ಯಿತ್‌ಗೆ ಸ್ನಾನ ಮಾಡಿಸಿದವನು ಸ್ನಾನ ಮಾಡುವುದು ಅಪೇಕ್ಷಣೀಯ. ಆದರೆ ಇಮಾಮ್ ಅಬೂ ಹನೀಫಾ ರವರು(ರ) ಸ್ನಾನ ಮಾಡಬೇಕಾಗಿಲ್ಲವೆಂದಿರುವರು.

**4) ಇಹ್ರಾಮ್ ಕಟ್ಟುವಾಗ:** ಹಜ್ಜ್‌ಗಾಗಿ ಇಹ್ರಾಮ್ ಬಟ್ಟೆ ಧರಿಸುವಾಗ ಸ್ನಾನ ಮಾಡುವುದು ಅಪೇಕ್ಷಣೀಯವೆಂಬುದು ಸರ್ವಸಮ್ಮತ ವಿಷಯ.

"ಹ. ಝೈದ್ ಬಿನ್ ಸಾಬಿತ್(ರ) ವರದಿ ಮಾಡಿರುತ್ತಾರೆ- ಪ್ರವಾದಿವರ್ಯರು(ಸ) ಇಹ್ರಾಮ್ ಕಟ್ಟಲಿಕ್ಕಾಗಿ ಬಟ್ಟೆ ಕಳಚುವುದನ್ನು ಮತ್ತು ಸ್ನಾನ ಮಾಡುವುದನ್ನು ನಾನು ಕಂಡಿದ್ದೇನೆ." **(ದಾರಕುತ್ನಿ, ಬೈಹಕಿ, ತಿರ್ಮಿದಿ)**

**5) ಮಕ್ಕಾ ನಗರವನ್ನು ಪ್ರವೇಶಿಸುವಾಗ:** ಮಕ್ಕಾ ನಗರವನ್ನು ಪ್ರವೇಶಿಸ ಬಯಸುವ ವ್ಯಕ್ತಿ ಸ್ನಾನ ಮಾಡಬೇಕಾದುದು ಅಪೇಕ್ಷಣೀಯವೆಂಬುದು ಕೂಡಾ ಸರ್ವಸಮ್ಮತ ವಿಷಯ.

ಹ. ಇಬ್ನು ಉಮರ್(ರ) ವರದಿ ಮಾಡಿರುವರು: "ಪ್ರವಾದಿ(ಸ) ಪವಿತ್ರ ಮಕ್ಕಾ ನಗರಕ್ಕೆ ಆಗಮಿಸುವಾಗ 'ದೀತುವಾ' ಎಂಬಲ್ಲಿ ರಾತ್ರಿ ತಂಗುತ್ತಿದ್ದರು ಮತ್ತು ಬೆಳಗ್ಗಿನ ಜಾವ ಸ್ನಾನ ಮಾಡಿ ಮಕ್ಕಾ ನಗರ ಪ್ರವೇಶಿಸುತ್ತಿದ್ದರು." **(ಬುಖಾರಿ, ಮುಸ್ಲಿಮ್)**

**6) ಮದೀನಾ ನಗರವನ್ನು ಪ್ರವೇಶಿಸುವಾಗ:** ನಾಲ್ಕೂ ಕರ್ಮಶಾಸ್ತ್ರದ ಇಮಾಮರ ಅಭಿಪ್ರಾಯದಂತೆ ಮದೀನಾ ಪಟ್ಟಣವನ್ನು ಪ್ರವೇಶಿಸುವಾಗಲೂ ಸ್ನಾನ ಮಾಡುವುದು ಅಪೇಕ್ಷಣೀಯವಾಗಿದೆ.

**7) ಅರಫಾದಲ್ಲಿ ತಂಗುವಾಗ:** ಹಜ್ಜ್‌ಗಾಗಿ ಅರಫಾದಲ್ಲಿ ತಂಗುವವನೂ ಸ್ನಾನ ಮಾಡುವುದು ಅಪೇಕ್ಷಣೀಯವಾಗಿದೆ.

ಹ. ನಾಫಿಅ್(ರ) ವರದಿ ಮಾಡುತ್ತಾರೆ- "ಹ. ಅಬ್ದುಲ್ಲಾ ಬಿನ್ ಉಮರ್(ರ) ಇಹ್ರಾಮ್ ಕಟ್ಟುವುದಕ್ಕೆ ಮುಂಚೆ, ಮಕ್ಕಾ ನಗರವನ್ನು ಪ್ರವೇಶಿಸುವಾಗ ಮತ್ತು ಅರಫಾದಲ್ಲಿ ಸಂಜೆಯ ಹೊತ್ತು ತಂಗುವಾಗ ಸ್ನಾನ ಮಾಡುತ್ತಿದ್ದರು." [ಮುವತ್ತಾ ಇಮಾಮ್ ಮಾಲಿಕ್(ರ)]

# ಸ್ನಾನದ ವಿಧಿಗಳು

## 1. ಸ್ನಾನದ ಫರ್ಳ್ (ಕಡ್ಡಾಯ ವಿಧಿ)ಗಳು

ಸ್ನಾನಕ್ಕೆ ಎರಡು ವಿಷಯಗಳು ಕಡ್ಡಾಯವಾಗಿವೆ-

**1) ನಿಯ್ಯತ್(ಸಂಕಲ್ಪ):** ಎಲ್ಲ ಆರಾಧನೆಗಳು ಮತ್ತು ಧಾರ್ಮಿಕ ಕ್ರಿಯೆಗಳಂತೆ ಸ್ನಾನಕ್ಕೂ ನಿಯ್ಯತ್ ಕಡ್ಡಾಯವಾಗಿದೆ. ಇದು ಇಮಾಮ್ ಶಾಫಿಈಯವರ(ರ) ಅಭಿಪ್ರಾಯ. ಹನಫೀ ಕರ್ಮಶಾಸ್ತ್ರದಂತೆ ಸ್ನಾನಕ್ಕೆ ನಿಯ್ಯತ್ ಕಡ್ಡಾಯವಲ್ಲ. ಬದಲಾಗಿ ಅದು ಸುನ್ನತೆ ಮುಅಕ್ಕದಃ ಆಗಿದೆ.

**2) ಶರೀರದ ಎಲ್ಲ ಅಂಗಗಳನ್ನೂ ತೊಳೆಯುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾರಾದರೂ ಜನಾಬತ್‌ಗಾಗಿ ಸ್ನಾನ ಮಾಡುವಾಗ ಒಂದು ರೋಮದಷ್ಟು ಜಾಗವನ್ನಾದರೂ ಒದ್ದೆ ಮಾಡದೆ ಬಿಟ್ಟರೆ ಅಲ್ಲಾಹನು ಅವನೊಂದಿಗೆ ಕಠಿಣವಾಗಿ ವರ್ತಿಸುವನು." (ವರದಿ: ಹ. ಅಲೀ(ರ)- ಅಹ್ಮದ್, ಅಬೂ ದಾವೂದ್)

ಹನಫೀ ಕರ್ಮಶಾಸ್ತ್ರದಂತೆ ಬಾಯಿ ಮುಕ್ಕಳಿಸುವುದು ಮತ್ತು ಮೂಗಿನ ರಂಧ್ರಗಳೊಳಗೆ ನೀರು ಹಾಕುವುದು ಕೂಡಾ ಸ್ನಾನದ ಕಡ್ಡಾಯ ವಿಧಿಗಳಲ್ಲಿ ಸೇರಿದೆ. ಏಕೆಂದರೆ ಬಾಯಿ ಮತ್ತು ಮೂಗಿನ ಒಳಗಿನ ಭಾಗ ಶರೀರದ ಅಂಗಗಳಾಗಿದ್ದು ಸ್ನಾನದಲ್ಲಿ ಪೂರ್ಣ ಶರೀರವನ್ನು ತೊಳೆಯವುದು ಕಡ್ಡಾಯವಾಗಿದೆ.

## 2. ಸ್ನಾನದ ಸುನ್ನತ್‌ಗಳು

1) ಮೂರು ಸಲ ಕೈ ತೊಳೆಯುವುದು.

2) ಗುಪ್ತಾಂಗವನ್ನು ತೊಳೆಯುವುದು.

3) ವುಳೂ ಮಾಡುವುದು. ಒಬ್ಬ ವ್ಯಕ್ತಿಯು ಸ್ನಾನ ಮಾಡುವ ನೆಲವು ಶುದ್ಧ ವಾಗಿಲ್ಲದಿದ್ದರೆ ವುಳೂವಿಗಾಗಿ ಕಾಲನ್ನು ಸ್ನಾನದ ನಂತರ ತೊಳೆಯಬಹುದಾಗಿದೆ.

4) ತಲೆಯ ಮೇಲೆ ಮೂರು ಸಲ ನೀರು ಸುರಿಯುವುದು ಮತ್ತು ತಲೆ ಕೂದಲುಗಳ ಮಧ್ಯೆ ಬೆರಳು ಹಾಕಿ ತಿಕ್ಕಿ ನೀರು ಕೂದಲಿನ ಬುಡಕ್ಕೆ ತಲಪುವಂತೆ ತೊಳೆಯುವುದು.

5) ಅನಂತರ ಇಡೀ ದೇಹಕ್ಕೆ ನೀರು ಸುರಿಯುವುದು. ಮೊದಲು ಬಲಭಾಗದ ಅಂಗ ಗಳನ್ನೂ ನಂತರ ಎಡಭಾಗದ ಅಂಗಗಳನ್ನೂ ತೊಳೆಯುವುದು. ಸಾಧ್ಯವಿದ್ದಷ್ಟು ಎಲ್ಲ ಅಂಗ ಗಳನ್ನು ತಿಕ್ಕಿ ತೊಳೆಯವುದು.

"ಪ್ರವಾದಿ(ಸ) ಜನಾಬತ್‌ನ ಸ್ನಾನ ಮಾಡುವಾಗ ಮೊದಲು ತಮ್ಮ ಕೈಗಳನ್ನು ತೊಳೆಯುತ್ತಿದ್ದರು. ಅನಂತರ ಬಲಕೈಯಿಂದ ಎಡಕೈಗೆ ನೀರು ಸುರಿದು ಗುಪ್ತಾಂಗಗಳನ್ನು ತೊಳೆಯುತ್ತಿದ್ದರು. ತರುವಾಯ ನಮಾಝ್‌ಗೆ ವುಝೂ ಮಾಡುವಂತೆ ವುಝೂ ಮಾಡುತ್ತಿದ್ದರು. ಅನಂತರ ತಲೆಗೆ ನೀರು ತಾಗಿಸಿ ತಮ್ಮ ಕೂದಲುಗಳ ಬುಡಕ್ಕೆ ಬೆರಳು ತಾಗಿಸುತ್ತಿದ್ದರು. ನೀರು ಕೂದಲಿನ ಬುಡಕ್ಕೆ ತಲುಪಿದೆ ಎಂದು ಖಾತ್ರಿಯಾದ ನಂತರ ತಲೆಯ ಮೇಲೆ ಮೂರು ಬೊಗಸೆ ನೀರು ಹಾಕಿ ಇಡೀ ದೇಹದ ಮೇಲೆ ನೀರು ಸುರಿಯುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

ಹ. ಮೈಮೂನ(ರ) ವರದಿ ಮಾಡುತ್ತಾರೆ- "ನಾನು ಪ್ರವಾದಿವರ್ಯರಿಗೆ(ಸ) ಸ್ನಾನಕ್ಕೆ ನೀರು ತಂದಿಟ್ಟೆ. ಪ್ರವಾದಿ(ಸ) ಮೊದಲು ತಮ್ಮ ಕೈಗಳಿಗೆ ನೀರು ಸುರಿದು ಅವುಗಳನ್ನು ಮೂರು ಸಲ ತೊಳೆದರು. ಅನಂತರ ಬಲಕೈಯಿಂದ ಎಡಕೈಗೆ ನೀರು ಸುರಿದು ಗುಪ್ತಾಂಗವನ್ನು ತೊಳೆದರು. ಅನಂತರ ತಮ್ಮ ಕೈಗಳನ್ನು ನೆಲಕ್ಕೆ ತಿಕ್ಕಿದರು. ಆ ಬಳಿಕ ಬಾಯಿ ಮುಕ್ಕಳಿಸಿ ಮೂಗಿನೊಳಗೆ ನೀರು ಹಾಕಿದರು. ಅನಂತರ ಮುಖ ಮತ್ತು ಕೈಗಳನ್ನು ತೊಳೆದರು. ಆ ಬಳಿಕ ಮೂರು ಸಲ ತಲೆಯನ್ನು ತೊಳೆದರು. ಬಳಿಕ ಇಡೀ ದೇಹಕ್ಕೆ ನೀರು ಸುರಿದರು. ಅನಂತರ ತನ್ನ ಸ್ಥಾನದಿಂದ ಸರಿದು ಕಾಲು ತೊಳೆದರು."

(ಬುಖಾರಿ, ಮುಸ್ಲಿಮ್)

## 3. ಮಹಿಳೆಯ ಸ್ನಾನ

ಮಹಿಳೆಯ ಸ್ನಾನವೂ ಪುರುಷನಂತೆಯೇ ಇದೆ. ಆದರೆ ಆಕೆ ತನ್ನ ಜುಟ್ಟನ್ನು ಬಿಚ್ಚ ಬೇಕಾದುದು ಕಡ್ಡಾಯವಲ್ಲ.

"ಓರ್ವ ಮಹಿಳೆ ಪ್ರವಾದಿವರ್ಯರಲ್ಲಿ(ಸ) ಪ್ರಶ್ನಿಸಿದರು- 'ನಾನು ನನ್ನ ಜುಟ್ಟನ್ನು ಬಿಗಿಯಾಗಿ ಕಟ್ಟುತ್ತೇನೆ. ಜನಾಬತ್ ಸ್ನಾನದಲ್ಲಿ ಅದನ್ನು ಬಿಚ್ಚಬೇಕೇ?' ನೀವು ಮೂರು ಸಲ ಅದರ ಮೇಲೆ ನೀರು ಸುರಿದರೆ ಸಾಕು. ಆ ಬಳಿಕ ಇಡೀ ದೇಹಕ್ಕೆ ನೀರು ಸುರಿದರೆ ನೀವು ಶುದ್ಧವಾಗುವಿರಿ" ಎಂದು ಪ್ರವಾದಿ(ಸ) ಉತ್ತರಿಸಿದರು.

(ವರದಿ: ಹ. ಉಮ್ಮು ಸಲಮ(ರ)- ಅಹ್ಮದ್, ಮುಸ್ಲಿಮ್, ತಿರ್ಮಿದಿ, ನಸಾಈ, ಅಬೂ ದಾವೂದ್, ಇಬ್ನು ಮಾಜಃ)

ಆದರೆ ನಾಲ್ಕೂ ಕರ್ಮಶಾಸ್ತ್ರದ ಇಮಾಮರ ಪ್ರಕಾರ ಜುಟ್ಟು ಬಿಗಿಯಾಗಿ ಕಟ್ಟಿದ್ದರೆ ಮತ್ತು ಅದರಿಂದ ನೀರು ಕೂದಲಿನ ಬುಡಗಳಿಗೆ ತಲುಪುವುದಿಲ್ಲವೆಂದಾದರೆ ಅದನ್ನು ಬಿಚ್ಚಲೇಬೇಕು. ನೀರು ಕೂದಲಿನ ಬುಡಕ್ಕೆ ತಲುಪಬಹುದಾದರೆ ಬಿಚ್ಚುವ ಅಗತ್ಯವಿಲ್ಲ. ಒಟ್ಟಿನಲ್ಲಿ ಕೂದಲಿನ ಬುಡಗಳ ತನಕ ನೀರು ತಲಪುವುದು ಕಡ್ಡಾಯವಾಗಿದೆ.

◈

# ತಯಮ್ಮುಮ್

ತಯಮ್ಮುಮ್‌ನ ಅರ್ಥ ನಿರ್ಧಾರ ಮತ್ತು ಇರಾದೆ ಎಂದಾಗಿದೆ. ಶರೀಅತ್ (ಧರ್ಮ ಶಾಸ್ತ್ರ)ನಲ್ಲಿ ಕೈಗಳನ್ನು ಮಣ್ಣಿಗೆ ಬಡಿದು ಮುಖ ಮತ್ತು ಕೈಗಳ ಮೇಲೆ ಸವರುವುದಕ್ಕೆ ತಯಮ್ಮುಮ್ ಎನ್ನುತ್ತಾರೆ.

## 1. ತಯಮ್ಮುಮ್‌ನ ಅನುಮತಿ

ತಯಮ್ಮುಮ್‌ನ ಅನುಮತಿಯು ಪವಿತ್ರ ಕುರ್‌ಆನ್, ಸುನ್ನತ್ ಮತ್ತು ಸಮುದಾಯದ ಒಮ್ಮತಾಭಿಪ್ರಾಯ- ಮೂರರಿಂದಲೂ ಸಾಬೀತಾಗಿದೆ.

ಅಲ್ಲಾಹನು ಈ ರೀತಿ ಆದೇಶಿಸಿರುವನು:

**"ನೀವು ಅನಾರೋಗ್ಯದಿಂದಿದ್ದಾಗ ಅಥವಾ ಪ್ರಯಾಣದಲ್ಲಿದ್ದಾಗ ಅಥವಾ ನಿಮ್ಮಲ್ಲಾರಾದರೂ ಶೌಚ್ಯಕ್ಕೆ ಹೋಗಿ ಬಂದಾಗ ಅಥವಾ ನೀವು ಸ್ತ್ರೀಯರನ್ನು ಸ್ಪರ್ಶಿಸಿ ರುವಾಗ ನಿಮಗೆ ನೀರು ಸಿಗದೆ ಹೋದರೆ, ಶುದ್ಧ ಮಣ್ಣನ್ನು ಉಪಯೋಗಿಸಿಕೊಳ್ಳಿರಿ ಮತ್ತು ಅದರಿಂದ ಮುಖಗಳನ್ನೂ ಕೈಗಳನ್ನೂ ಸವರಿಕೊಳ್ಳಿರಿ." (ಪವಿತ್ರ ಕುರ್‌ಆನ್, 5:6)**

ಪ್ರವಾದಿ(ಸ) ಹೀಗೆ ಹೇಳಿರುವರು:

"ನನ್ನ ಪಾಲಿಗೆ ಮತ್ತು ನನ್ನ ಸಮುದಾಯದ ಪಾಲಿಗೆ ಸಂಪೂರ್ಣ ಭೂಮಿಯನ್ನು ಮಸೀದಿಯಾಗಿಯೂ ಶುದ್ಧ ವಸ್ತುವಾಗಿಯೂ ಮಾಡಲಾಗಿದೆ. ನನ್ನ ಸಮುದಾಯದ ಯಾವ ವ್ಯಕ್ತಿಗೆ ಎಲ್ಲಿ ನಮಾಝ್‌ನ ವೇಳೆಯಾದರೂ ಅವನ ಬಳಿ ಅವನು ಶುದ್ಧವಾಗುವ ವಸ್ತು ಇರುತ್ತದೆ." **(ವರದಿ: ಹ. ಅಬೂ ಹುರೈರಾ(ರ)- ಮುಸ್ನದ್ ಅಹ್ಮದ್)**

ವಿಶೇಷ ಪರಿಸ್ಥಿತಿಗಳಲ್ಲಿ ವುಝೂ ಮತ್ತು ಸ್ನಾನಕ್ಕೆ ಬದಲಾಗಿ ತಯಮ್ಮುಮ್ ಮಾಡಿಕೊಳ್ಳಬಹುದೆಂಬ ಬಗ್ಗೆ ಇಡೀ ಸಮುದಾಯದಲ್ಲಿ ಒಮ್ಮತಾಭಿಪ್ರಾಯವಿದೆ.

## 2. ಯಾವ ಪರಿಸ್ಥಿತಿಗಳಲ್ಲಿ ತಯಮ್ಮುಮ್ ಮಾಡಬಹುದು?

1) ನೀರು ಸಿಗದಿರುವಾಗ ಅಥವಾ ನೀರು ಸಿಕ್ಕಿದರೂ ವುಝೂ ಅಥವಾ ಸ್ನಾನಕ್ಕೆ ಸಾಕಾಗುವಷ್ಟು ಸಿಗದಿದ್ದಾಗ ಹನಫೀ ಕರ್ಮಶಾಸ್ತ್ರದಂತೆ ತಯಮ್ಮುಮ್ ಮಾಡಬಹುದು. ಶಾಫಿಈ ಕರ್ಮಶಾಸ್ತ್ರದಂತೆ ವುಝೂ ಅಥವಾ ಸ್ನಾನಕ್ಕೆ ಸಾಕಷ್ಟು ನೀರು ಸಿಗದಿದ್ದರೆ ಇದ್ದಷ್ಟು

ನೀರಿನಲ್ಲಿ ಸಾಧ್ಯವಿರುವ ಅಂಗಗಳನ್ನು ತೊಳೆದು ಉಳಿದುದಕ್ಕೆ ತಯಮ್ಮುಮ್ ಮಾಡಿ ಕೊಳ್ಳಬೇಕು.

ಹ. ಇಮ್ರಾನ್ ಬಿನ್ ಹಸೀನ್(ರ) ವರದಿ ಮಾಡುತ್ತಾರೆ- "ನಾವು ಒಂದು ಯಾತ್ರೆಯಲ್ಲಿ ಪ್ರವಾದಿವರ್ಯರ(ಸ) ಜೊತೆಗಿದ್ದೆವು. ಪ್ರವಾದಿ(ಸ) ನಮಾಝ್ ಮಾಡಿಸಿದರು. ಆಗ ಓರ್ವ ವ್ಯಕ್ತಿ ಒಂದು ಮೂಲೆಯಲ್ಲಿ ನಿಂತಿರುವುದು ಕಂಡು ಬಂತು. ನೀವು ಏಕೆ ನಮಾಝ್ ಮಾಡಲಿಲ್ಲ? ಎಂದು ಪ್ರವಾದಿ(ಸ) ಪ್ರಶ್ನಿಸಿದರು. ಅದಕ್ಕೆ ಅವರು- ನಾನು ಜನಾಬತ್‌ನ ಸ್ಥಿತಿಯಲ್ಲಿದ್ದೇನೆ ಹಾಗೂ ನೀರು ಸಿಗುತ್ತಿಲ್ಲ ಎಂದರು. ಆಗ ಪ್ರವಾದಿ(ಸ)- ಮಣ್ಣಿನಿಂದ ತಯಮ್ಮುಮ್ ಮಾಡಿರಿ, ಅದು ನಿಮಗೆ ಸಾಕಾಗುವುದು ಎಂದರು."

(ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೆ ಹೇಳಿರುವರು:

"ಒಬ್ಬನಿಗೆ ಹತ್ತು ವರ್ಷಗಳ ತನಕವೂ ನೀರು ಸಿಗದಿದ್ದರೆ, ಮಣ್ಣು ಅವನ ಪಾಲಿಗೆ ಶುದ್ಧ ಮಾಡುವ ವಸ್ತುವಾಗಿದೆ."

(ವರದಿ: ಹ. ಅಬೂದರ್ರ್(ರ)- ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಆದರೆ ತಯಮ್ಮುಮ್ ಮಾಡುವುದಕ್ಕೆ ಮುಂಚೆ ತನ್ನ ಸಂಗಾತಿಗಳ ಬಳಿ ಮತ್ತು ತನ್ನ ಸುತ್ತಮುತ್ತ ನೀರು ಇದೆಯೇ ಎಂದು ಹುಡುಕಬೇಕು. ನೀರು ಇಲ್ಲವೆಂದು ಅಥವಾ ಬಹಳ ದೂರದಲ್ಲಿದೆಯೆಂದು ಖಾತ್ರಿಯಾದಾಗ ತಯಮ್ಮುಮ್ ಮಾಡಬಹುದು. ಈ ಬಗ್ಗೆ ಎಲ್ಲ ಕರ್ಮಶಾಸ್ತ್ರ ವಿದ್ವಾಂಸರ ಸಹಮತವಿದೆ. ಆದರೆ ನೀರು ಎಷ್ಟು ದೂರದಲ್ಲಿದ್ದರೆ ತಯಮ್ಮುಮ್ ಮಾಡಬಹುದು ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ.

ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಅದು ಅವನ ಊರಾಗಿದ್ದರೆ ನೀರು ಹತ್ತಿರ ಇದೆ ಎಂದು ಅವನಿಗೆ ಗುಮಾನಿ ಇದ್ದರೂ ಇಲ್ಲದಿದ್ದರೂ ನೀರಿಗಾಗಿ ಹುಡುಕಬೇಕು. ಪ್ರಯಾಣದಲ್ಲಿದ್ದು ನೀರು ಒಂದು ಮೈಲಿ ಅಥವಾ ಅದಕ್ಕಿಂತ ಹೆಚ್ಚು ದೂರದ ಸ್ಥಳದಲ್ಲಿದೆ ಎಂದು ಗೊತ್ತಾದರೆ ತಯಮ್ಮುಮ್ ಮಾಡಿಕೊಳ್ಳಬಹುದು. ಆದರೆ ನೀರು ಒಂದು ಮೈಲಿಗಿಂತ ಕಡಿಮೆ ದೂರದಲ್ಲಿದ್ದು ಮಾರ್ಗದಲ್ಲಿ ಏನೂ ಅಪಾಯವಿಲ್ಲದಿದ್ದರೆ ಅವನು ನೀರು ಹುಡುಕಬೇಕು. ಶಾಫಿಈ ಕರ್ಮಶಾಸ್ತ್ರದಂತೆ ಈ ದೂರವು ಒಂದೂವರೆ ಮೈಲಿಯಾಗಿದೆ.

2) ವ್ಯಕ್ತಿಯು ರೋಗಿಯಾಗಿದ್ದು ಅಥವಾ ಶರೀರದಲ್ಲಿ ಏನಾದರೂ ಗಾಯವಿದ್ದು ನೀರಿನ ಉಪಯೋಗದಿಂದ ರೋಗ ಉಲ್ಬಣವಾಗುವ ಅಥವಾ ಶೀಘ್ರ ಗುಣವಾಗದಿರುವ ಭಯವಿದ್ದರೆ ತಯಮ್ಮುಮ್ ಮಾಡಬಹುದು.

ಹ. ಜಾಬಿರ್(ರ) ವರದಿ ಮಾಡುತ್ತಾರೆ- "ನಾವು ಕೆಲವು ಮಂದಿ ಒಂದು ಯಾತ್ರೆಗೆ ಹೊರಟಿದ್ದೆವು. ನಮ್ಮ ಪೈಕಿ ಒಬ್ಬ ವ್ಯಕ್ತಿಗೆ ಕಲ್ಲು ತಾಗಿ ಅವನ ತಲೆಗೆ ಪೆಟ್ಟಾಯಿತು. ಆ ದಿನವೇ ಅವರಿಗೆ ಸ್ವಪ್ನ ಸ್ಖಲನ ಉಂಟಾಯಿತು. ಅವರು ತನ್ನ ಸಂಗಾತಿಗಳೊಡನೆ- ನನಗೆ ತಯಮ್ಮುಮ್ ಮಾಡುವ ಅನುಮತಿ ಇದೆಯೇ? ಎಂದು ವಿಚಾರಿಸಿದರು. ಅವರು- ನಿನ್ನ ಬಳಿ ನೀರು ಇರುವುದರಿಂದ ನಿನಗೆ ತಯಮ್ಮುಮ್ ಮಾಡುವ ಅನುಮತಿ ಇಲ್ಲ

ಎಂದರು. ಆ ವ್ಯಕ್ತಿ ಸ್ನಾನ ಮಾಡಿದರು ಮತ್ತು ಅದರಿಂದಲೇ ನಿಧನರಾದರು. ನಾವು ಪ್ರವಾದಿವರ್ಯರ(ಸ) ಬಳಿ ಹಿಂತಿರುಗಿದಾಗ ಪ್ರವಾದಿವರ್ಯರಿಗೆ(ಸ) ಈ ಘಟನೆಯ ಸುದ್ದಿ ಸಿಕ್ಕಿತು. ಆಗ ಅವರು- ಅವರು ಆತನನ್ನು ಕೊಂದುಬಿಟ್ಟರು. ಅಲ್ಲಾಹನು ಅವರನ್ನು ಕೊಲ್ಲಲಿ. ಅವರಿಗೆ ತಿಳಿಯದೇ ಇರುವಾಗ ಅವರು ಯಾಕೆ ವಿಚಾರಿಸಲಿಲ್ಲ. ಏಕೆಂದರೆ ಅಜ್ಞಾನ ಎಂಬ ರೋಗದ ಗುಣವು ವಿಚಾರಣೆ ಮಾಡುವುದರಲ್ಲಿದೆ. ಆ ವ್ಯಕ್ತಿ ತಯಮ್ಮುಮ್ ಮಾಡಿದ್ದರೆ ಮತ್ತು ಗಾಯಕ್ಕೆ ಪಟ್ಟಿ ಕಟ್ಟಿ ಅದರ ಮೇಲೆ 'ಮಸಹ್' ಮಾಡಿ ಉಳಿದ ಶರೀರವನ್ನೂ ತೊಳೆದಿದ್ದರೆ ಅವರಿಗೆ ಸಾಕಾಗುತ್ತಿತ್ತು ಎಂದು ಹೇಳಿದರು."

(ಅಬೂ ದಾವೂದ್, ಇಬ್ನು ಮಾಜಃ, ದಾರಕುತ್ನಿ, ಇಬ್ನು ಸ್ಸಕನ್)

3) ನೀರು ಬಹಳ ತಣ್ಣಗಾಗಿದ್ದು ಅದರಿಂದ ವುಝೂ ಅಥವಾ ಸ್ನಾನ ಮಾಡಿದರೆ ಕಾಯಿಲೆ ಬೀಳುವ ಭಯವಿದ್ದರೆ, ಅದನ್ನು ಬಿಸಿಮಾಡುವ ಅಥವಾ ಮಾಡಿಸುವ ಸಾಮರ್ಥ್ಯವೂ ಇಲ್ಲದಿದ್ದರೆ ಹಾಗೂ ಎಲ್ಲಿಂದಲೂ ಬಿಸಿನೀರು ಸಿಗುವ ಸಾಧ್ಯತೆಯೂ ಇಲ್ಲದಿದ್ದರೆ ತಯಮ್ಮುಮ್ ಮಾಡಬಹುದು.

ಹನಫೀ ಕರ್ಮಶಾಸ್ತ್ರದ ಪ್ರಕಾರ ಕಾಯಿಲೆ ಬೀಳುವೆನೆಂದು ಖಾತ್ರಿಯಾಗಿ ಗೊತ್ತಿದ್ದರೆ ಮಾತ್ರ ತಯಮ್ಮುಮ್ ಮಾಡಬಹುದು. ಇಲ್ಲವಾದರೆ ವುಝೂ ಮಾಡಲೇಬೇಕು.

ಇಮಾಮ್ ಶಾಫಿಈಯವರ(ರ) ಪ್ರಕಾರ ಹೀಗೆ ತಯಮ್ಮುಮ್ ಮಾಡಿ ವುಝೂ ಮಾಡಿದವನು ಮತ್ತೆ ತನ್ನ ನಮಾಝನ್ನು ಪುನರಾವರ್ತಿಸಬೇಕು.

"ಹ. ಅಮ್ರ್ ಬಿನ್ ಆಸ್‌ರವರು(ರ) ವರದಿ ಮಾಡುತ್ತಾರೆ: ನಾವು 'ದಾತುಸ್ಸಲಾಸಿಲ್' ಎಂಬ ಯುದ್ಧಕ್ಕೆ ಕಳುಹಿಸಲ್ಪಟ್ಟಿದ್ದೆವು. ಒಂದು ರಾತ್ರಿ ತೀವ್ರ ಚಳಿ ಇತ್ತು. ನನಗೆ ಸ್ನಾನದ ಅಗತ್ಯವಿತ್ತು. ನಾನಾಗ ಸ್ನಾನ ಮಾಡಿದರೆ ಸತ್ತೇ ಹೋಗುವೆನು ಎಂಬ ಭಯವುಂಟಾಯಿತು. ಆದುದರಿಂದ ನಾನು ತಯಮ್ಮುಮ್ ಮಾಡಿ ಜನರಿಗೆ ನಮಾಝ್ ಮಾಡಿಸಿದೆ. ನಾವು ಮದೀನಾಕ್ಕೆ ಹಿಂದಿರುಗಿದಾಗ ಜನರು ಈ ಘಟನೆಯ ಕುರಿತು ಪ್ರವಾದಿವರ್ಯರಲ್ಲಿ(ಸ) ಪ್ರಸ್ತಾಪಿಸಿದರು. ಆಗ ಪ್ರವಾದಿವರ್ಯರು(ಸ)- ನೀವು ಜನಾಬತ್‌ನ ಸ್ಥಿತಿಯಲ್ಲಿ ಜನರಿಗೆ ನಮಾಝ್ ಮಾಡಿಸಿದಿರಾ? ಎಂದು ಪ್ರಶ್ನಿಸಿದರು. ಆಗ ನಾನು ಹೇಳಿದೆ- ನನಗೆ ಪವಿತ್ರ ಕುರ್‌ಆನಿನ ಒಂದು ಸೂಕ್ತ ನೆನಪಿಗೆ ಬಂದಿತ್ತು. 'ನೀವು ನಿಮ್ಮನ್ನೇ ನಾಶಗೊಳಿಸಿ ಕೊಳ್ಳಬೇಡಿ, ಖಂಡಿತವಾಗಿಯೂ ಅಲ್ಲಾಹನು ನಿಮ್ಮ ಮೇಲೆ ಕರುಣೆಯುಳ್ಳವ ನಾಗಿದ್ದಾನೆ.' ಆದ್ದರಿಂದ ನಾನು ತಯಮ್ಮುಮ್ ಮಾಡಿ ನಮಾಝ್ ಮಾಡಿದೆ. ಇದನ್ನು ಕೇಳಿ ಪ್ರವಾದಿ(ಸ) ನಕ್ಕು ಬಿಟ್ಟರು ಮತ್ತು ಏನನ್ನೂ ಹೇಳಲಿಲ್ಲ."

(ಅಹ್ಮದ್, ಅಬೂ ದಾವೂದ್, ಹಾಕಿಮ್, ದಾರಕುತ್ನಿ, ಇಬ್ನ್ ಹಿಬ್ಬಾನ್)

ಒಂದು ವರದಿಯ ಪ್ರಕಾರ ಇಮಾಮ್ ಶಾಫಿಈಯವರ(ರ) ಅಭಿಪ್ರಾಯದಂತೆ

ನೀರಿರುವಾಗ ಕೇವಲ ಭಯದಿಂದಾಗಿ ತಯಮ್ಮುಮ್ ಮಾಡುವುದು ಧರ್ಮಸಮ್ಮತವಲ್ಲ.

4) ನೀರು ಹತ್ತಿರವೇ ಇದೆ. ಆದರೆ ಅದನ್ನು ತರುವುದರಿಂದ ಪ್ರಾಣ, ಸೊತ್ತು ಅಥವಾ ಮಾನನಷ್ಟವಾಗುವ ಭಯವಿದೆ ಅಥವಾ ಸಂಗಾತಿಗಳು ತಪ್ಪಿ ಹೋಗುವ ಭಯವಿದೆ ಅಥವಾ ದಾರಿಯಲ್ಲಿ ಶತ್ರುಗಳಿದ್ದಾರೆ ಅಥವಾ ಸೆರೆಮನೆಯಲ್ಲಿ ಬಾವಿಯಿಂದ ನೀರು ತೆಗೆಯಲು ಯಾವ ವಸ್ತುವೂ ಇಲ್ಲದಿರುವುದು, ಇಂತಹ ಎಲ್ಲ ಪರಿಸ್ಥಿತಿಗಳಲ್ಲೂ ತಯಮ್ಮುಮ್ ಮಾಡಬಹುದಾಗಿದೆ. ಇದೊಂದು ಸರ್ವಸಮ್ಮತ ವಿಧಿಯಾಗಿದೆ. ಏಕೆಂದರೆ ಈ ಪರಿಸ್ಥಿತಿಗಳಲ್ಲಿ ನೀರು ಇರುವುದೂ ಇಲ್ಲದಿರುವುದೂ ಸಮಾನವಾಗಿದೆ.

5) ನೀರು ಇದ್ದಾಗ್ಯೂ ಅದು ಕುಡಿಯಲು ಅಗತ್ಯವಿದೆ ಅಥವಾ ಶೌಚ್ಯಕ್ಕೆ ಅಥವಾ ಇಂತಹ ಇನ್ನಿತರ ಅಗತ್ಯಗಳಿಗೆ ಬೇಕಾಗಬಹುದು. ವುಝೂ ಅಥವಾ ಸ್ನಾನ ಮಾಡಿದರೆ ಆ ನೀರು ಮುಗಿದು ಹೋಗುವುದು ಎಂಬ ಭಯವಿದ್ದರೆ ತಯಮ್ಮುಮ್ ಮಾಡಬಹುದು.

ಇಮಾಮ್ ಅಹ್ಮದ್(ರ) ವರದಿ ಮಾಡುತ್ತಾರೆ: ನೀರನ್ನು ತಮಗೆ ಕುಡಿಯಲಿಕ್ಕಾಗಿ ಸುರಕ್ಷಿತವಾಗಿಟ್ಟು ಅನೇಕ ಸಹಾಬಿಗಳು ತಯಮ್ಮುಮ್ ಮಾಡಿದ್ದರು.

ಈ ಕುರಿತು ಕರ್ಮಶಾಸ್ತ್ರ ಪಂಡಿತರಲ್ಲಿ ಭಿನ್ನಾಭಿಪ್ರಾಯವಿಲ್ಲ.

### 3. ತಯಮ್ಮುಮ್ ಮಾಡಬಹುದಾದ ಮಣ್ಣು

ಶುದ್ಧವಾದ ಮಣ್ಣು ಅಥವಾ ಮಣ್ಣಿನ ಜಾತಿಗೆ ಸೇರಿದ ಯಾವುದೇ ವಸ್ತುವಿನಿಂದ ತಯಮ್ಮುಮ್ ಮಾಡಬಹುದಾಗಿದೆ. ಉದಾ: ಮರಳು, ಕಲ್ಲು, ಕಲ್ಲುಹರಳು, ಸಿಮೆಂಟ್ ಇತ್ಯಾದಿ.

ಅಲ್ಲಾಹನು ಈ ರೀತಿ ಹೇಳಿರುವನು:

"ಶುದ್ಧ ಮಣ್ಣನ್ನು ಉಪಯೋಗಿಸಿಕೊಳ್ಳಿರಿ." (ಪವಿತ್ರ ಕುರ್‌ಆನ್, 5:6)

ಮೂಲದಲ್ಲಿ 'ಸಈದ್' ಎಂಬ ಪದ ಪ್ರಯೋಗವಾಗಿದ್ದು ಅದರ ತಾತ್ಪರ್ಯ ಭೂಮಿಯಾಗಿದೆ. ಅದು ಮಣ್ಣಾಗಿರಲಿ ಅಥವಾ ಇನ್ನಾವುದೇ ವಸ್ತುವಾಗಿರಲಿ ಎಂಬುದು ಭಾಷಾ ತಜ್ಞರ ಒಮ್ಮತಾಭಿಪ್ರಾಯ.

### 4. ತಯಮ್ಮುಮ್‌ನ ಕ್ರಮ

ತಯಮ್ಮುಮ್ ಮಾಡುವಾಗ ಮೊಟ್ಟಮೊದಲು 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' ಎಂದು ಪಠಿಸಬೇಕು. ನಂತರ ಎರಡೂ ಹಸ್ತಗಳನ್ನು ಮಣ್ಣಿಗೆ ಬಡಿದು, ಅವುಗಳನ್ನು ಊದಿ ಮುಖ ಮತ್ತು ಮುಂಗೈಗಳಿಗೆ ಸವರಬೇಕು. ಈ ಬಗ್ಗೆ ಇರುವ ಸ್ಪಷ್ಟವಾದ ಮತ್ತು ಅತ್ಯಂತ ನಂಬಲರ್ಹವಾದ ಹದೀಸ್ ಹಝ್ರತ್ ಅಮ್ಮಾರ್(ರ) ಅವರದ್ದಾಗಿದೆ. ಅದರಲ್ಲಿ ಅವರು ಈ ರೀತಿ ವಿವರಿಸುತ್ತಾರೆ:

"ಒಮ್ಮೆ ನನಗೆ ಸ್ನಾನದ ಆವಶ್ಯಕತೆ ಬಿತ್ತು. ಆದರೆ ನನಗೆ ನೀರು ಸಿಗಲಿಲ್ಲ. ನಾನು

ಮಣ್ಣಿನ ಮೇಲೆ ಸ್ವಲ್ಪ ಹೊತ್ತು ಹೊರಳಾಡಿದೆ. ಬಳಿಕ ನಮಾಝ್ ಮಾಡಿದೆ. ಅನಂತರ ಈ ವಿಷಯವನ್ನು ಪ್ರವಾದಿವರ್ಯರಲ್ಲಿ(ಸ) ಪ್ರಸ್ತಾಪಿಸಿದಾಗ ಅವರು, 'ನೀವು ಹೀಗೆ ಮಾಡಿದ್ದರೆ ಸಾಕಾಗುತ್ತಿತ್ತು' ಎನ್ನುತ್ತಾ ತಮ್ಮ ಎರಡೂ ಹಸ್ತಗಳನ್ನು ನೆಲಕ್ಕೆ ಬಡಿದರು. ನಂತರ ಅವೆರಡನ್ನೂ ಊದಿದರು. ಆ ಬಳಿಕ ಅದರಿಂದ ತಮ್ಮ ಮುಖ ಮತ್ತು ಮುಂಗೈಗಳನ್ನು ಸವರಿದರು."

(ಬುಖಾರಿ, ಮುಸ್ಲಿಮ್)

ಈ ಕುರಿತು ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರದ ವಿಧಿಯಂತೆ ಒಮ್ಮೆ ಎರಡೂ ಹಸ್ತಗಳನ್ನು ಮಣ್ಣಿಗೆ ಬಡಿದು ಮುಖಕ್ಕೆ ಸವರಬೇಕು. ಮತ್ತೊಮ್ಮೆ ಎರಡೂ ಕೈಗಳನ್ನು ನೆಲಕ್ಕೆ ಬಡಿದು ಮೊಣಕೈ ತನಕ ಸವರಬೇಕು. ಅವರಿಗೆ ಆಧಾರ ಈ ಕೆಳಗಿನ ಪ್ರವಾದಿ ವಚನವಾಗಿದೆ:

"ತಯಮ್ಮುಮ್ ಎಂದರೆ ಎರಡು ಸಲ ಹಸ್ತಗಳನ್ನು ನೆಲಕ್ಕೆ ಬಡಿಯುವುದಾಗಿದೆ. ಒಮ್ಮೆ ಮುಖಕ್ಕಾಗಿ, ಇನ್ನೊಮ್ಮೆ ಮೊಣಕೈವರೆಗಿನ ಎರಡೂ ಕೈಗಳಿಗಾಗಿ."

(ವರದಿ: ಹ. ಇಬ್ನು ಉಮರ್(ರ)- ದಾರಕುತ್ನಿ, ಹಾಕಿಮ್, ಬೈಹಕಿ)

## 5. ತಯಮ್ಮುಮ್ ಮಾಡಿದ ನಂತರ ಮಾಡಬಹುದಾದ ಕಾರ್ಯಗಳು

ತಯಮ್ಮುಮ್- ವುಝೂ ಮತ್ತು ಸ್ನಾನದ ಪರ್ಯಾಯವಾಗಿದ್ದು ಅದನ್ನು ಮಾಡಿದ ನಂತರ- ವುಝೂ ಮತ್ತು ಸ್ನಾನದ ನಂತರ ಮಾಡಬಹುದಾದ ಎಲ್ಲ ಕಾರ್ಯಗಳನ್ನೂ ಮಾಡಬಹುದು.

ಪ್ರವಾದಿ(ಸ) ಅವರು ಹೀಗೆ ಹೇಳಿರುವರು:

"ಮಣ್ಣು ಮುಸ್ಲಿಮನ ಮಟ್ಟಿಗೆ ಶುದ್ಧ ಮಾಡುವ ವಸ್ತುವಾಗಿದೆ. ಹತ್ತು ವರ್ಷಗಳ ತನಕ ನೀರು ಸಿಗದಿದ್ದರೂ ಸರಿಯೆ. ನೀರು ಸಿಕ್ಕಿದರೆ ಆತನು ತನ್ನ ಶರೀರಕ್ಕೆ ಅದನ್ನು ಉಪಯೋಗಿಸಿಕೊಳ್ಳಲಿ. (ಅಂದರೆ ವುಝೂ ಅಥವಾ ಸ್ನಾನ ಮಾಡಿಕೊಳ್ಳಲಿ) ಏಕೆಂದರೆ ಇದು ಅದಕ್ಕಿಂತ ಉತ್ತಮವಾದುದು."

(ವರದಿ: ಹ. ಅಬೂದರ್(ರ)- ಅಹ್ಮದ್, ತಿರ್ಮಿದಿ)

## 6. ತಯಮ್ಮುಮ್ ಭಂಗವಾಗುವ ವಿಷಯಗಳು

ವುಝೂ ಭಂಗವಾಗುವ ಎಲ್ಲ ವಿಷಯಗಳಿಂದ ತಯಮ್ಮುಮ್ ಕೂಡಾ ಭಂಗವಾಗುತ್ತದೆ. ಏಕೆಂದರೆ ಇದು ಅದರ ಪರ್ಯಾಯವಾಗಿದೆ. ಅದೇ ರೀತಿ ಯಾವ ವ್ಯಕ್ತಿ ನೀರು ಸಿಗದ ಕಾರಣ ತಯಮ್ಮುಮ್ ಮಾಡಿರುವನೋ, ಅವನ ತಯಮ್ಮುಮ್ ನೀರು ಸಿಕ್ಕಿದ ಕೂಡಲೇ ಭಂಗವಾಗುತ್ತದೆ. ಹಾಗೆಯೇ ರೋಗ ಅಥವಾ ಇನ್ನಾವುದಾದರೂ ಕಾರಣದಿಂದ ತಯಮ್ಮುಮ್ ಮಾಡಿದ್ದರೆ ರೋಗ ನಿವಾರಣೆ ಅಥವಾ ಆ ಕಾರಣ ಇಲ್ಲದಾಗುವುದರಿಂದ ತಯಮ್ಮುಮ್ ಭಂಗವಾಗುತ್ತದೆ. ಒಬ್ಬ ವ್ಯಕ್ತಿ ತಯಮ್ಮುಮ್ ಮಾಡಿ ನಮಾಝ್ ಮಾಡಿದ್ದು ಮತ್ತೆ ಅವನಿಗೆ ನೀರು ಸಿಕ್ಕಿದರೆ ಹಾಗೂ ನಮಾಝ್ ಮುಗಿಸಿದ ನಂತರ ಅವನು ಪುನಃ ವುಝೂ

ಮಾಡಲು ಸಮರ್ಥನಾಗಿದ್ದರೆ ಅವನು ವುಝೂ ಮಾಡಿಕೊಂಡು ತನ್ನ ನಮಾಝನ್ನು ಪುನರಾವರ್ತಿಸುವುದು ಉತ್ತಮ. ಆದರೆ ಅದು ಕಡ್ಡಾಯವಲ್ಲ.

ಹ. ಅಬೂ ಸಈದ್ ಖುದ್ರೀ(ರ) ವರದಿ ಮಾಡುತ್ತಾರೆ:

"ಇಬ್ಬರು ಪ್ರಯಾಣಕ್ಕೆ ಹೊರಟರು. ನಮಾಝ್‌ನ ಸಮಯವಾದಾಗ ಇಬ್ಬರ ಬಳಿಯೂ ನೀರಿರಲಿಲ್ಲ. ಇಬ್ಬರೂ ಶುದ್ಧ ಮಣ್ಣಿನಿಂದ ತಯಮ್ಮುಮ್ ಮಾಡಿ ನಮಾಝ್ ಮಾಡಿದರು. ತರುವಾಯ ನಮಾಝ್‌ನ ಸಮಯ ಮುಗಿಯುವುದಕ್ಕಿಂತ ಮುಂಚೆ ಅವರಿಗೆ ನೀರು ಸಿಕ್ಕಿತು. ಅವರಲ್ಲಿ ಒಬ್ಬರು ವುಝೂ ಮಾಡಿ ಪುನಃ ನಮಾಝ್ ಮಾಡಿದರು. ಆದರೆ ಇನ್ನೊಬ್ಬರು ಹಾಗೆ ಮಾಡಲಿಲ್ಲ. ಅನಂತರ ಅವರಿಬ್ಬರೂ ಪ್ರವಾದಿವರ್ಯರ(ಸ) ಬಳಿ ಮರಳಿದಾಗ, ಈ ಘಟನೆಯನ್ನು ವಿವರಿಸಿದರು. ಆಗ ಪ್ರವಾದಿವರ್ಯರು(ಸ) ನಮಾಝ್ ಪುನರಾವರ್ತಿಸದವನನ್ನು ಉದ್ದೇಶಿಸಿ ಹೀಗೆ ಹೇಳಿದರು- ನೀವು ಸುನ್ನತ್‌ನ ಪ್ರಕಾರ ಮಾಡಿದಿರಿ. ನಿಮ್ಮ ನಮಾಝ್ ಆಯಿತು ಮತ್ತು ಇನ್ನೊಬ್ಬನನ್ನುದ್ದೇಶಿಸಿ- ನಿಮಗೆ ಇಮ್ಮಡಿ ಪ್ರತಿಫಲವಿದೆ ಎಂದರು." (ಅಬೂ ದಾವೂದ್, ನಸಾಈ)

ಆದರೆ ಒಬ್ಬನು ನೀರು ಸಿಗದ ಕಾರಣಕ್ಕಾಗಿ ತಯಮ್ಮುಮ್ ಮಾಡಿ ನಮಾಝ್ ಮಾಡುತ್ತಿದ್ದರೆ ಹಾಗೂ ನಮಾಝ್ ಮಾಡುತ್ತಿರುವಾಗಲೇ ನೀರು ಲಭ್ಯವಾದರೆ, ಅವನ ತಯಮ್ಮುಮ್ ಭಂಗವಾಗುತ್ತದೆ. ಆದ್ದರಿಂದ ಅವನು ನಮಾಝ್ ಮುರಿದು ವುಝೂ ಮಾಡಿಕೊಳ್ಳಬೇಕು ಮತ್ತು ತನ್ನ ನಮಾಝನ್ನು ಪುನರಾವರ್ತಿಸಬೇಕು.

# ಋತುಸ್ರಾವ

## 1. ಋತುಮತಿಯಾಗುವ ಪ್ರಾಯ

ಹದೀಸ್‌ಗಳಲ್ಲಿ ಋತುಸ್ರಾವ ಆರಂಭವಾಗುವ ಕನಿಷ್ಠ ಮತ್ತು ಗರಿಷ್ಠ ಪ್ರಾಯದ ಬಗ್ಗೆ ಪ್ರಸ್ತಾಪವಿಲ್ಲ. ಹನಫೀ ಕರ್ಮಶಾಸ್ತ್ರದಂತೆ ಋತುಸ್ರಾವವಾಗುವ ಕನಿಷ್ಠ ಪ್ರಾಯ ಏಳು ವರ್ಷ ಮತ್ತು ಗರಿಷ್ಠ ಪ್ರಾಯ ಐವತ್ತೈದು ವರ್ಷವಾಗಿದೆ. ಈ ಪ್ರಾಯದ ನಂತರವೂ ರಕ್ತಸ್ರಾವ ವಾದರೆ ಅದು ರೋಗದಿಂದಲೇ ಹೊರತು ಮುಟ್ಟಿನಿಂದ ಅಲ್ಲ. ಆದುದರಿಂದ ಆಗ ನಮಾಝ್ ತೊರೆಯಬಾರದು. ಒಂದು ವೇಳೆ ರಕ್ತಸ್ರಾವವು ಎಂದಿನ ವಾಡಿಕೆ ಯಂತೆಯೇ ಆಗುತ್ತಿದ್ದರೆ ಅದನ್ನು ಮುಟ್ಟೆಂದೇ ಪರಿಗಣಿಸಲಾಗುವುದು.

ಶಾಫಿಈ ಕರ್ಮಶಾಸ್ತ್ರದಂತೆ ಋತುಸ್ರಾವವಾಗುವ ಕನಿಷ್ಠ ವಯಸ್ಸು ಒಂಬತ್ತು ವರ್ಷವಾಗಿದ್ದು, ಗರಿಷ್ಠ ವಯಸ್ಸಿಗೆ ಯಾವುದೇ ಮಿತಿಯಿಲ್ಲ.

## 2. ಋತುಸ್ರಾವದ ಅವಧಿ

ಋತುಸ್ರಾವದ ಅವಧಿಯು ವಿಭಿನ್ನ ಪ್ರಕೃತಿಯವರಲ್ಲಿ ವಿಭಿನ್ನವಾಗಿರಬಹುದು. ಪ್ರವಾದಿವರ್ಯರಿಂದ(ಸ) ಈ ಬಗ್ಗೆ ಯಾವುದೇ ನಂಬಲರ್ಹ ಹದೀಸ್ ವರದಿಯಾಗಿಲ್ಲ. ಇಮಾಮ್ ಶಾಫಿಈಯವರ(ರ) ಪ್ರಕಾರ ಋತುಸ್ರಾವದ ಅವಧಿ ಒಂದು ದಿನ ಮತ್ತು ಒಂದು ರಾತ್ರಿಯಾಗಿದೆ. ಗರಿಷ್ಠ ಅವಧಿ 15 ದಿವಸ. ಇನ್ನೊಂದು ವರದಿಯ ಪ್ರಕಾರ ಹದಿನೇಳು ದಿನಗಳೆಂದೂ ಇದೆ. ಹನಫೀ ಕರ್ಮಶಾಸ್ತ್ರದಂತೆ ಋತುಸ್ರಾವದ ಕನಿಷ್ಠ ಅವಧಿ ಮೂರು ದಿನ ಮತ್ತು ಗರಿಷ್ಠ ಅವಧಿ ಹತ್ತು ದಿನಗಳಾಗಿವೆ.

## 3. ಬಾಣಂತಿತನದ ರಕ್ತಸ್ರಾವ ಮತ್ತು ಅದರ ಅವಧಿ

ಬಾಣಂತಿತನದ ರಕ್ತಸ್ರಾವವೆಂದರೆ ಮಗು ಹುಟ್ಟಿ ಅಥವಾ ಗರ್ಭಪಾತವಾದ ಕಾರಣದಿಂದ ಮಹಿಳೆಗೆ ಆಗುವ ರಕ್ತಸ್ರಾವ. ಇದಕ್ಕೆ ಕನಿಷ್ಠ ಅವಧಿ ಎಂಬುದಿಲ್ಲ. ರಕ್ತಸ್ರಾವವಾಗುವುದು ನಿಂತ ಕೂಡಲೇ ಅದರ ಅವಧಿ ಮುಗಿಯುತ್ತದೆ. ಅದರ ಗರಿಷ್ಠ ಅವಧಿ ನಲವತ್ತು ದಿನಗಳಾಗಿವೆ.

ಹ. ಉಮ್ಮು ಸಲಮರವರು(ರ) ವರದಿ ಮಾಡುತ್ತಾರೆ. "ಪ್ರವಾದಿವರ್ಯರ(ಸ) ಕಾಲದಲ್ಲಿ ಮಹಿಳೆಯರು ಬಾಣಂತಿತನಕ್ಕಾಗಿ ನಲವತ್ತು ದಿನಗಳ ತನಕ ಕುಳಿತುಕೊಳ್ಳುತ್ತಿದ್ದರು."

(ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

ಇಮಾಮ್ ತಿರ್ಮಿದಿಯವರು ಈ ಹದೀಸನ್ನು ಉದ್ಧರಿಸಿದ ಬಳಿಕ ಈ ರೀತಿ ಹೇಳಿರುವರು: ಸಹಾಬಿಗಳು, ತಾಬಈಗಳು ಮತ್ತು ವಿದ್ವಾಂಸರು ಮಹಿಳೆಯ ಬಾಣಂತಿತನದ ಅವಧಿ ನಲವತ್ತು ದಿನಗಳಾಗಿವೆ ಎಂಬ ಬಗ್ಗೆ ಒಮ್ಮತಾಭಿಪ್ರಾಯ ಹೊಂದಿದ್ದಾರೆ. ಆಕೆಗೆ ರಕ್ತಸ್ರಾವವಾಗುವುದು ಅದಕ್ಕಿಂತ ಮೊದಲೇ ನಿಂತುಬಿಟ್ಟರೆ ಹೊರತು. ರಕ್ತಸ್ರಾವ ನಿಂತರೆ ಅವಳು ಸ್ನಾನ ಮಾಡಿ ನಮಾಝ್ ಮಾಡುವುದನ್ನು ಆರಂಭಿಸಬೇಕು. ನಲ್ವತ್ತು ದಿನಗಳ ನಂತರವೂ ರಕ್ತಸ್ರಾವ ನಿಲ್ಲದೇ ಇದ್ದರೆ ಹನಫೀ ಕರ್ಮಶಾಸ್ತ್ರದಂತೆ ಆಕೆ ನಮಾಝ್ ತೊರೆಯುವಂತಿಲ್ಲ. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಬಾಣಂತಿತನದ ರಕ್ತಸ್ರಾವದ ಅವಧಿ ಅರವತ್ತು ದಿನಗಳಾಗಿವೆ.

## 4. ಋತುಸ್ರಾವ ಮತ್ತು ಬಾಣಂತಿತನದ ರಕ್ತಸ್ರಾವದ ಅವಧಿಯಲ್ಲಿ ನಿಷಿದ್ಧವಾದ ಕಾರ್ಯಗಳು

ಜನಾಬತ್‌ನ ಸ್ಥಿತಿಯಲ್ಲಿ ನಿಷಿದ್ಧವಾದ ಎಲ್ಲ ಕಾರ್ಯಗಳು, ಋತುಸ್ರಾವ ಮತ್ತು ಬಾಣಂತಿತನದ ಸ್ರಾವದ ಅವಧಿಯಲ್ಲೂ ನಿಷಿದ್ಧವಾಗಿದೆ. ಅವುಗಳಲ್ಲದೆ ಋತುಸ್ರಾವ ಮತ್ತು ಬಾಣಂತಿತನ ಸ್ರಾವದ ಅವಧಿಯಲ್ಲಿ ಈ ಕೆಳಗಿನ ಕಾರ್ಯಗಳು ನಿಷಿದ್ಧವಾಗಿವೆ ಎಂಬುದು ಸರ್ವಸಮ್ಮತ ವಿಧಿ-

**i) ಉಪವಾಸ ವ್ರತ:** ಹ. ಅಬೂ ಸಈದ್ ಖುದ್ರೀ(ರ) ವರದಿ ಮಾಡುತ್ತಾರೆ: "ಈದುಲ್ ಅಝ್‌ಹಾ ಮತ್ತು ಈದುಲ್ ಫಿತ್ರ್‌ನ ದಿವಸ ಪ್ರವಾದಿವರ್ಯರು(ಸ) ಈದ್ಗಾಕ್ಕೆ ಆಗಮಿಸಿದರು. ಪುರುಷರಿಗೆ ಖುತ್‌ಬಾ(ಪ್ರವಚನ) ನೀಡಿದ ಬಳಿಕ ಅವರು ಮಹಿಳೆಯರಿದ್ದಲ್ಲಿಗೆ ತೆರಳಿ ಈ ರೀತಿ ಹೇಳಿದರು- ಓ ಮಹಿಳೆಯರೇ, ದಾನ ಮಾಡಿರಿ. ಏಕೆಂದರೆ ನಾನು ನರಕದಲ್ಲಿ ನಿಮ್ಮ ಬಹುಸಂಖ್ಯೆಯನ್ನು ಕಂಡಿದ್ದೇನೆ. ಮಹಿಳೆಯರು ವಿಚಾರಿಸಿದರು- ಓ ಪ್ರವಾದಿವರ್ಯರೇ ಹಾಗೆ ಏಕೆ? ಆಗ ಪ್ರವಾದಿ(ಸ)- ನೀವು ಹೆಚ್ಚು ಶಪಿಸುತ್ತೀರಿ ಮತ್ತು ನಿಮ್ಮ ಪತಿಯಂದಿರೊಂದಿಗೆ ಕೃತಘ್ನತೆ ತೋರುತ್ತೀರಿ. ನೀವು ಕಡಿಮೆ ಬುದ್ಧಿಯ ಮತ್ತು ಕಡಿಮೆ ಧರ್ಮದವರಾಗಿದ್ದರೂ ನಿಮ್ಮಷ್ಟು ಸುಲಭದಲ್ಲಿ ಒಬ್ಬ ಬುದ್ಧಿವಂತ ಪುರುಷನನ್ನು ಮೂರ್ಖನಾಗಿ ಮಾಡುವವರನ್ನು ನಾನೆಂದೂ ಕಂಡಿಲ್ಲ ಎಂದು ಹೇಳಿದರು. ಆಗ ಮಹಿಳೆಯರು ಪುನಃ ಪ್ರಶ್ನಿಸಿದರು- ನಮ್ಮ ಬುದ್ಧಿ ಮತ್ತು ಧರ್ಮದಲ್ಲಿ ಕೊರತೆ ಏನಿದೆ? ಆಗ ಪ್ರವಾದಿವರ್ಯರು(ಸ)- ಮಹಿಳೆಯ ಸಾಕ್ಷಿಯು ಪುರುಷನ ಅರ್ಧದಷ್ಟಲ್ಲವೇ? ಎಂದು ಪ್ರಶ್ನಿಸಿದರು. ಅದಕ್ಕವರು- 'ಹೌದು' ಎಂದರು. ಆಗ ಪ್ರವಾದಿವರ್ಯರು(ಸ)- ಇದು ಮಹಿಳೆಯ ಬುದ್ಧಿಯ ಕೊರತೆಯಾಗಿದೆ ಎಂದರು. ಪುನಃ

ಪ್ರವಾದಿವರ್ಯರು(ಸ) ಈ ರೀತಿ ಪ್ರಶ್ನಿಸಿದರು- ಮಹಿಳೆಗೆ ಋತುಸ್ರಾವವಾದಾಗ ಆಕೆ ನಮಾಝ್ ಮತ್ತು ಉಪವಾಸ ವ್ರತವನ್ನು ತೊರೆಯುವುದಿಲ್ಲವೇ? ಆಗ ಮಹಿಳೆಯರು 'ಹೌದು' ಎಂದರು."
(ಬುಖಾರಿ, ಮುಸ್ಲಿಮ್)

**ii) ಸಂಸರ್ಗ:** ಹ. ಅನಸ್(ರ) ವರದಿ ಮಾಡುತ್ತಾರೆ. ಯಹೂದಿಗಳಲ್ಲಿ ಮಹಿಳೆಯರಿಗೆ ಮುಟ್ಟಾದಾಗ ಅವರು ಆಕೆಯ ಬಳಿ ಕುಳಿತುಕೊಳ್ಳುತ್ತಿರಲಿಲ್ಲ, ಊಟ ಮಾಡುತ್ತಿರಲಿಲ್ಲ ಮತ್ತು ಸಂಸರ್ಗ ಮಾಡುತ್ತಿರಲಿಲ್ಲ. ಈ ಬಗ್ಗೆ ಸಹಾಬಿಗಳು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದಾಗ ಈ ಕೆಳಗಿನ ಅರ್ಥವಿರುವ ಆಯತ್ ಅವತೀರ್ಣಗೊಂಡಿತು-

**"ಆರ್ತವ(ಋತುಸ್ರಾವ)ದ ಕುರಿತು ಅವರು ನಿಮ್ಮೊಡನೆ ಕೇಳುತ್ತಾರೆ. ಹೇಳಿರಿ: ಅದೊಂದು ಮಾಲಿನ್ಯಾವಸ್ಥೆ. ಆರ್ತವಾವಸ್ಥೆಯಲ್ಲಿ ಸ್ತ್ರೀಯರಿಂದ ದೂರವಿರಿ. ಅವರು ಶುದ್ಧರಾಗುವ ವರೆಗೆ ಅವರನ್ನು ಸಮೀಪಿಸಬೇಡಿರಿ."** (ಪವಿತ್ರ ಕುರ್‌ಆನ್, 2:222)

ಮೇಲಿನ ಸೂಕ್ತದ ಪದಗಳ ಕಾರಣದಿಂದಾಗಿ ಕರ್ಮಶಾಸ್ತ್ರ ಪಂಡಿತರಲ್ಲಿ- ಋತುಸ್ರಾವ ನಿಂತು ಸ್ನಾನ ಮಾಡುವ ಮೊದಲು ಆಕೆಯೊಂದಿಗೆ ಸಂಸರ್ಗ ನಡೆಸುವ ಬಗ್ಗೆ ಭಿನ್ನಾಭಿಪ್ರಾಯವಿದೆ. ಹನಫೀ ಕರ್ಮಶಾಸ್ತ್ರದ ಪ್ರಕಾರ ಅದು ಧರ್ಮಸಮ್ಮತವಾಗಿದೆ. ಆದರೆ ಮಹಿಳೆಯು ಋತುಸ್ರಾವದ ಗರಿಷ್ಠ ದಿನಗಳನ್ನು ಕಳೆದಿರಬೇಕು. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಋತುಸ್ರಾವ ನಿಂತು ಸ್ನಾನ ಮಾಡುವ ತನಕವೂ ಮಹಿಳೆಯೊಂದಿಗೆ ಸಂಸರ್ಗ ಧರ್ಮ ಸಮ್ಮತವಲ್ಲ.

ಪ್ರಸ್ತುತ ಆಯತ್ ಅವತೀರ್ಣಗೊಂಡ ಹಿನ್ನೆಲೆಯಲ್ಲಿ ಪ್ರವಾದಿವರ್ಯರು(ಸ) ಮುಟ್ಟಾದ ಮಹಿಳೆಯರ ಕುರಿತು ಹೀಗೆ ಹೇಳಿರುವರು:

"ಸಂಸರ್ಗದ ಹೊರತು ಅವರೊಂದಿಗೆ ಎಲ್ಲ ರೀತಿಯ ಸಂಬಂಧವನ್ನೂ ಇರಿಸಿಕೊಳ್ಳಬೇಕು." (ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

## 5. ರಕ್ತಸ್ರಾವ ಮತ್ತು ಅದರ ವಿಭಿನ್ನ ರೂಪಗಳು

ರೋಗದಿಂದಾಗಿ ಅಥವಾ ಇನ್ನಾವುದೇ ಕಾರಣದಿಂದ ಅಕಾಲವಾಗಿ ರಕ್ತಸ್ರಾವವಾದರೆ ಅಥವಾ ಋತುಸ್ರಾವದ ಗರಿಷ್ಠ ದಿನಗಳು ಕಳೆದ ಬಳಿಕವೂ ರಕ್ತಸ್ರಾವ ಮುಂದುವರಿದಿದ್ದರೆ ಅದನ್ನು 'ಇಸ್ತಿಹಾದಃ' ಎನ್ನುತ್ತಾರೆ. ಇದರ ವಿಭಿನ್ನ ರೂಪಗಳಿವೆ-

1) ಮಹಿಳೆಗೆ ತನ್ನ ವಾಡಿಕೆಯ ಋತುಸ್ರಾವದ ಅವಧಿ ತಿಳಿದಿದ್ದರೂ ಬಣ್ಣದಿಂದ ತನ್ನ ರಕ್ತಸ್ರಾವವನ್ನು ಗುರುತಿಸಲು ಸಾಧ್ಯವಾಗದಿದ್ದರೆ, ಆಕೆ ವಾಡಿಕೆಯ ಅವಧಿಯನ್ನು ಋತುಸ್ರಾವದ ಅವಧಿ ಎಂದು ಪರಿಗಣಿಸಿ ಉಳಿದ ಅವಧಿಯನ್ನು 'ಇಸ್ತಿಹಾದಃ' ಎಂದು ಪರಿಗಣಿಸಬೇಕು.

"ಹ. ಉಮ್ಮು ಸಲಮ(ರ), ಪ್ರವಾದಿವರ್ಯರಲ್ಲಿ(ಸ) ಋತುಸ್ರಾವದ ಅವಧಿಯ ನಂತರವೂ ರಕ್ತಸ್ರಾವವಾಗುತ್ತಿದ್ದ ಓರ್ವ ಮಹಿಳೆಯ ಕುರಿತು ವಿಚಾರಿಸಿದರು. ಆಗ ಪ್ರವಾದಿ(ಸ) ಹೇಳಿದರು- ಸಾಮಾನ್ಯವಾಗಿ ತಿಂಗಳಲ್ಲಿ ಎಷ್ಟು ದಿನಗಳ ಕಾಲ ಆಕೆಗೆ ಋತುಸ್ರಾವ ಆಗುತ್ತಿತ್ತೋ

ಆ ದಿನಗಳ ಲೆಕ್ಕ ಮಾಡಿ ನಮಾಝ್ ತೊರೆಯಬೇಕು. ಅನಂತರ ಆಕೆ ಸ್ನಾನ ಮಾಡಿ ತನ್ನ ಗುಪ್ತಾಂಗಕ್ಕೆ ಬಟ್ಟೆಯನ್ನು ಕಟ್ಟಿ ನಮಾಝ್ ಮಾಡಬೇಕು."

(ಅಬೂ ದಾವೂದ್, ಇಬ್ನು ಮಾಜಃ, ನಸಾಈ, ಮುವತ್ತಾ)

ಇಮಾಮ್ ಅಬೂ ಹನೀಫಾ(ರ) ಮತ್ತು ಇಮಾಮ್ ಶಾಫಿಈಯವರ(ರ) ಅಭಿಪ್ರಾಯವೂ ಇದುವೇ ಆಗಿದೆ.

2) ಮಹಿಳೆಯು ಬಣ್ಣ ಮತ್ತು ವಾಸನೆಯಿಂದ ತನ್ನ ರಕ್ತಸ್ರಾವವನ್ನು ಚೆನ್ನಾಗಿ ಅರಿತವಳಾಗಿದ್ದರೆ, ಆಕೆಗೆ ಋತುಸ್ರಾವದ ಅವಧಿ ನಿಶ್ಚಿತವಲ್ಲದಿದ್ದರೆ ಆಕೆ ತನ್ನ ಅರಿವಿನ ಪ್ರಕಾರ ಋತುಸ್ರಾವದ ದಿನವನ್ನು ನಿರ್ಣಯಿಸಿ ಉಳಿದ ಅವಧಿಯನ್ನು 'ಇಸ್ತಿಹಾದಃ' ಎಂದು ಪರಿಗಣಿಸಬೇಕು.

"ಹ. ಫಾತಿಮಾ ಬಿಂತಿ ಅಬೀ ಹುಬೈಶ್(ರ) ಅವರನ್ನುದ್ದೇಶಿಸಿ ಪ್ರವಾದಿವರ್ಯರು(ಸ) ಹೀಗೆ ಹೇಳಿದರು- ರಕ್ತವು ಋತುಸ್ರಾವದ್ದಾಗಿದ್ದರೆ ಅದು ಕಪ್ಪು ಬಣ್ಣದ್ದಾಗಿದ್ದು ಅದು ಪ್ರತ್ಯೇಕವಾಗಿ ಗುರುತಿಸಲ್ಪಡುತ್ತದೆ. ಆದುದರಿಂದ ಇಂತಹ ರಕ್ತಸ್ರಾವದ ಅವಧಿಯಲ್ಲಿ ನಮಾಝ್ ಮಾಡಬಾರದು. ಒಂದು ವೇಳೆ ಅದು ಬೇರೆ ಬಣ್ಣದ್ದಾಗಿದ್ದರೆ ನೀವು ವುಝೂ ಮಾಡಿ ನಮಾಝ್ ಮಾಡಿರಿ. ಏಕೆಂದರೆ ಇದು ನರ (ರಕ್ತ)ವಾಗಿದೆ. (ಅಂದರೆ ನರ ಒಡೆದುದಾಗಿದೆ)" (ಅಬೂ ದಾವೂದ್, ನಸಾಈ, ಇಬ್ನು ಮಾಜಃ, ಇಬ್ನ್ ಹಿಬ್ಬಾನ್, ದಾರಕುತ್ನಿ)

3) ಮಹಿಳೆ ವಾಡಿಕೆಯವಳೂ ಪರಿಚಯದವಳೂ ಆಗಿದ್ದರೆ ಹಾಗೂ ಆಕೆಯ ವಾಡಿಕೆ ಮತ್ತು ಪರಿಚಯ ಎರಡೂ ಹೊಂದಿಕೊಳ್ಳುವುದಾದರೆ ಅದರಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಆದರೆ ಅವು ಪರಸ್ಪರ ಭಿನ್ನವಾಗಿದ್ದರೆ, ಹನಫೀ ಕರ್ಮಶಾಸ್ತ್ರದಂತೆ ಪರಿಚಯಕ್ಕಿಂತಲೂ ವಾಡಿಕೆಯನ್ನೇ ಹೆಚ್ಚು ಪರಿಗಣಿಸಲಾಗುವುದು. ಇಮಾಮ್ ಶಾಫಿಈಯವರ(ರ) ಅಭಿಪ್ರಾಯವೂ ಇದುವೇ ಆಗಿದೆ.

4) ಮಹಿಳೆ ವಾಡಿಕೆಯವಳೂ ಪರಿಚಯದವಳೂ ಆಗಿರದಿದ್ದರೆ ಅರ್ಥಾತ್- ಅವಳಿಗೆ ವಾಡಿಕೆಯಾಗಿ ಎಷ್ಟು ದಿನ ರಕ್ತಸ್ರಾವವಾಗುತ್ತದೆ ಎಂಬುದು ಮರೆತು ಹೋಗಿದ್ದರೆ, ರಕ್ತದ ಬಣ್ಣವನ್ನೂ ಪ್ರತ್ಯೇಕಿಸಿ ಗುರುತಿಸಲು ಆಕೆಗೆ ಸಾಧ್ಯವಾಗದಿದ್ದರೆ- ಆಕೆ ತನ್ನ ಸ್ವಂತ ಅಭಿಮತ ಮತ್ತು ತನ್ನ ಸಮವಯಸ್ಕ ಹಾಗೂ ಒಂದೇ ರೀತಿಯ ವಾಡಿಕೆಯ ಮಹಿಳೆಯರ ಅಭ್ಯಾಸದಂತೆ ವರ್ತಿಸಬೇಕು.

ಹ. ಹುದ್ನ ಬಿಂತಿ ಜಹಶ್(ರ) ವರದಿ ಮಾಡುತ್ತಾರೆ:

"ನನಗೆ ಬಹಳ ಹೆಚ್ಚು ಋತುಸ್ರಾವವಾಗುತ್ತಿತ್ತು. ಒಂದು ದಿನ ನಾನು ಪ್ರವಾದಿವರ್ಯರಲ್ಲಿಗೆ(ಸ) ಹೋದೆ. ಪ್ರವಾದಿವರ್ಯರು(ಸ) ನನ್ನ ಸೋದರಿ ಝೈನಬ್ ಬಿಂತಿ ಜಹಶ್ (ಉಮ್ಮುಲ್ ಮುಅ್‌ಮಿನೀನ್)ರ ಮನೆಯಲ್ಲಿದ್ದರು. ನಾನು ಪ್ರವಾದಿವರ್ಯರಲ್ಲಿ(ಸ) ಹೇಳಿದೆ- ಓ ಪ್ರವಾದಿವರ್ಯರೇ(ಸ)! ನನಗೆ ಬಹಳ ಹೆಚ್ಚು ಋತುಸ್ರಾವವಾಗುತ್ತದೆ. ತಾವು ಋತುಸ್ರಾವದ ಅವಧಿಯಲ್ಲಿ ನಮಾಝ್ ಮತ್ತು ಉಪವಾಸ ವ್ರತವನ್ನು ನಿಷೇಧಿಸಿರುವಿರಿ. ಈಗ ನನ್ನ ಬಗ್ಗೆ

ತಾವೇನೆನ್ನುತ್ತೀರಿ? ಪ್ರವಾದಿ(ಸ) ಹೇಳಿದರು- ಹತ್ತಿಯನ್ನು ಬಳಸಿ. ಅದರಿಂದ ರಕ್ತಸ್ರಾವ ನಿಂತೀತು. ಆಗ ನಾನು ಹೇಳಿದೆ- ಅದು ಅದಕ್ಕಿಂತಲೂ ಎಷ್ಟೋ ಅಧಿಕವಿದೆ. ಪ್ರವಾದಿ ವರ್ಯರು(ಸ) ಹೇಳಿದರು- ಹಾಗಾದರೆ ಬಟ್ಟೆ ಕಟ್ಟಿಕೊಳ್ಳಿ. ಆಗ ನಾನು ಹೇಳಿದೆ- ಅದು ಬಹಳ ಹೆಚ್ಚು ಹರಿಯುತ್ತದೆ. ಆಗ ಪ್ರವಾದಿ(ಸ) ಹೇಳಿದರು- ನಾನು ನಿಮಗೆ ಎರಡು ರೂಪಗಳನ್ನು ಆಜ್ಞಾಪಿಸುತ್ತೇನೆ. ಅವುಗಳ ಪೈಕಿ ಒಂದನ್ನು ಪಾಲಿಸಿರಿ. ಅದು ನಿಮಗೆ ಸಾಕು. ಒಂದು ವೇಳೆ ನೀವು ಎರಡನ್ನೂ ಮಾಡುವುದಾದರೆ ಅದು ನಿಮಗೆ ಬಿಟ್ಟದ್ದು. ಇದು ವಾಸ್ತವದಲ್ಲಿ ಶೈತಾನನ ಒಂದು ಮೋಸವಾಗಿದೆ. ಒಂದನೆಯದು, ನೀವು ಅಲ್ಲಾಹನ ಜ್ಞಾನದಂತೆ ಆರು ಅಥವಾ ಏಳು ದಿನಗಳ ತನಕ ಎಣಿಸಿರಿ. ಅನಂತರ ಸ್ನಾನ ಮಾಡಿರಿ. ಶುದ್ಧಿಯಾದ ಬಳಿಕ ನೀವು ಇಪ್ಪತ್ತಮೂರು ಅಥವಾ ಇಪ್ಪತ್ತನಾಲ್ಕು ದಿನಗಳ ತನಕ ಪ್ರತಿಯೊಂದು ನಮಾಝಿಗೂ ಹೊಸ ವುಝೂ ಮಾಡಿರಿ. ನಮಾಝ್ ಮಾಡಿರಿ ಮತ್ತು ಉಪವಾಸ ವ್ರತ ಆಚರಿಸಿರಿ. ಈ ರೂಪವು ನಿಮಗೆ ಸಾಕಾಗುವುದು. ಏಕೆಂದರೆ ಸಾಮಾನ್ಯವಾಗಿ ಮಹಿಳೆಯರಿಗೆ ಒಂದು ನಿಶ್ಚಿತ ಅವಧಿಯ ವರೆಗೆ ಋತುಸ್ರಾವ ವಾಗುತ್ತದೆ. ನಂತರ ಸ್ನಾನ ಮಾಡಿ ಶುದ್ಧರಾಗುತ್ತಾರೆ. ಅದೇ ರೀತಿ ನೀವು ಮಾಡಿರಿ. ಎರಡನೆಯದು, ನಿಮಗೆ ಸಾಧ್ಯವಿದ್ದರೆ ಝುಹರ್ ನಮಾಝನ್ನು ಸ್ವಲ್ಪ ತಡಮಾಡಿ ಮತ್ತು ಅಸರ್ ನಮಾಝನ್ನು ಸ್ವಲ್ಪ ಬೇಗನೇ ನಿರ್ವಹಿಸಿರಿ. ಸ್ನಾನ ಮಾಡಿ ಈ ಎರಡೂ ನಮಾಝ್ ಗಳನ್ನು ಜೊತೆಯಾಗಿ ನಿರ್ವಹಿಸಿರಿ. ಅನಂತರ ಮಗ್ರಿಬ್ ನಮಾಝನ್ನು ಸ್ವಲ್ಪ ತಡವಾಗಿ ಮತ್ತು ಇಶಾ ನಮಾಝನ್ನು ಸ್ವಲ್ಪ ಬೇಗನೇ ನಿರ್ವಹಿಸಿರಿ. ಸ್ನಾನ ಮಾಡಿ ಎರಡೂ ನಮಾಝ್‌ಗಳನ್ನು ಜೊತೆಯಾಗಿ ನಿರ್ವಹಿಸಿರಿ. ತರುವಾಯ ಸ್ನಾನ ಮಾಡಿ ಫಜರ್ ನಮಾಝ್ ನಿರ್ವಹಿಸಿರಿ. ಇದೇ ರೀತಿ ಉಪವಾಸ ವ್ರತವನ್ನೂ ಆಚರಿಸಿರಿ ಮತ್ತು ನಮಾಝ್ ನಿರ್ವಹಿಸಿರಿ. ನೀವು ಹೀಗೆ ಮಾಡಿದರೆ ಅರ್ಥಾತ್ ಎರಡನೆಯ ರೂಪವನ್ನು ಅನುಸರಿಸಿದರೆ ಇದು ನನಗೆ ಹೆಚ್ಚು ಪ್ರಿಯವಾಗಿದೆ. (ಅಹ್ಮದ್, ಇಬ್ನು ಮಾಜಃ, ಅಬೂ ದಾವೂದ್, ನಸಾಈ, ತಿರ್ಮಿದಿ)

ಋತುಸ್ರಾವವಲ್ಲದ ರಕ್ತಸ್ರಾವದ ಕುರಿತು ಈ ವಿಧಿಯು ಈ ಹಿಂದೆಯೇ ಋತುಸ್ರಾವ ಆರಂಭವಾಗಿದ್ದು ಆಕೆ ಆ ಬಳಿಕ ಯಾವುದೋ ಸಮಯದಲ್ಲಿ ತನ್ನ ವಾಡಿಕೆಯ ದಿನಗಳನ್ನು ಅಥವಾ ಋತುಸ್ರಾವದ ರಕ್ತದ ಗುರುತನ್ನು ಮರೆತಿರುವ ಸ್ಥಿತಿಯಲ್ಲಿ ಮಾತ್ರ ಅನ್ವಯವಾಗುತ್ತದೆ.

ರಕ್ತಸ್ರಾವದಲ್ಲಿ ಮಹಿಳೆಯು ವಾಡಿಕೆ ಮತ್ತು ಗುರುತು ಎರಡನ್ನೂ ಅರಿಯದಿರುವ ಇನ್ನೊಂದು ರೂಪ ಯಾವುದೆಂದರೆ ಮಹಿಳೆಯು ಯುವತಿಯಾಗಿದ್ದು ಆಕೆಗೆ ಋತುಸ್ರಾವ ಆಗಲು ಈಗಷ್ಟೇ ಆರಂಭವಾಗಿರುವುದು. ಈ ಸ್ಥಿತಿಯಲ್ಲಿ ಆಕೆಯು ಹನಫೀ ಕರ್ಮಶಾಸ್ತ್ರ ದಂತೆ ಋತುಸ್ರಾವದ ಗರಿಷ್ಠ ಅವಧಿಯಾದ ಹತ್ತು ದಿನ ಕಳೆದ ಬಳಿಕ ಉಳಿದ ದಿನಗಳನ್ನು 'ಇಸ್ತಿಹಾದಃ' ಎಂದು ಪರಿಗಣಿಸಬೇಕು. ಹತ್ತು ದಿನಗಳಾದ ಕೂಡಲೇ ಆಕೆ ಸ್ನಾನ ಮಾಡಿ ನಮಾಝ್ ಆರಂಭಿಸಬೇಕು ಮತ್ತು ಪ್ರತಿ ನಮಾಝ್‌ಗೆ ಹೊಸ ವುಝೂ ಮಾಡಿಕೊಳ್ಳಬೇಕು. ಶಾಫಿಈ ಕರ್ಮಶಾಸ್ತ್ರದಂತೆ ಆಕೆ ಹದಿನೈದು ದಿನಗಳ ತನಕ ಕಾಯಬೇಕು. ಆ ಅವಧಿಯೊಳಗೆ

ರಕ್ತಸ್ರಾವವು ನಿಂತರೆ ಆ ಪೂರ್ಣ ಅವಧಿಯನ್ನು ಋತುಸ್ರಾವದ ಅವಧಿಯೆಂದೇ ಪರಿಗಣಿಸಲಾಗುವುದು. ಒಂದು ವೇಳೆ ಹದಿನೈದು ದಿನಗಳ ನಂತರವೂ ರಕ್ತಸ್ರಾವ ಮುಂದುವರಿದರೆ ಆಕೆ ಋತುಸ್ರಾವದ ಕನಿಷ್ಠ ಅವಧಿಯಾದ ಒಂದು ದಿನ ಮತ್ತು ಒಂದು ರಾತ್ರಿಯನ್ನು ಬಿಟ್ಟು ಉಳಿದ ಎಲ್ಲಾ ದಿನಗಳ ರಕ್ತಸ್ರಾವವನ್ನು ಇಸ್ತಿಹಾದಃ ಎಂದು ಪರಿಗಣಿಸಿ ಹದಿನಾಲ್ಕು ದಿನಗಳ ನಮಾಝನ್ನು ಕಝಾ ನಿರ್ವಹಿಸಬೇಕು.

## 6. ಅನಾರೋಗ್ಯದಿಂದಾಗುವ ರಕ್ತಸ್ರಾವದ ವಿಧಿಗಳು

1) ಸಲಫುಸ್ಸಾಲಿಹ್‌ಗಳ ಬಹುಮತದ ಅಭಿಪ್ರಾಯದಂತೆ 'ಇಸ್ತಿಹಾದಃ'ದಲ್ಲಿ ಮಹಿಳೆಯ ಮೇಲೆ ಕೇವಲ ಒಂದೇ ಸ್ನಾನ ಕಡ್ಡಾಯವಿದೆ. ಅದು ಆಕೆಯ ಋತುಸ್ರಾವದ ಅವಧಿ ಮುಗಿದು 'ಇಸ್ತಿಹಾದಃ'ದ ಅವಧಿ ಆರಂಭವಾಗುವಾಗ. ಆದರೆ ಪ್ರತಿ ನಮಾಝ್‌ಗೆ ಹೊಸ ವುಝೂ ಮಾಡಿಕೊಳ್ಳಬೇಕು.

ಪ್ರವಾದಿವರ್ಯರು(ಸ) ಹ. ಫಾತಿಮಾ ಬಿನ್ತಿ ಜಹಶ್(ರ) ಅವರನ್ನುದ್ದೇಶಿಸಿ ಈ ರೀತಿ ಹೇಳಿದರು:

"ಋತುಸ್ರಾವದ ದಿನಗಳಲ್ಲಿ ನಮಾಝ್ ಮಾಡದಿರಿ. ಆದರೆ ಋತುಸ್ರಾವದ ದಿನಗಳು ಮುಗಿದು 'ಇಸ್ತಿಹಾದಃ'ದ ದಿನ ಆರಂಭವಾದಾಗ ಸ್ನಾನ ಮಾಡಿರಿ ಮತ್ತು ಪ್ರತಿಯೊಂದು ನಮಾಝ್‌ಗಾಗಿ ವುಝೂ ಮಾಡಿರಿ."

(ವರದಿ: ಹ. ಆಯಿಶಾ(ರ)- ಅಹ್ಮದ್, ಇಬ್ನು ಮಾಜಃ, ತಿರ್ಮಿದಿ, ಅಬೂ ದಾವೂದ್, ನಸಾಈ)

ಹನಫೀ ಕರ್ಮಶಾಸ್ತ್ರದಂತೆ ಒಂದು ಹೊತ್ತಿನ ನಮಾಝ್‌ಗೆ ಒಮ್ಮೆ ವುಝೂ ಮಾಡಿಕೊಂಡರೆ ಸಾಕು. ಆದ್ದರಿಂದ ಒಂದು ವುಝೂವಿನಲ್ಲಿ ಒಂದಕ್ಕಿಂತ ಹೆಚ್ಚು ಫರ್ಝ್ ನಮಾಝ್‌ಗಳನ್ನು (ಅದಾ ಮತ್ತು ಕಝಾ) ಮಾಡಬಹುದಾಗಿದೆ. ಆದರೆ ಇಮಾಮ್ ಶಾಫಿಈಯವರ ಪ್ರಕಾರ ಪ್ರತಿಯೊಂದು ಫರ್ಝ್ ನಮಾಝ್‌ಗೆ ಬೇರೆಯೇ ವುಝೂ ಮಾಡಬೇಕು.

2) ಇಸ್ತಿಹಾದಃದ ಸ್ಥಿತಿಯಲ್ಲಿ ಮಹಿಳೆಯು ಋತುಸ್ರಾವದ ಕಾಲದಲ್ಲಿ ಮಾಡಬಾರದಾಗಿದ್ದ ಎಲ್ಲಾ ಕೆಲಸಗಳನ್ನೂ ಮಾಡಬಹುದು. ಉದಾ: ನಮಾಝ್, ಉಪವಾಸ ವ್ರತ, ಕುರ್‌ಆನ್ ಪಾರಾಯಣ, ಸಂಸರ್ಗ ಇತ್ಯಾದಿ.

◈

# ನಮಾಝ್

## 1. ನಮಾಝ್‌ನ ಮಹತ್ವ

ಇಸ್ಲಾಮಿನ ಕಡ್ಡಾಯ ಆರಾಧನಾ ಕರ್ಮಗಳಲ್ಲಿ ನಮಾಝ್ ಪ್ರಪ್ರಥಮ ಮತ್ತು ಅತ್ಯಂತ ಪ್ರಮುಖ ಆರಾಧನಾ ಕರ್ಮವಾಗಿದೆ. ಇದು ಇಸ್ಲಾಮಿನ ಸ್ತಂಭವಾಗಿದ್ದು, ನಮಾಝಿಲ್ಲದೆ ಇಸ್ಲಾಮಿನ ಸೌಧವು ನೆಲೆನಿಲ್ಲಲಾರದು. ಕಿಯಾಮತ್‌ನ ದಿನ ಅಲ್ಲಾಹನ ದಾಸರ ಕರ್ಮಗಳ ಪೈಕಿ ಮೊಟ್ಟ ಮೊದಲು ನಮಾಝ್‌ನ ಕುರಿತು ವಿಚಾರಣೆ ನಡೆಯುವುದು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅಲ್ಲಾಹನ ದಾಸನಿಂದ ಕಿಯಾಮತ್‌ನ ದಿನ ಮೊಟ್ಟ ಮೊದಲು ವಿಚಾರಣೆಯಾಗುವುದು ನಮಾಝ್‌ನ ಕುರಿತಾಗಿದೆ. ಅದು ಸರಿಯಾಗಿದ್ದರೆ ಅವನ ಇತರೆಲ್ಲ ಕರ್ಮಗಳೂ ಸರಿಯಾಗಿ ರುವುವು ಮತ್ತು ಅದು ಸರಿಯಾಗಿರದಿದ್ದರೆ ಅವನ ಉಳಿದೆಲ್ಲ ಕರ್ಮಗಳೂ ತಪ್ಪಾಗಿರುವುವು."

(ವರದಿ: ಹ. ಅಬ್ದುಲ್ಲಾ ಬಿನ್ ಕರತ್(ರ)- ತಬ್ರಾನಿ)

ಇಹಲೋಕವನ್ನು ತ್ಯಜಿಸುವಾಗ ಪ್ರವಾದಿವರ್ಯರು(ಸ) ಕೊನೆಯದಾಗಿ ನಮಾಝ್‌ನ ಉಪದೇಶ ಮಾಡಿದರು. ಪ್ರವಾದಿವರ್ಯರು(ಸ) ತಮ್ಮ ಕೊನೆಯುಸಿರನ್ನು ಎಳೆಯುತ್ತಿದ್ದಾಗ ಈ ರೀತಿ ಉಪದೇಶಿಸುತ್ತಿದ್ದರು:

"ನಮಾಝ್, ನಮಾಝ್ ಮತ್ತು ನಿಮ್ಮ ಸೇವಕಿಯರು ಹಾಗೂ ದಾಸರು."

ಪವಿತ್ರ ಕುರ್‌ಆನಿನಲ್ಲಿ ಅಲ್ಲಲ್ಲಿ ನಮಾಝ್ ಸಂಸ್ಥಾಪಿಸುವ ಆಜ್ಞೆ ನೀಡಲಾಗಿದೆ. ಅಲ್ಲಾಹನು ತನ್ನ ಪವಿತ್ರ ಗ್ರಂಥದಲ್ಲಿ ಇತರ ಅನೇಕ ವಿಷಯಗಳ ಆಜ್ಞೆಯ ಜತೆಗೆ ನಮಾಝ್ ಸಂಸ್ಥಾಪಿಸುವ ಆಜ್ಞೆ ನೀಡಿರುವನು. ಇಸ್ಲಾಮಿನಲ್ಲಿ ನಮಾಝ್‌ಗೆ ಎಷ್ಟು ಮಹತ್ವ ನೀಡಲಾಗಿದೆಯೆಂದರೆ ಊರಲ್ಲಿರುವಾಗಲೂ ಪ್ರಯಾಣದಲ್ಲಿರುವಾಗಲೂ ಶಾಂತಿಯ ಸ್ಥಿತಿಯಲ್ಲೂ ಯುದ್ಧ ಮತ್ತು ಭಯದ ಸ್ಥಿತಿಯಲ್ಲೂ ನಮಾಝನ್ನು ಕಡ್ಡಾಯಗೊಳಿಸಲಾಗಿದೆ. ನಮಾಝ್‌ನ ಕುರಿತು ಅಸಡ್ಡೆ ತೋರುವವರ ಕುರಿತು ಬಹಳ ಉಗ್ರ ಎಚ್ಚರಿಕೆಯನ್ನೂ ನೀಡಲಾಗಿದೆ. ಗತಜನಾಂಗಗಳ ವಿನಾಶದ ಮೊಟ್ಟಮೊದಲ ಕಾರಣವು ಅವರು ನಮಾಝನ್ನು ತೊರೆದುದಾಗಿತ್ತು ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ.

ನಮಾಝ್ ಕಡ್ಡಾಯವಾಗಿದೆ ಎಂಬುದನ್ನು ನಿರಾಕರಿಸುವವನು ಇಸ್ಲಾಮಿನಿಂದ ಭ್ರಷ್ಟನಾಗುವವನೆಂಬುದು ಮುಸ್ಲಿಮ್ ಸಮುದಾಯದ ಒಮ್ಮತಾಭಿಪ್ರಾಯವಾಗಿದೆ.

## 2. ನಮಾಝ್ ಯಾರ ಮೇಲೆ ಕಡ್ಡಾಯ

ಪ್ರತಿಯೊಬ್ಬ ಮತಿವಂತ ಮತ್ತು ಪ್ರೌಢ ಮುಸ್ಲಿಮನ ಮೇಲೆ ನಮಾಝ್ ಕಡ್ಡಾಯವಾಗಿದೆ ಎಂಬ ವಿಷಯ ಸರ್ವಸಮ್ಮತವಾಗಿದೆ.

ಪ್ರವಾದಿ(ಸ) ಹೇಳಿರುವರು: ಮೂರು ವ್ಯಕ್ತಿಗಳು ವಿಚಾರಣೆಯಿಂದ ಹೊರತಾಗಿದ್ದಾರೆ.

i) ನಿದ್ರೆ ಹೋಗಿರುವ ವ್ಯಕ್ತಿ- ಅವನು ಎಚ್ಚರಾಗುವ ತನಕ.

ii) ಮಗು - ಅದು ಪ್ರೌಢನಾಗುವ ತನಕ.

iii) ಹುಚ್ಚ - ಅವನು ಮತಿವಂತನಾಗುವ ತನಕ.

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ, ಹಾಕಿಮ್)

ಮಕ್ಕಳ ಮೇಲೆ ನಮಾಝ್ ಕಡ್ಡಾಯವಲ್ಲದಿದ್ದರೂ ಮಗುವಿಗೆ ಏಳು ವರ್ಷ ಪ್ರಾಯವಾದಾಗ ಅದಕ್ಕೆ ನಮಾಝ್ ಮಾಡುವಂತೆ ಆಜ್ಞಾಪಿಸಬೇಕು. ಹತ್ತು ವರ್ಷ ಪ್ರಾಯವಾದ ನಂತರ ನಮಾಝ್ ಮಾಡದೇ ಇದ್ದರೆ, ದೈಹಿಕ ದಂಡನೆ ಕೊಟ್ಟು ಮಗುವನ್ನು ನಮಾಝ್ ಮಾಡುವಂತೆ ಪ್ರೇರೇಪಿಸುವ ಎಲ್ಲ ಪರಿಣಾಮಕಾರೀ ಕ್ರಮಗಳನ್ನು ಕೈಗೊಳ್ಳಬೇಕು.

ಪ್ರವಾದಿವರ್ಯರು(ಸ) ಹೀಗೆ ಹೇಳಿರುವರು: "ನಿಮ್ಮ ಮಕ್ಕಳು ಏಳು ವರ್ಷ ಪ್ರಾಯದವರಾದಾಗ ಅವರಿಗೆ ನಮಾಝನ್ನು ಆಜ್ಞಾಪಿಸಿರಿ ಮತ್ತು ಅವರು ಹತ್ತು ವರ್ಷದವರಾದಾಗ ನಮಾಝ್ ಮಾಡದಿದ್ದರೆ ಅವರಿಗೆ ಹೊಡೆಯಿರಿ ಮತ್ತು ಅವರ ಮಲಗುವ ಸ್ಥಳವನ್ನು ನಿಮ್ಮಿಂದ ಪ್ರತ್ಯೇಕಿಸಿರಿ."

(ವರದಿ: ಅಮ್ರ್ ಬಿನ್ ಶುಐಬ್(ರ) ತಮ್ಮ ತಂದೆಯಿಂದ ಅವರು ತಮ್ಮ ತಂದೆಯಿಂದ ಅಹ್ಮದ್, ಅಬೂ ದಾವೂದ್, ಹಾಕಿಮ್)

## 3. ಕಡ್ಡಾಯ ನಮಾಝ್‌ಗಳ ಸಂಖ್ಯೆ

ಕಡ್ಡಾಯ ನಮಾಝ್‌ಗಳ ಸಂಖ್ಯೆ ಐದಾಗಿದೆ. ಹ. ಅನಸ್(ರ) ಹೇಳಿರುತ್ತಾರೆ: "ಮಿಅ್‌ರಾಜ್‌ನ ರಾತ್ರಿ ಪ್ರವಾದಿವರ್ಯರ(ಸ) ಮೇಲೆ ಐವತ್ತು ನಮಾಝ್‌ಗಳು ಕಡ್ಡಾಯಗೊಂಡಿದ್ದುವು. ತರುವಾಯ ಅದನ್ನು ಕಡಿತಗೊಳಿಸಿ ಐದಕ್ಕೆ ಇಳಿಸಲಾಯಿತು. ಅನಂತರ ಒಂದು ಧ್ವನಿ ಕೇಳಿಸಿತು. ಓ ಮುಹಮ್ಮದ್! ನನ್ನ ಮಾತು ಅಚಲ. ಈ ಐದು ನಮಾಝ್‌ಗಳಲ್ಲಿ ತಮಗೆ ಐವತ್ತು ನಮಾಝ್‌ಗಳ ಪುಣ್ಯ ಫಲವಿದೆ." (ಅಹ್ಮದ್, ನಸಾಈ, ತಿರ್ಮಿದಿ)

ಹ. ತಲ್ಹಾ(ರ) ವರದಿ ಮಾಡುತ್ತಾರೆ: "ಒಬ್ಬ ಹಳ್ಳಿಯ ವ್ಯಕ್ತಿ ಕೆದರಿದ ತಲೆಗೂದಲುಗಳೊಂದಿಗೆ ಪ್ರವಾದಿವರ್ಯರ(ಸ) ಬಳಿ ಬಂದು ಈ ರೀತಿ ಪ್ರಶ್ನಿಸಿದರು- ಓ ಅಲ್ಲಾಹನ ಸಂದೇಶವಾಹಕರೇ, ನನ್ನ ಮೇಲೆ ಎಷ್ಟು ನಮಾಝ್‌ಗಳು ಕಡ್ಡಾಯವಾಗಿವೆ ಎಂದು ತಿಳಿಸಿ.

ಆಗ ಪ್ರವಾದಿವರ್ಯರು- ಐದು ನಮಾಝ್‌ಗಳು. ನೀವು ನಿಮ್ಮಿಚ್ಛೆಯಿಂದ ಇನ್ನಷ್ಟು (ಸುನ್ನತ್ ಮತ್ತು ನಫಿಲ್) ಮಾಡುವುದರ ಹೊರತು." (ಬುಖಾರಿ, ಮುಸ್ಲಿಮ್)

## 4. ನಮಾಝ್‌ನ ಸಮಯಗಳು

ಪವಿತ್ರ ಕುರ್‌ಆನಿನ ಈ ಕೆಳಗಿನ ಸೂಕ್ತಗಳಲ್ಲಿ ನಮಾಝ್‌ನ ಸಮಯಗಳ ಕಡೆಗೆ ಸೂಚನೆ ನೀಡಲಾಗಿದೆ.

i) **"ಹಗಲಿನ ಉಭಯ ಕೊನೆಗಳಲ್ಲೂ ರಾತ್ರಿ ಸ್ವಲ್ಪ ಕಳೆದ ಬಳಿಕವೂ ನಮಾಝನ್ನು ಸಂಸ್ಥಾಪಿಸಿರಿ."** (ಅರ್ಥಾತ್ ಫಜ್ರ್, ಮಗ್ರಿಬ್ ಮತ್ತು ಇಶಾ) (ಪವಿತ್ರ ಕುರ್‌ಆನ್, 11:114)

ii) **"ಸೂರ್ಯನ ಇಳಿಮುಖಾರಂಭದಿಂದ ನಿಶಾಂಧಕಾರದ ತನಕ ನಮಾಝನ್ನು ಸಂಸ್ಥಾಪಿಸಿರಿ."** (ಅರ್ಥಾತ್ ಝುಹರ್, ಅಸರ್, ಮಗ್ರಿಬ್, ಇಶಾ.)

(ಪವಿತ್ರ ಕುರ್‌ಆನ್, 17:78)

iii) **"ಸೂರ್ಯೋದಯಕ್ಕೆ ಹಾಗೂ ಸೂರ್ಯಾಸ್ತಮಾನಕ್ಕೆ ಮುಂಚೆ ನಿಮ್ಮ ಪ್ರಭುವಿನ ಸ್ತುತಿಸ್ತೋತ್ರದೊಂದಿಗೆ ಅವನ ಪಾವಿತ್ರ್ಯವನ್ನು ಕೊಂಡಾಡಿರಿ ಮತ್ತು ರಾತ್ರಿ ವೇಳೆಗಳಲ್ಲಿಯೂ ಹಗಲಿನ ಕಿನಾರೆಗಳಲ್ಲಿಯೂ ಅವನ ಪಾವಿತ್ರ್ಯವನ್ನು ಸ್ತುತಿಸಿರಿ. ಇದರಿಂದ ನೀವು ಸಂತೃಪ್ತರಾಗಲೂ ಬಹುದು."** (ಅರ್ಥಾತ್ ಫಜ್ರ್, ಅಸರ್, ಇಶಾ, ಝುಹರ್, ಮಗ್ರಿಬ್) (ತಾಹಾ: 130)

"ಪ್ರವಾದಿವರ್ಯರ(ಸ) ಬಳಿಗೆ ಜಿಬ್ರೀಲ್(ಅ) ಬಂದು ಹೀಗೆ ಹೇಳಿದರು- ಬನ್ನಿ, ನಮಾಝ್ ಮಾಡಿರಿ. ಪ್ರವಾದಿವರ್ಯರು(ಸ) ಝುಹರ್ ನಮಾಝ್ ಮಾಡಿದಾಗ ಸೂರ್ಯ ಇಳಿಮುಖವಾಗಿತ್ತು. ಮತ್ತೆ ಅಸರ್‌ನ ವೇಳೆ ಜಿಬ್ರೀಲ್(ಅ) ಬಂದು ಹೇಳಿದರು- ಏಳಿರಿ, ನಮಾಝ್ ಮಾಡಿರಿ. ಪ್ರವಾದಿವರ್ಯರು(ಸ) ಅಸರ್ ನಮಾಝ್ ಮಾಡಿದಾಗ ಪ್ರತಿಯೊಂದು ವಸ್ತುವಿನ ನೆರಳೂ ಅದರ ಸಮಾನ ಗಾತ್ರದಷ್ಟಿತ್ತು. ಆ ಬಳಿಕ ಮಗ್ರಿಬ್‌ನ ಸಮಯಕ್ಕೆ ಬಂದು ಹೇಳಿದರು- ಏಳಿರಿ, ನಮಾಝ್ ಮಾಡಿರಿ. ಪ್ರವಾದಿವರ್ಯರು(ಸ) ಮಗ್ರಿಬ್ ನಮಾಝ್ ಮಾಡಿದಾಗ ಸೂರ್ಯಾಸ್ತಮವಾಗಿತ್ತು. ಬಳಿಕ ಇಶಾದ ಸಮಯಕ್ಕೆ ಬಂದು ಹೇಳಿದರು- ಏಳಿರಿ, ನಮಾಝ್ ಮಾಡಿರಿ. ಪ್ರವಾದಿವರ್ಯರು(ಸ) ಇಶಾ ನಮಾಝ್ ಮಾಡಿದಾಗ ಮೂಡಣದ ಕೆಂಬಣ್ಣ ಮಾಯವಾಗಿತ್ತು. ತರುವಾಯ ಬೆಳಗ್ಗಿನ ಜಾವ ಪ್ರಭಾತ ಆಗುತ್ತಲೇ ಬಂದರು. ಅನಂತರ ಮಾರನೆಯ ದಿನ ಝುಹರ್‌ನ ವೇಳೆ ಜಿಬ್ರೀಲ್(ಅ) ಬಂದು ಪ್ರವಾದಿವರ್ಯರೊಂದಿಗೆ(ಸ) ಹೇಳಿದರು- ಏಳಿರಿ, ನಮಾಝ್ ಮಾಡಿರಿ. ಪ್ರವಾದಿವರ್ಯರು(ಸ) ಝುಹರ್ ನಮಾಝ್ ಮಾಡಿದಾಗ ಪ್ರತಿ ವಸ್ತುವಿನ ನೆರಳು ಅದರ ಸಮಾನ ಗಾತ್ರದಷ್ಟಿತ್ತು. ಆ ಬಳಿಕ ಅಸರ್‌ನ ವೇಳೆ ಬಂದು- ಏಳಿರಿ ನಮಾಝ್ ಮಾಡಿರಿ ಎಂದರು. ಪ್ರವಾದಿವರ್ಯರು(ಸ) ಅಸರ್ ನಮಾಝ್ ಮಾಡಿದಾಗ ಪ್ರತಿಯೊಂದು ವಸ್ತುವಿನ ನೆರಳು ಅದರ ಗಾತ್ರದ ಇಮ್ಮಡಿಯಾಗಿತ್ತು. ತರುವಾಯ ಮಗ್ರಿಬ್‌ನ ಸಮಯಕ್ಕೆ ಹಿಂದಿನ ದಿನ ಬಂದ ವೇಳೆಗೇ ಬಂದರು.

ತರುವಾಯ ಇಶಾದ ವೇಳೆಗೆ ಬಂದರು. ಪ್ರವಾದಿವರ್ಯರು(ಸ) ಇಶಾ ನಮಾಝ್ ಮಾಡಿದಾಗ ಅರ್ಧ ಅಥವಾ ರಾತ್ರಿಯ ಮೂರನೆಯ ಒಂದಂಶ ಕಳೆದಿತ್ತು. ತರುವಾಯ ಮುಂಜಾವಿನ ಮುಂಬೆಳಕು ಚೆನ್ನಾಗಿ ಹರಡಿದಾಗ ಬಂದು ಹೇಳಿದರು- ಏಳಿರಿ, ನಮಾಝ್ ಮಾಡಿರಿ. ಪ್ರವಾದಿವರ್ಯರು(ಸ) ಫಜ್ರ್ ನಮಾಝ್ ಮಾಡಿದರು. ಆ ಬಳಿಕ ಜಿಬ್ರೀಲ್(ಅ) ಈ ರೀತಿ ಹೇಳಿದರು- ನಮಾಝ್‌ಗಳ ವೇಳೆ ಈ ಎರಡೂ ಸಮಯಗಳ ಮಧ್ಯೆ ಇದೆ."

(ವರದಿ: ಹ. ಜಾಬಿರ್ ಬಿನ್ ಅಬ್ದುಲ್ಲಾ(ರ)- ಅಹ್ಮದ್, ನಸಾಈ, ತಿರ್ಮಿದಿ)

ಈ ಹದೀಸ್‌ನ ಕುರಿತು ಇಮಾಮ್ ಬುಖಾರಿ(ರ) ಈ ರೀತಿ ಹೇಳಿರುವರು: "ನಮಾಝ್‌ನ ಸಮಯಗಳ ಕುರಿತು ಇದು ಅತ್ಯಧಿಕ ನಂಬಲರ್ಹ ವರದಿಯಾಗಿದೆ."

**ನಮಾಝ್‌ನ ವೇಳೆಗಳನ್ನು ಬೇರೆ ಬೇರೆಯಾಗಿ ಈ ಕೆಳಗೆ ವಿವರಿಸಲಾಗಿದೆ:**

**1) ಫಜ್ರ್:** ಫಜ್ರ್‌ನ ಸಮಯವು ಮೇಲಿನ ಹದೀಸ್‌ನಿಂದ ತಿಳಿದು ಬರುವಂತೆ ಸುಬ್‌ಹ್ ಸಾದಿಕ್‌ನ ಆರಂಭದಿಂದ ಸೂರ್ಯೋದಯದ ತನಕವಿದೆ.

ಇಮಾಮ್ ಶಾಫಿಈಯವರ(ರ) ಪ್ರಕಾರ ಫಜ್ರ್ ನಮಾಝ್ ಪ್ರಥಮ ಸಮಯದಲ್ಲಿ ಅಂಧಕಾರ ಇನ್ನೂ ಇರುವಾಗಲೇ ನಿರ್ವಹಿಸುವುದು ಉತ್ತಮವಾಗಿದೆ.

ಹ. ಆಯಿಶಾ(ರ) ವರದಿ ಮಾಡುತ್ತಾರೆ:

"ಮುಸ್ಲಿಮ್ ಸ್ತ್ರೀಯರು ಫಜ್ರ್ ನಮಾಝನ್ನು ಪ್ರವಾದಿಯವರ ಜತೆ ಮಸೀದಿಯಲ್ಲಿ ನಿರ್ವಹಿಸುತ್ತಿದ್ದರು. ಅವರು ನಮಾಝ್ ಮಾಡಿ ಮರಳಿದಾಗ ಕತ್ತಲೆಯ ಕಾರಣದಿಂದ ಅವರನ್ನು ಯಾರೂ ಗುರುತಿಸುತ್ತಿರಲಿಲ್ಲ."

ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಮುಂಜಾವಿನ ಮುಂಬೆಳಕು ಹರಡಿದಾಗ ಫಜ್ರ್ ನಮಾಝ್ ನಿರ್ವಹಿಸುವುದು ಉತ್ತಮ. ಅಂದರೆ ಒಂದು ವೇಳೆ ಯಾವುದಾದರೂ ಕಾರಣದಿಂದ ಫಜ್ರ್ ನಮಾಝನ್ನು ಮತ್ತೊಮ್ಮೆ ನಿರ್ವಹಿಸಬೇಕಾಗಿ ಬಂದರೆ ಸುನ್ನತ್‌ನ ಪ್ರಕಾರ ವುಝೂ ಮಾಡಿ ಸಾವಕಾಶವಾಗಿ ನಮಾಝ್ ಮಾಡುವಷ್ಟು ಸಮಯ ಸೂರ್ಯೋದಯಕ್ಕೆ ಬಾಕಿ ಇರುವಾಗ ಫಜ್ರ್ ನಮಾಝ್ ಮಾಡುವುದು ಉತ್ತಮ. ಇಮಾಮ್ ಅಬೂ ಹನೀಫಾರವರು(ರ) ತಮ್ಮ ನಿಲುವಿಗೆ ಈ ಕೆಳಗಿನ ಹದೀಸನ್ನು ಆಧಾರವಾಗಿಟ್ಟುಕೊಂಡಿದ್ದಾರೆ.

ಪ್ರವಾದಿ(ಸ) ಹೀಗೆ ಹೇಳಿರುವರು: "ಫಜ್ರ್ ನಮಾಝಿನೊಂದಿಗೇ ಪ್ರಯಾಣಗಳಿಗೆ ಹೊರಡಿರಿ. ಏಕೆಂದರೆ ಅದರಲ್ಲಿ ಹೆಚ್ಚು ಪುಣ್ಯವಿದೆ."

(ವರದಿ: ರಾಫಿಲ್ ಬಿನ್ ಖದೀಜ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

**2) ಝುಹರ್:** ಝುಹರ್ ನಮಾಝ್‌ನ ವೇಳೆಯು ಸೂರ್ಯ ಇಳಿಮುಖವಾಗ ತೊಡಗುವಾಗಲೇ ಆರಂಭವಾಗುತ್ತದೆ ಮತ್ತು ಪ್ರತಿಯೊಂದು ವಸ್ತುವಿನ ನೆರಳು ಅದರ ಗಾತ್ರಕ್ಕೆ

ಸಮಾನವಾಗುವ ತನಕ ಇರುತ್ತದೆ. [ಮೇಲೆ ಹ. ಜಿಬ್ರೀಲ್‌ರ(ಅ) ಹದೀಸ್‌ನಲ್ಲಿ ವರದಿ ಯಾಗಿರುವಂತೆ.]

ತೆರೆದ ಮೈದಾನದಲ್ಲಿ ಮಧ್ಯಾಹ್ನಕ್ಕೆ ಮೊದಲೇ ಒಂದು ತುಂಡು ಕೋಲನ್ನು ನಾಟಿದರೆ ಸಮಯ ತಿಳಿಯುವುದು ಸುಲಭವಾಗುತ್ತದೆ. ಕೋಲಿನ ನೆರಳು ಸಮಯ ಕಳೆದಂತೆ ಕಡಿಮೆ ಯಾಗುತ್ತಾ ಹೋಗಿ ಸೂರ್ಯನು ನಡುನೆತ್ತಿಗೇರಿದಾಗ ಅದು ಕನಿಷ್ಠವಾಗುತ್ತದೆ. ಈ ಕನಿಷ್ಠತಮ ನೆರಳನ್ನು ಅಳತೆ ಮಾಡಬೇಕು. ಅನಂತರ ಅದು ಹೆಚ್ಚಾಗತೊಡಗಿದಾಗ ಸೂರ್ಯ ಇಳಿಮುಖ ವಾಯಿತೆಂದರ್ಥ. ಕೋಲಿನ ನೆರಳು ಕೋಲಿನ ಗಾತ್ರಕ್ಕೆ ಸಮಾನವಾದಾಗ ಶಾಫಿಈ ಕರ್ಮಶಾಸ್ತ್ರ ದಂತೆ ಝುಹರ್‌ನ ವೇಳೆ ಮುಕ್ತಾಯವಾಗುತ್ತದೆ. ನೆರಳಿನ ಗಾತ್ರವು ಕೋಲಿನ ಇಮ್ಮಡಿಯಷ್ಟಾ ದಾಗ ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಝುಹರ್‌ನ ಸಮಯ ಕೊನೆಗೊಳ್ಳುತ್ತದೆ. ಇಮಾಮ್ ಅಬೂ ಹನೀಫಾರ(ರ) ಈ ನಿಲುವಿಗೆ ಆಧಾರವು ಕೆಳಗಿನ ಹದೀಸ್ ಆಗಿದೆ:

"ಪ್ರವಾದಿವರ್ಯರು(ಸ) ಸೆಕೆಗಾಲದಲ್ಲಿ ನಮಾಝನ್ನು ತಂಪಿನ ಸಮಯದಲ್ಲಿ ನಿರ್ವಹಿಸುತ್ತಿದ್ದರು." (ವರದಿ ಹ. ಅನಸ್ ಮತ್ತು ಹ. ಅಬೂದರ್‍(ರ)- ಬುಖಾರಿ, ಮುಸ್ಲಿಮ್)

ಪ್ರತಿಯೊಂದು ನಮಾಝನ್ನು ಅದರ ಪ್ರಥಮ ವೇಳೆಯಲ್ಲೇ ನಿರ್ವಹಿಸುವುದು ಉತ್ತಮವಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ನಮಾಝನ್ನು ಅದರ ಪ್ರಥಮ ಸಮಯದಲ್ಲಿ ನಿರ್ವಹಿಸುವುದು ಅತ್ಯುತ್ತಮ ಕಾರ್ಯವಾಗಿದೆ."

ಆದರೆ ಸೆಕೆಗಾಲದಲ್ಲಿ ತೀವ್ರ ಸೆಕೆ ಇರುವಾಗ ಝುಹರ್ ನಮಾಝನ್ನು ಪ್ರಥಮ ವೇಳೆಗಿಂತ ಸ್ವಲ್ಪ ತಡವಾಗಿ ನಿರ್ವಹಿಸುವುದು ಉತ್ತಮ.

ಹ. ಅನಸ್(ರ) ವರದಿ ಮಾಡುತ್ತಾರೆ: "ಚಳಿಗಾಲವಾದಾಗ ಪ್ರವಾದಿವರ್ಯರು(ಸ) ನಮಾಝ್ ಬೇಗ ನಿರ್ವಹಿಸುತ್ತಿದ್ದರು ಮತ್ತು ಸೆಕೆಗಾಲದಲ್ಲಿ ನಮಾಝನ್ನು ತಂಪು ಮಾಡಿ ಅಂದರೆ ಪ್ರಥಮ ವೇಳೆಗಿಂತ ಸ್ವಲ್ಪ ತಡಮಾಡಿ ನಿರ್ವಹಿಸುತ್ತಿದ್ದರು." (ಬುಖಾರಿ)

ಹ. ಅಬೂದರ್‍(ರ) ವರದಿ ಮಾಡುತ್ತಾರೆ: ನಾವು ಒಂದು ಪ್ರಯಾಣದಲ್ಲಿ ಪ್ರವಾದಿ ವರ್ಯರ(ಸ) ಜೊತೆಗಿದ್ದೆವು. ಮುಅದ್ದಿನ್(ಅದಾನ್ ಹೇಳುವವನು) ಝುಹರ್‌ನ ಅದಾನ್ ಹೇಳಬಯಸಿದರು. ಆಗ ಪ್ರವಾದಿ(ಸ) ಹೇಳಿದರು- 'ತಂಪಾಗಿಸಿರಿ' ಈ ರೀತಿ ಅವರು ಎರಡು ಅಥವಾ ಮೂರು ಸಲ ಹೇಳಿದರು. ಎಲ್ಲಿಯ ವರೆಗೆಂದರೆ ನಮಗೆ ದಿನ್ನೆಗಳ ನೆರಳು ಕಾಣಿಸ ತೊಡಗಿತ್ತು. ಆಗ ಪ್ರವಾದಿ(ಸ) ಹೇಳಿದರು- ಸೆಕೆಯ ತೀವ್ರತೆಯು ನರಕದ ಆವಿಯಿಂದಾಗಿದೆ. ಸೆಕೆ ತೀವ್ರವಾದಾಗ ನಮಾಝನ್ನು ತಂಪು ಮಾಡಿ ನಿರ್ವಹಿಸಿರಿ."

(ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

**3) ಅಸರ್:** ಹ. ಜಿಬ್ರೀಲ್‌ರವರ(ಅ) ಹದೀಸ್‌ನಿಂದ ತಿಳಿದು ಬರುವಂತೆ ಅಸರ್ ನಮಾಝ್‌ನ ವೇಳೆಯು ಪ್ರತಿಯೊಂದು ವಸ್ತುವಿನ ನೆರಳು ಅದರ ಸಮಾನ ಗಾತ್ರದಷ್ಟಾಗುವಾಗ

ಆಗುತ್ತದೆ. ಇದು ಇಮಾಮ್ ಶಾಫಿಈಯವರ(ರ) ಅಭಿಪ್ರಾಯವಾಗಿದೆ. ಹನಫೀ ಕರ್ಮಶಾಸ್ತ್ರದಂತೆ ಪ್ರತಿಯೊಂದು ವಸ್ತುವಿನ ನೆರಳು ಅದರ ಇಮ್ಮಡಿಯಾದಾಗ ಅಸರ್‌ನ ಸಮಯ ಆರಂಭವಾಗುತ್ತದೆ.

ಅಸರ್‌ನ ಸಮಯವು ಸೂರ್ಯಾಸ್ತಮಾನದ ತನಕ ಇರುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಸೂರ್ಯ ಅಸ್ತಮಿಸುವುದಕ್ಕಿಂತ ಮುಂಚೆ ಅಸರ್‌ನ ಒಂದು ರಕಅತ್ ಸಿಕ್ಕಿದವನಿಗೆ ಅಸರ್ ನಮಾಝ್ ಸಿಕ್ಕಿತು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ಅಹ್ಮದ್, ತಿರ್ಮಿದಿ, ಇಬ್ನು ಮಾಜಃ)

ಅಸರ್ ನಮಾಝನ್ನು ಅದರ ಪ್ರಥಮ ವೇಳೆಯಲ್ಲಿ ನಿರ್ವಹಿಸುವುದು ಇಮಾಮ್ ಶಾಫಿಈಯವರ(ರ) ಪ್ರಕಾರ ಉತ್ತಮವಾಗಿದೆ. ಆದರೆ ಹನಫೀ ಕರ್ಮಶಾಸ್ತ್ರದಂತೆ ಅದನ್ನು ತಡಮಾಡಿ ನಿರ್ವಹಿಸುವುದು ಉತ್ತಮ.

ಹ. ಅನಸ್(ರ) ವರದಿ ಮಾಡುತ್ತಾರೆ: "ಸೂರ್ಯನು ಇನ್ನೂ ಪ್ರಕಾಶಮಾನವಾಗಿರುವಾಗಲೇ ಅಸರ್ ನಮಾಝ್ ನಿರ್ವಹಿಸುತ್ತಿದ್ದರು. (ನಮಾಝ್‌ನ ಬಳಿಕ) ಜನರು ನಗರದ ಹೊರವಲಯದಲ್ಲಿರುವ ಎತ್ತರ ಪ್ರದೇಶಗಳ ತನಕ ಹೋಗಿ ಬರುತ್ತಿದ್ದರು. ಆಗಲೂ ಸೂರ್ಯ ಮೇಲೆಯೇ ಇರುತ್ತಿತ್ತು. ಅವುಗಳ ಪೈಕಿ ಕೆಲವು ಸ್ಥಳಗಳು ನಗರದಿಂದ ನಾಲ್ಕು ಮೈಲಿಗಳಷ್ಟು ದೂರದಲ್ಲಿದ್ದುವು." (ಬುಖಾರಿ, ಮುಸ್ಲಿಮ್)

ವಿನಾ ಕಾರಣ ಅಸರ್ ನಮಾಝನ್ನು ಸೂರ್ಯಾಸ್ತಮಾನಕ್ಕೆ ಹತ್ತಿರ ಮಾಡಿ ನಿರ್ವಹಿಸುವುದು ಆಕ್ಷೇಪಾರ್ಹವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಇದು ಮುನಾಫಿಕ್‌ನ ನಮಾಝ್ ಆಗಿದೆ. ಅವನು ಕುಳಿತುಕೊಂಡು ಸೂರ್ಯ ಅಸ್ತಮಿಸುವುದನ್ನು ಕಾಯುತ್ತಿರುತ್ತಾನೆ. ಎಲ್ಲಿಯ ವರೆಗೆಂದರೆ, ಅದು ಶೈತಾನನ ಎರಡೂ ಕೊಂಬುಗಳ ಮಧ್ಯೆ ಇರುವಾಗ(ಅಸ್ತಮವಾಗುವಾಗ) ಎದ್ದು ನಾಲ್ಕು ಸಲಾಮು ಹೊಡೆಯುತ್ತಾನೆ ಮತ್ತು ಅವನು ಅಲ್ಲಾಹನನ್ನು ಅತ್ಯಲ್ಪವೇ ಸ್ಮರಿಸುತ್ತಾನೆ."

(ವರದಿ: ಹ. ಅನಸ್(ರ)- ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ)

**4) ಮಗ್ರಿಬ್:** ಮಗ್ರಿಬ್ ನಮಾಝ್‌ನ ಸಮಯವು ಸೂರ್ಯಾಸ್ತಮಾನದಿಂದ ಆರಂಭಗೊಂಡು 'ಶಫಕ್' ಮಾಯವಾಗುವ ತನಕ ಇರುತ್ತದೆ.

'ಶಫಕ್'ನ ಬಗ್ಗೆ ಇಮಾಮ್ ಅಬೂ ಹನೀಫಾರ(ರ) ಅಭಿಪ್ರಾಯವೇನೆಂದರೆ ಅದು ಮೂಡಣ ದಿಕ್ಕಿನಲ್ಲಿ ಕೆಂಬಣ್ಣ ಮಾಯವಾಗಿ ಉಂಟಾಗುವ ಬಿಳಿ ವರ್ಣವಾಗಿದೆ. ಆದರೆ ಇತರ ಮೂವರು ಕರ್ಮಶಾಸ್ತ್ರದ ಇಮಾಮರ ಅಭಿಪ್ರಾಯದಂತೆ 'ಶಫಕ್' ಸೂರ್ಯಾಸ್ತಮಾನದ

ಬಳಿಕ ಪಶ್ಚಿಮದಲ್ಲಿ ಮೂಡುವ ಕೆಂಬಣ್ಣವಾಗಿದ್ದು ಮಗ್ರಿಬ್‌ನ ಸಮಯವು ಅದು ಮಾಯವಾಗುವ ತನಕ ಇರುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಮಗ್ರಿಬ್ ನಮಾಝ್‌ನ ಸಮಯವು ಸೂರ್ಯ ಅಸ್ತಮಾನವಾಗುವುದರಿಂದ ಹಿಡಿದು 'ಶಫಕ್' ಮಾಯವಾಗುವ ತನಕ ಇರುತ್ತದೆ."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಮುಸ್ಲಿಮ್)

ಆದರೆ ಮಗ್ರಿಬ್ ನಮಾಝನ್ನು ಅದರ ಪ್ರಥಮ ವೇಳೆಯಲ್ಲೇ ನಿರ್ವಹಿಸುವುದು ಉತ್ತಮ. ಜಿಬ್ರೀಲ್‌ರ(ಅ) (ಹಿಂದೆ ಉದ್ಧರಿಸಿದ) ಹದೀಸ್‌ನಿಂದಲೂ ಇದು ವ್ಯಕ್ತವಾಗುತ್ತದೆ. ಅವರು ಎರಡೂ ದಿನಗಳಲ್ಲಿ ಮಗ್ರಿಬ್ ನಮಾಝನ್ನು ಅದರ ಪ್ರಥಮ ವೇಳೆಯಲ್ಲೇ ಮಾಡಿಸಿದ್ದರು.

ಹ. ರಾಫಿಅ್ ಬಿನ್ ಖದೀಜ್(ರ) ವರದಿ ಮಾಡುತ್ತಾರೆ:

ನಾವು ಪ್ರವಾದಿವರ್ಯರ(ಸ) ಜೊತೆ ಮಗ್ರಿಬ್ ನಮಾಝ್ ಮಾಡುತ್ತಿದ್ದೆವು. ಅನಂತರ ನಮ್ಮ ಪೈಕಿ ಯಾರಾದರೂ ಮರಳುವಾಗ ಅವನ ಬಾಣವು ಬಿದ್ದ ಸ್ಥಳವನ್ನು ನೋಡ ಬಲ್ಲವನಾಗಿರುತ್ತಿದ್ದ. (ಮುಸ್ಲಿಮ್)

ಹ. ಸಾಯಿಬ್ ಬಿನ್ ಝೈದ್(ರ) ವರದಿ ಮಾಡಿರುವಂತೆ ಪ್ರವಾದಿ(ಸ) ಹೀಗೆ ಹೇಳಿರುವರು:

"ನನ್ನ ಸಮುದಾಯದ ಜನರು, ನಕ್ಷತ್ರಗಳು ಉದಿಸುವ ಮೊದಲು ಮಗ್ರಿಬ್ ನಮಾಝ್ ಮಾಡುತ್ತಿರುವ ತನಕ ಸಹಜ ಪ್ರಕೃತಿಯಲ್ಲಿರುವರು." (ಅಹ್ಮದ್, ತಬ್ರಾನಿ)

ಈ ಎರಡೂ ಹದೀಸ್‌ಗಳ ಆಧಾರದಲ್ಲಿ ಎಲ್ಲ ಕರ್ಮಶಾಸ್ತ್ರ ವಿದ್ವಾಂಸರ ಪ್ರಕಾರ ಮಗ್ರಿಬ್ ನಮಾಝನ್ನು ಅದರ ಪ್ರಥಮ ವೇಳೆಯಲ್ಲಿ ನಿರ್ವಹಿಸುವುದು ಉತ್ತಮವಾಗಿದೆ.

**5) ಇಶಾ:** ಇಶಾ ನಮಾಝ್‌ನ ಸಮಯವು 'ಶಫಕ್' ಮಾಯವಾದಾಗಿನಿಂದ ಆರಂಭಗೊಂಡು ರಾತ್ರಿಯ ಮೂರನೆಯ ಒಂದು ಭಾಗ ಅಥವಾ ಅರ್ಧರಾತ್ರಿ ಕಳೆಯುವ ತನಕ ಇರುತ್ತದೆ. ಜಿಬ್ರೀಲ್‌ರ(ಅ) ಹದೀಸ್‌ನಿಂದಲೂ ಇದು ವ್ಯಕ್ತವಾಗುತ್ತದೆ. ಆದರೆ ಅನಿವಾರ್ಯ ಕಾರಣಗಳಿಗಾಗಿ ಅಥವಾ ಏನಾದರೂ ಅಡಚಣೆಯಿದ್ದರೆ ಫಜ್ರ್‌ನ ಸಮಯ ಆರಂಭವಾಗುವ ತನಕವೂ ಇಶಾ ನಮಾಝನ್ನು ನಿರ್ವಹಿಸಬಹುದಾಗಿದೆ.

ಹದೀಸ್‌ನಲ್ಲಿ ಮೂರನೆಯ ಒಂದು ರಾತ್ರಿ ಮತ್ತು ಅರ್ಧ ರಾತ್ರಿ ಎಂಬ ಪದಗಳಿವೆ. ಆದುದರಿಂದ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಇಶಾ ನಮಾಝ್‌ನ ಸಮಯ ಅರ್ಧರಾತ್ರಿಯ ವರೆಗಿದೆ ಹಾಗೂ ಇತರ ಮೂವರು ಇಮಾಮರ ಪ್ರಕಾರ ಮೂರನೆಯ ಒಂದು ರಾತ್ರಿಯಾಗುವ ತನಕವಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿದ್ರೆಯಲ್ಲಿ ಯಾವುದೇ ಲೋಪವಿಲ್ಲ. ಲೋಪವಿರುವುದು ಎಚ್ಚರವಿದ್ದಾಗಲೂ

ಮುಂದಿನ ನಮಾಝ್‌ನ ಸಮಯ ಆಗುವ ತನಕ ಬೇಕು ಬೇಕೆಂದೇ ನಮಾಝ್ ಮಾಡದಿರುವ ವ್ಯಕ್ತಿಯಲ್ಲಿ ಮಾತ್ರ." (ವರದಿ: ಹ. ಅಬೂ ಕತಾದಃ(ರ)- ಮುಸ್ಲಿಮ್)

ಈ ಹದೀಸ್‌ನಿಂದ ತಿಳಿದು ಬರುವಂತೆ ಪ್ರತಿಯೊಂದು ನಮಾಝ್‌ನ ಸಮಯವು ಮುಂದಿನ ನಮಾಝ್‌ನ ಸಮಯ ಆರಂಭವಾಗುವ ತನಕ ಇರುತ್ತದೆ. ಆದರೆ ಫಜ್ರ್ ನಮಾಝ್‌ನ ಸಮಯವು ಸೂರ್ಯೋದಯವಾಗುತ್ತಲೇ ಮುಗಿಯುತ್ತದೆ. ಈ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತವಿದೆ. (ಹಿದಾಯತುಲ್ ಮುಜ್ತಹಿದ್)

ಇಶಾ ನಮಾಝನ್ನು ಮೂರನೆಯ ಒಂದು ಅಥವಾ ಅರ್ಧ ರಾತ್ರಿಯ ತನಕ ತಡಮಾಡಿ ನಿರ್ವಹಿಸುವುದು ಉತ್ತಮವಾಗಿದೆ.

ಪ್ರವಾದಿ(ಸ) ಹೇಳಿರುವರು:

"ನನ್ನ ಸಮುದಾಯಕ್ಕೆ ತ್ರಾಸದಾಯಕವಾದೀತೆಂಬ ಭಯವಿಲ್ಲದಿರುತ್ತಿದ್ದರೆ ನಾನು ಅವರಿಗೆ ಇಶಾ ನಮಾಝನ್ನು ಮೂರನೆಯ ಒಂದು ರಾತ್ರಿ ಅಥವಾ ಅರ್ಧ ರಾತ್ರಿಯ ತನಕ ತಡ ಮಾಡಿ ನಿರ್ವಹಿಸಬೇಕೆಂದು ಆಜ್ಞಾಪಿಸುತ್ತಿದ್ದೆ."

(ವರದಿ: ಹ. ಆಯಿಶಾ(ರ)- ಅಹ್ಮದ್, ಇಬ್ನು ಮಾಜಃ, ತಿರ್ಮಿದಿ)

"ಸಹಾಬಿಗಳು(ರ) ಇಶಾ ನಮಾಝನ್ನು 'ಶಫಕ್' ಮಾಯವಾಗುವುದರಿಂದ ಹಿಡಿದು ಮೂರನೆಯ ಒಂದು ರಾತ್ರಿ ಕಳೆಯುವ ತನಕ ನಿರ್ವಹಿಸುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ)

ಇಶಾ ನಮಾಝ್‌ಗಿಂತ ಮೊದಲು ಮಲಗುವುದನ್ನು ಮತ್ತು ಇಶಾ ನಮಾಝ್‌ನ ನಂತರ ಮಾತಾಡುವುದನ್ನು ಪ್ರವಾದಿ(ಸ) ಇಷ್ಟಪಡುತ್ತಿರಲಿಲ್ಲ.

"ಪ್ರವಾದಿ(ಸ) ಇಶಾ ನಮಾಝನ್ನು ರಾತ್ರಿಯ ಮೂರನೆಯ ಒಂದು ಭಾಗ ಕಳೆಯುವ ತನಕ ತಡಮಾಡಿ ನಿರ್ವಹಿಸುವುದನ್ನು ಇಷ್ಟಪಡುತ್ತಿದ್ದರು. ಇಶಾ ನಮಾಝ್‌ಗಿಂತ ಮೊದಲು ಮಲಗುವುದನ್ನು ಮತ್ತು ಇಶಾ ನಮಾಝ್‌ನ ನಂತರ ಮಾತಾಡುವುದನ್ನು ಅವರು ಇಷ್ಟಪಡುತ್ತಿರಲಿಲ್ಲ."

(ವರದಿ: ಹ. ಅಬೂ ಬರ್‌ದಃ ಅಸ್‌ಲಮೀ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

ಆದರೆ ಮಾತುಕತೆಯು ಉಪಯುಕ್ತವಾಗಿದ್ದು ಫಜ್ರ್ ನಮಾಝ್‌ಗಿಂತ ಮೊದಲು ಏಳುವ ಅಭ್ಯಾಸವಿದ್ದರೆ ಇಶಾ ನಮಾಝ್‌ನ ನಂತರವೂ ಅಂತಹ ಮಾತುಕತೆಗೆ ಅನುಮತಿಯಿದೆ.

"ಪ್ರವಾದಿ(ಸ) ಹ. ಅಬೂಬಕರ್‌ರವರ(ರ) ಜತೆ ರಾತ್ರಿ ವೇಳೆ ಮಾತುಕತೆ ನಡೆಸುತ್ತಿದ್ದರು. ನಾನು ಅವರ ಬಳಿಯಿರುತ್ತಿದ್ದೆ. ಈ ಮಾತುಕತೆಯು ಮುಸ್ಲಿಮರ ವ್ಯವಹಾರಗಳ ಕುರಿತಾಗಿರುತ್ತಿತ್ತು."

(ವರದಿ: ಹ. ಇಬ್ನು ಉಮರ್(ರ)- ಅಹ್ಮದ್, ತಿರ್ಮಿದಿ)

# ಅದಾನ್ ಮತ್ತು ಇಕಾಮತ್

**1. ಅದಾನ್‌ನ ಮಹತ್ವ:**

ಅದಾನ್ ಮತ್ತು ಮುಅದ್ದಿನ್ (ಅದಾನ್ ಕೊಡುವವ)ನ ಕುರಿತು ಅನೇಕ ಹದೀಸ್‌ಗಳಿವೆ. ಅವುಗಳ ಪೈಕಿ ಕೇವಲ ಎರಡನ್ನು ಮಾತ್ರ ಇಲ್ಲಿ ಕೊಡುತ್ತಿದ್ದೇವೆ.

1. ಪ್ರವಾದಿ(ಸ) ಹೀಗೆ ಹೇಳಿದರು:

"ಜನರಿಗೆ ಅದಾನ್ ಮತ್ತು (ಜಮಾಅತ್‌ನ) ಮೊದಲ ಪಂಕ್ತಿಯಲ್ಲಿ ಎಷ್ಟು ಪುಣ್ಯವಿದೆ ಎಂದು ತಿಳಿದಿರುತ್ತಿದ್ದರೆ ಅದಕ್ಕಾಗಿ ಅದೃಷ್ಟ ಚೀಟಿ ಎತ್ತುವ ಹೊರತು ಅವರಿಗೆ ಬೇರಾವ ಮಾರ್ಗವೂ ಇರುತ್ತಿರಲಿಲ್ಲ." (ವರದಿ: ಅಬೂ ಹುರೈರಾ(ರ)- ಬುಖಾರಿ)

2. "ಮೂವರು ವ್ಯಕ್ತಿಗಳು ಅದಾನ್ ಹೇಳಿ ಜಮಾಅತ್ ಮಾಡಿ ನಮಾಝ್ ನಿರ್ವಹಿಸದೆ ಇದ್ದರೆ ಶೈತಾನನು ಅವರ ಮೇಲೆ ಪ್ರಾಬಲ್ಯ ಪಡೆಯುತ್ತಾನೆ."

(ವರದಿ: ಹ. ಅಬೂದರ್ದಾ(ರ)- ಮುಸ್ನದ್ ಅಹ್ಮದ್)

**2. ಅದಾನ್‌ನ ವಾಕ್ಯಗಳು:**

ಹದೀಸ್‌ಗಳಲ್ಲಿ ಅದಾನ್‌ನ ಕುರಿತು ಮೂರು ರೀತಿಯಲ್ಲಿ ವಿವರಿಸಲಾಗಿದೆ:

1) 'ಅಲ್ಲಾಹು ಅಕ್ಬರ್' ನಾಲ್ಕು ಸಲ ಮತ್ತು ಕೊನೆಯ 'ಲಾ ಇಲಾಹ ಇಲ್ಲಲ್ಲಾಹ್' ಎಂಬ ವಾಕ್ಯದ ಹೊರತು ಉಳಿದವುಗಳು ಎರಡೆರಡು ಸಲ.

ಹ. ಅಬ್ದುಲ್ಲಾ ಬಿನ್ ಝೈದ್(ರ) ವರದಿ ಮಾಡುತ್ತಾರೆ: "ಮೊದಲು ಪ್ರವಾದಿ(ಸ) ಜನರನ್ನು ಶಂಖ ಊದಿ ನಮಾಝ್‌ಗಾಗಿ ಒಟ್ಟು ಸೇರಿಸುವ ಆಜ್ಞೆ ನೀಡಿದ್ದಾಗ, ಒಂದು ರಾತ್ರಿ ನನಗೊಂದು ಸ್ವಪ್ನ ಬಿತ್ತು. ಒಬ್ಬ ವ್ಯಕ್ತಿ ನನ್ನ ಸುತ್ತ ತಿರುಗತೊಡಗಿದನು. ಅವನ ಕೈಯಲ್ಲೊಂದು ಶಂಖವಿತ್ತು. ನಾನು ಅವನಲ್ಲಿ ಈ ರೀತಿ ವಿಚಾರಿಸಿದೆ: 'ಓ ಅಲ್ಲಾಹನ ದಾಸನೇ! ನೀನು ಇದನ್ನು ಮಾರುತ್ತೀಯಾ?' ಆತ ಕೇಳಿದ, 'ಇದನ್ನು ಕೊಂಡು ನೀವೇನು ಮಾಡುವಿರಿ?' ಆಗ ನಾನು- 'ನಾವು ಅದರ ಮೂಲಕ ಜನರನ್ನು ನಮಾಝ್‌ಗಾಗಿ ಕರೆಯುವೆವು' ಎಂದೆ. ಆಗ ಆತ ಹೀಗೆ ಹೇಳಿದ- 'ನಾನು ನಿಮಗೆ ಇದಕ್ಕಿಂತ ಉತ್ತಮ ಕ್ರಮವನ್ನು ಕಲಿಸಿಕೊಡಲೇ?' ನಾನು 'ಖಂಡಿತ' ಎಂದೆ. ಆಗ ಆತ ನೀವು ಈ ರೀತಿ ಹೇಳಿರಿ ಎಂದ:

اَللّٰهُ اَكْبَرْ، اَللّٰهُ اَكْبَرْ، اَللّٰهُ اَكْبَرْ، اَللّٰهُ اَكْبَرْ ـ اَشْهَدُ اَنْ لَّآ اِلٰهَ اِلَّا اللّٰهُ،
اَشْهَدُ اَنْ لَّآ اِلٰهَ اِلَّا اللّٰهُ ـ اَشْهَدُ اَنَّ مُحَمَّدًا رَّسُوْلُ اللّٰهِ، اَشْهَدُ اَنَّ
مُحَمَّدًا رَّسُوْلُ اللّٰهِ ـ حَيَّ عَلَى الصَّلٰوةِ، حَيَّ عَلَى الصَّلٰوةِ ـ حَيَّ عَلَى
الْفَلَاحِ، حَيَّ عَلَى الْفَلَاحِ ـ اَللّٰهُ اَكْبَرْ، اَللّٰهُ اَكْبَرْ، لَآ اِلٰهَ اِلَّا اللّٰهُ

"ಅಲ್ಲಾಹು ಅಕ್‌ಬರ್, ಅಲ್ಲಾಹು ಅಕ್‌ಬರ್
ಅಲ್ಲಾಹು ಅಕ್‌ಬರ್, ಅಲ್ಲಾಹು ಅಕ್‌ಬರ್
ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್
ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್
ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್
ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್
ಹಯ್ಯ ಅಲಸ್ಸಲಾಃ, ಹಯ್ಯ ಅಲಸ್ಸಲಾಃ
ಹಯ್ಯ ಅಲಲ್ ಫಲಾಹ್, ಹಯ್ಯ ಅಲಲ್ ಫಲಾಹ್
ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್
ಲಾ ಇಲಾಹ ಇಲ್ಲಲ್ಲಾಹ್."

ಅರ್ಥ:

ಅಲ್ಲಾಹನೇ ಮಹಾನನು, ಅಲ್ಲಾಹನೇ ಮಹಾನನು.
ಅಲ್ಲಾಹನೇ ಮಹಾನನು. ಅಲ್ಲಾಹನೇ ಮಹಾನನು.
ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ,
ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ.
ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯಾಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ,
ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯಾಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ.
ಬನ್ನಿ ನಮಾಝ್‌ನ ಕಡೆಗೆ! ಬನ್ನಿ ನಮಾಝ್‌ನ ಕಡೆಗೆ!
ಬನ್ನಿ ವಿಜಯದ ಕಡೆಗೆ! ಬನ್ನಿ ವಿಜಯದ ಕಡೆಗೆ!
ಅಲ್ಲಾಹನೇ ಮಹಾನನು, ಅಲ್ಲಾಹನೇ ಮಹಾನನು. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ.

ತರುವಾಯ ಆ ವ್ಯಕ್ತಿ ಸ್ವಲ್ಪ ಹಿಂದೆ ಸರಿದು 'ನೀವು ನಮಾಝ್‌ಗೆ ನಿಂತಾಗ ಈ ರೀತಿ ಹೇಳಿರಿ- (ಅರ್ಥಾತ್ ಇಕಾಮತ್‌ಗಾಗಿ):

ಅಲ್ಲಾಹು ಅಕ್‌ಬರ್ ಅಲ್ಲಾಹು ಅಕ್‌ಬರ್
ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್
ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್
ಹಯ್ಯ ಅಲಸ್ಸಲಾಃ, ಹಯ್ಯ ಅಲಲ್ ಫಲಾಹ್
ಕದ್ ಕಾಮತಿಸ್ಸಲಾಃ, ಕದ್ ಕಾಮತಿಸ್ಸಲಾಃ
(ಅರ್ಥಾತ್ ನಮಾಝ್ ನಿಂತಿದೆ, ನಮಾಝ್ ನಿಂತಿದೆ)
ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್
ಲಾ ಇಲಾಹ ಇಲ್ಲಲ್ಲಾಹ್.

ಬೆಳಗಾಗುತ್ತಲೇ ನಾನು ನನ್ನ ಈ ಕನಸನ್ನು ಪ್ರವಾದಿವರ್ಯರಿಗೆ(ಸ) ವಿವರಿಸಿದೆ. ಆಗ ಪ್ರವಾದಿ(ಸ), ಇನ್‌ಶಾ ಅಲ್ಲಾಹ್ ಇದು ನೈಜ ಕನಸು. ಬಿಲಾಲ್‌ರ(ರ) ಜತೆ ನಿಲ್ಲಿರಿ ಮತ್ತು ಕನಸಿನಲ್ಲಿ ಕೇಳಿದ ಪದಗಳನ್ನು ಹೇಳುತ್ತಿರಿ. ಅವರು ಅದಾನ್ ಕೊಡಲಿ. ಏಕೆಂದರೆ ಅವರ ಸ್ವರವು ನಿಮಗಿಂತ ಗಟ್ಟಿಯಾಗಿದೆ. ನಾನು ಹ. ಬಿಲಾಲ್‌ರವರ(ರ) ಜತೆ ನಿಂತು ಅವರಿಗೆ ಹೇಳಿ ಕೊಡುತ್ತಿದ್ದೆ ಮತ್ತು ಅವರು ಅದಾನ್ ಹೇಳುತ್ತಿದ್ದರು. ಈ ಅದಾನ್ ಕೇಳುವಾಗ ಹ. ಉಮರ್(ರ) ತಮ್ಮ ಮನೆಯಲ್ಲಿದ್ದರು. ಅವರು ತಮ್ಮ ಹೊದಿಕೆಯನ್ನೆಳೆಯುತ್ತಾ ಬಂದು ಹೇಳಿದರು- 'ಪ್ರವಾದಿವರ್ಯರೇ! ನಾನು ತಮ್ಮನ್ನು ಸತ್ಯಸಹಿತ ಕಳುಹಿಸಿದವನ ಆಣೆ ಹಾಕಿ ಹೇಳುತ್ತೇನೆ. ನಾನೂ ಇಂತಹುದೇ ಕನಸು ಕಂಡಿದ್ದೆ.' ಆಗ ಪ್ರವಾದಿ(ಸ) ಹೇಳಿದರು: ಫಲಿಲ್ಲಾಹಿಲ್ ಹಮ್ದ್ (ಅಲ್ಲಾಹನಿಗೆ ಸರ್ವಸ್ತುತಿ)." (ಮುಸ್ನದ್ ಅಹ್ಮದ್)

2) 'ಅಲ್ಲಾಹು ಅಕ್‌ಬರ್' ಎಂಬ ವಚನವನ್ನು ನಾಲ್ಕು ಸಲ ಹೇಳುವುದು ಅನಂತರ أَشْهَدُ أَنْ لَّآ إِلٰهَ إِلَّا اللّٰهُ 'ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್' ಮತ್ತು أَشْهَدُ أَنَّ مُحَمَّدًا رَّسُوْلُ اللّٰهِ 'ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್' ಎಂಬುದನ್ನು ಪುನರಾವರ್ತಿಸಿ ಹೇಳುವುದು. ಅರ್ಥಾತ್ ಮೊದಲು ಒಮ್ಮೆ ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್, ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್ ಅಶ್‌ಹದು ಅನ್ನ ಮುಹಮ್ಮದರ್ರ ಸೂಲುಲ್ಲಾಹ್ ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್ ಎಂಬುದನ್ನು ಮೆಲುದನಿಯಲ್ಲಿ ಹೇಳಿ ಪುನಃ ಅದನ್ನು ಜೋರಾಗಿ ಪುನರಾವರ್ತಿಸುವುದು.

"ಪ್ರವಾದಿ(ಸ) ನನಗೆ ಅದಾನ್‌ನ 19 ವಚನಗಳನ್ನು ಕಲಿಸಿದರು (ಪುನರಾವರ್ತನೆ ಯೊಂದಿಗೆ)."

(ವರದಿ: ಹ. ಅಬೂ ಮಹ್‌ದೂರಃ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಇಮಾಮ್ ಶಾಫಿಈಯವರು(ರ) ಇದನ್ನೇ ಉತ್ತಮವೆಂದು ಪರಿಗಣಿಸುತ್ತಾರೆ.

3) ಅಲ್ಲಾಹು ಅಕ್‌ಬರ್ ಎಂದು ಕೇವಲ ಎರಡು ಸಲ, ಅನಂತರ ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್ ಮತ್ತು ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್ ಎಂಬುದನ್ನು ಪುನರಾವರ್ತಿಸಿ ಹೇಳುವುದು.

ಹ. ಅಬೂ ಮಹ್‌ದೂರಃ(ರ) ವರದಿ ಮಾಡುತ್ತಾರೆ: ಪ್ರವಾದಿವರ್ಯರು(ಸ) ಅವರಿಗೆ ಈ ರೀತಿ ಅದಾನ್ ಕಲಿಸಿಕೊಟ್ಟರು:

**ಅಲ್ಲಾಹು ಅಕ್‌ಬರ್, ಅಲ್ಲಾಹು ಅಕ್‌ಬರ್**
**ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್...**
**ಲಾ ಇಲಾಹ ಇಲ್ಲಲ್ಲಾಹ್** (ಮುಸ್ಲಿಮ್)

ಇಮಾಮ್ ಮಾಲಿಕ್‌ರವರು(ರ) ಈ ಹದೀಸಿನಂತೆಯೇ ಅದಾನ್ ಕೊಡಬೇಕೆನ್ನುತ್ತಾರೆ. ಫಜ್ರ್‌ನ ಅದಾನ್‌ನಲ್ಲಿ "ಹಯ್ಯ ಅಲಲ್ ಫಲಾಹ್" ಎಂದ ನಂತರ ಎರಡು ಸಲ اَلصَّلٰوةُ خَيْرٌ مِّنَ النَّوْمِ ಅಸ್ಸಲಾತು ಖೈರುಮ್ಮಿನನ್ನೌಮ್' (ನಮಾಝ್ ನಿದ್ರೆಗಿಂತ ಉತ್ತಮ) ಎಂದು ಹೇಳಬೇಕು.

ಹ. ಅಬೂ ಮಹ್‌ದೂರಃ(ರ) ವರದಿ ಮಾಡುತ್ತಾರೆ. "ನಾನು ಪ್ರವಾದಿವರ್ಯರಲ್ಲಿ(ಸ) ಈ ರೀತಿ ನಿವೇದಿಸಿದೆ: ಪ್ರವಾದಿವರ್ಯರೇ! ನನಗೆ ಸುನ್ನತ್ ಅದಾನ್ ಕಲಿಸಿಕೊಡಿರಿ. ಆಗ ಪ್ರವಾದಿವರ್ಯರು(ಸ) ನನಗೆ ಅದಾನ್ ಕಲಿಸಿಕೊಟ್ಟರು. ಆ ಬಳಿಕ ಹೀಗೆ ಹೇಳಿದರು: ಫಜ್ರ್‌ನ ಅದಾನ್ ಆಗಿದ್ದರೆ ಹೀಗೆ ಹೇಳಿರಿ: ಅಸ್ಸಲಾತು ಖೈರುಮ್ಮಿನನ್ನೌಮ್-ಅಸ್ಸಲಾತು ಖೈರುಮ್ಮಿನನ್ನೌಮ್, ಅಲ್ಲಾಹು ಅಕ್‌ಬರ್-ಅಲ್ಲಾಹು ಅಕ್ಬರ್, ಲಾ ಇಲಾಹ ಇಲ್ಲಲ್ಲಾಹ್." (ಅಹ್ಮದ್, ಅಬೂ ದಾವೂದ್)

ಇಮಾಮ್ ಅಬೂ ಹನೀಫಾ(ರ) ಮತ್ತು ಇಮಾಮ್ ಶಾಫಿಈಯವರು(ರ) ಇದನ್ನೇ ಆದೇಶಿಸಿರುವರು.

### 3. ಇಕಾಮತ್‌ನ ವಾಕ್ಯಗಳು

ಹದೀಸ್‌ಗಳಲ್ಲಿ ಇಕಾಮತ್‌ನ ವಾಕ್ಯಗಳನ್ನು ಎರಡು ರೀತಿಯಲ್ಲಿ ವಿವರಿಸಲಾಗಿದೆ-

1) 'ಅಲ್ಲಾಹು ಅಕ್‌ಬರ್' ಎಂಬ ವಚನವನ್ನು ನಾಲ್ಕು ಸಲ ಮತ್ತು ಕೊನೆಯಲ್ಲಿ 'ಲಾ ಇಲಾಹ ಇಲ್ಲಲ್ಲಾಹ್' ಎಂಬುದನ್ನು ಹೊರತುಪಡಿಸಿ ಇತರ ವಾಕ್ಯಗಳನ್ನು ಎರಡೆರಡು ಸಲ ಹೇಳುವುದು.

ಹ. ಅಬೂ ಮಹ್‌ದೂರಃ(ರ) ವರದಿ ಮಾಡುತ್ತಾರೆ:

"ಪ್ರವಾದಿ(ಸ) ನನಗೆ ಇಕಾಮತ್‌ನ 17 ವಚನಗಳನ್ನು ಕಲಿಸಿರುವರು. ಅಲ್ಲಾಹು ಅಕ್ಬರ್ 4 ಸಲ, ಅಶ್‌ಹದು ಅಲ್ಲಾ ಇಲ್ಲಾಹ ಇಲ್ಲಲ್ಲಾಹ್ 2 ಸಲ, ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್ 2 ಸಲ, ಹಯ್ಯ ಅಲಸ್ಸಲಾಃ ಎರಡು ಸಲ, ಹಯ್ಯ ಅಲಲ್ ಫಲಾಹ್ ಎರಡು ಸಲ, قَدْ قَامَتِ الصَّلٰوةُ ಕದ್‌ಕಾಮತಿಸ್ಸಲಾಃ ಎರಡು ಸಲ, ಅಲ್ಲಾಹು ಅಕ್‌ಬರ್ ಎರಡು ಸಲ, ಲಾ ಇಲಾಹ ಇಲ್ಲಲ್ಲಾಹ್ ಒಂದು ಸಲ."

(ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

2) ಮೊದಲು ಮತ್ತು ಕೊನೆಯಲ್ಲಿ 'ಅಲ್ಲಾಹು ಅಕ್‌ಬರ್' ಎರಡೆರಡು ಸಲ ಹೇಳುವುದು ಮತ್ತು ಇತರ ಎಲ್ಲ ವಚನಗಳನ್ನು ಒಮ್ಮೊಮ್ಮೆ ಹೇಳುವುದು. ಮೇಲೆ ಉದ್ಧರಿಸಿದ ಹ. ಅಬ್ದುಲ್ಲಾ ಬಿನ್ ಝೈದ್‌ರ(ರ) ಹದೀಸ್‌ನಿಂದಲೂ ಇದು ವ್ಯಕ್ತವಾಗುತ್ತದೆ. ಮಾತ್ರವಲ್ಲದೆ ಇನ್ನೊಂದು ವರದಿಯಿಂದಲೂ ಇದು ತಿಳಿದು ಬರುತ್ತದೆ.

ಹ. ಅನಸ್(ರ) ವರದಿ ಮಾಡಿರುವ ಪ್ರಕಾರ ಹ. ಬಿಲಾಲ್‌ರವರಿಗೆ(ರ) ಅದಾನ್ ಎರಡೆರಡು ಸಲ ಮತ್ತು ಇಕಾಮತ್ ಒಂದೊಂದು ಸಲ ಹೇಳಬೇಕೆಂದು- 'ಕದ್ ಕಾಮತಿಸ್ಸಲಾಃ' ಎಂಬ ವಚನದ ಹೊರತು ಆಜ್ಞಾಪಿಸಲಾಗಿತ್ತು.

(ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಇಮಾಮ್ ಶಾಫಿಈಯವರ(ರ) ಅಭಿಪ್ರಾಯವೂ ಇದುವೇ ಆಗಿದೆ.

## 4. ಅದಾನ್‌ನ ಉತ್ತರ

ಅದಾನ್ ಕೇಳುವವನು ಮುಅದ್ದಿನ್‌ನ ಜತೆಗೆ ಅದಾನ್‌ನ ವಚನಗಳನ್ನು ಪುನರುಚ್ಚರಿಸುವುದು ಇಮಾಮ್ ಅಬೂ ಹನೀಫಾರ(ರ) ಪ್ರಕಾರ ವಾಜಿಬ್(ಫರ್ಝ್‌ಗಿಂತ ಕೆಳ ಮಟ್ಟದ ಆದರೆ ಸುನ್ನತ್‌ಗಿಂತ ಉನ್ನತವಾದ ಒಂದು ಕರ್ತವ್ಯ) ಆಗಿದೆ. ಇಮಾಮ್ ಶಾಫಿಈ ಮತ್ತಿತರ ಕರ್ಮಶಾಸ್ತ್ರಜ್ಞರ ಪ್ರಕಾರ ಅದು ಮುಸ್ತಹಬ್ (ಅಪೇಕ್ಷಿತ ಪುಣ್ಯ ಕಾರ್ಯ) ಆಗಿದೆ.

(ನೈಲುಲ್ ಔತಾರ್- ಭಾಗ-2, ಪುಟ:44)

ಮುಅದ್ದಿನ್ ಹಯ್ಯ ಅಲಸ್ಸಲಾಃ ಅಥವಾ ಹಯ್ಯ ಅಲಲ್ ಫಲಾಹ್ ಎನ್ನುವಾಗ لَا حَوْلَ وَلَا قُوَّةَ إِلَّا بِاللهِ 'ಲಾ ಹೌಲ ವಲಾ ಕುವ್ವತ ಇಲ್ಲಾ ಬಿಲ್ಲಾಹ್' ಎಂದು ಹೇಳುವುದು ಕೂಡಾ ಅಪೇಕ್ಷಿತ ಪುಣ್ಯಕಾರ್ಯವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಪ್ರಾಮಾಣಿಕವಾಗಿ ಈ ರೀತಿ ಹೇಳುವವನು ಸ್ವರ್ಗದಲ್ಲಿ ಪ್ರವೇಶಿಸುವನು."

(ವರದಿ: ಹ. ಉಮರ್(ರ)- ಮುಸ್ಲಿಮ್, ಅಬೂ ದಾವೂದ್)

ಫಜ್ರ್‌ನ ಅದಾನ್‌ನಲ್ಲಿ 'ಅಸ್ಸಲಾತು ಖೈರುಮ್ಮಿನನ್ನೌಮ್' ಎಂಬುದಕ್ಕೆ ಉತ್ತರವಾಗಿ ಹೇಳುವ ಪದಗಳ ಕುರಿತು ಹದೀಸ್‌ಗಳಲ್ಲಿ ಪ್ರಸ್ತಾಪಿಸಲ್ಪಟ್ಟಿಲ್ಲ.

ಆದರೆ ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರದಂತೆ ಫಜ್ರ್‌ನ ಅದಾನ್‌ನಲ್ಲಿ 'ಅಸ್ಸಲಾತು ಖೈರುಮ್ಮಿನನ್ನೌಮ್' ಎಂಬುದಕ್ಕೆ ಉತ್ತರವಾಗಿ 'ಸದಕ್ತ ವ ಬರರ್ತ' (ನೀನು ಸತ್ಯ ಹೇಳಿದ್ದೆ ಮತ್ತು ಪುಣ್ಯ ಕಾರ್ಯದತ್ತ ಕರೆದೆ) ಎನ್ನುವುದು ಅಪೇಕ್ಷಿತ ಪುಣ್ಯಕಾರ್ಯವಾಗಿದೆ.

## 5. ಅದಾನ್‌ನ ನಂತರದ ಪ್ರಾರ್ಥನೆ

ಅದಾನ್ ಮುಗಿದ ಬಳಿಕ ಪ್ರವಾದಿವರ್ಯರ(ಸ) ಮೇಲೆ ಸಲಾತ್(ಸ್ವಸ್ತಿವಚನ) ಹೇಳಬೇಕು ಮತ್ತು ಅವರಿಗೆ 'ವಸೀಲ' ಸಿಗಲೆಂದು ಅಲ್ಲಾಹನಲ್ಲಿ ಪ್ರಾರ್ಥಿಸಬೇಕು.

ಪ್ರವಾದಿ(ಸ) ಹೇಳಿದರು:

"ಅದಾನ್ ಆಲಿಸಿದ ಬಳಿಕ ಈ ದುಆ (ಪ್ರಾರ್ಥನೆ) ಮಾಡುವ ವ್ಯಕ್ತಿಗೆ ಪುನರುತ್ಥಾನ ದಿನ ನನ್ನ ಶಫಾಅತ್(ಶಿಫಾರಸು) ಕಡ್ಡಾಯವಾಗುತ್ತದೆ."

اَللّٰهُمَّ رَبَّ هٰذِهِ الدَّعْوَةِ التَّامَّةِ وَ الصَّلٰوةِ الْقَائِمَةِ اٰتِ مُحَمَّدَا نِ الْوَسِيْلَةَ وَالْفَضِيْلَةَ وَابْعَثْهُ مَقَاماً مَحْمُوْدًا ن الَّذِىْ وَعَدْتَّهُ۔ (البخارى)

"ಅಲ್ಲಾಹುಮ್ಮ ರಬ್ಬ ಹಾದಿಹಿದ್ದ ಲ್‌ವತಿತ್ತಾಮ್ಮತಿ, ವಸ್ಸಲಾತಿಲ್ ಕಾ ಇಮತಿ, ಆತಿ ಮುಹಮ್ಮದನಿಲ್ ವಸೀಲಅ ವಲ್ ಫದೀಲತ ವಬ್‌ಅಸ್‌ಹು ಮಕಾಮಮ್ಮಹ್ಮೂದನಿಲ್ಲದೀ ವಅತ್ತಹೂ."

ಅರ್ಥ: ಓ ಅಲ್ಲಾಹ್! ಈ ಸಮಗ್ರ ಕರೆ ಮತ್ತು ನೆಲೆ ನಿಲ್ಲುವ ನಮಾಝ್‌ನ ಪ್ರಭುವೇ! ಮುಹಮ್ಮದ್‌ರಿಗೆ(ಸ) ವಸೀಲ ಮತ್ತು ಮಹಾನತೆಯನ್ನು ದಯಪಾಲಿಸು ಹಾಗೂ ನೀನು ಅವರಿಗೆ ವಾಗ್ದಾನ ಮಾಡಿರುವ ಮಕಾಮು ಮಹ್ಮೂದ್‌ಗೆ ಅವರನ್ನು ಏರಿಸು.

(ವರದಿ: ಹ. ಜಾಬಿರ್(ರ)- ಬುಖಾರಿ)

ವಸೀಲ ಎಂಬುದು ಸ್ವರ್ಗದ ಒಂದು ಅತ್ಯುನ್ನತ ಸ್ಥಾನವಾಗಿದ್ದು ಅದು ಅಲ್ಲಾಹನ ಒಬ್ಬ ದಾಸನಿಗೆ ಮಾತ್ರ ಮೀಸಲಾಗಿದೆ. ಪ್ರವಾದಿವರ್ಯರು(ಸ) "ಆ ದಾಸನು ನಾನೇ ಆಗಿರಬಹುದೆಂಬ ವಿಶ್ವಾಸ ನನಗಿದೆ" ಎಂದು ಹೇಳಿರುವರು. (ಮುಸ್ಲಿಮ್)

**6. ಅದಾನ್ ಮತ್ತು ಇಕಾಮತ್‌ನ ಮಧ್ಯೆ ಪ್ರಾರ್ಥನೆಯ ಮಹತ್ವ**

ಅದಾನ್ ಮತ್ತು ಇಕಾಮತ್‌ನ ಮಧ್ಯಾವಧಿಯಲ್ಲಿ ಪ್ರಾರ್ಥನೆಯು ಬೇಗ ಸ್ವೀಕೃತ ವಾಗುತ್ತದೆ.

ಪ್ರವಾದಿ(ಸ) ಹೇಳಿರುವರು:

"ಅದಾನ್ ಮತ್ತು ಇಕಾಮತ್‌ನ ಮಧ್ಯೆ ಮಾಡುವ ಪ್ರಾರ್ಥನೆಯು ತಿರಸ್ಕೃತ ವಾಗುವುದಿಲ್ಲ." (ವರದಿ: ಹ. ಅನಸ್(ರ)- ಅಬೂ ದಾವೂದ್, ನಸಾಈ, ತಿರ್ಮಿದಿ)

ತಿರ್ಮಿದಿಯ ವರದಿಯಲ್ಲಿ ಈ ಕೆಳಗಿನ ವಿಷಯವೂ ಇದೆ.

"ಹ. ಅನಸ್(ರ) ವಿಚಾರಿಸಿದರು: ಓ ಪ್ರವಾದಿವರ್ಯರೇ! ಹಾಗಾದರೆ ನಾವೇನೆಂದು ಪ್ರಾರ್ಥಿಸಬೇಕು. ಆಗ ಪ್ರವಾದಿ(ಸ) ಹೇಳಿದರು- ಅಲ್ಲಾಹನಲ್ಲಿ ಇಹ-ಪರಗಳಲ್ಲಿ ಕ್ಷಮೆ ಮತ್ತು ಕ್ಷೇಮವನ್ನು ಬೇಡಿರಿ."

ಅರ್ಥಾತ್ ಈ ರೀತಿ ಪ್ರಾರ್ಥಿಸಿರಿ.

اَللّٰهُمَّ اِنِّى اَسْئَلُكَ الْعَفْوَ وَالْعَافِيَةَ فِى الدُّنْيَا وَالْاٰخِرَةِ۔

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಅಫ್‌ವ ವಲ್ ಆಫಿಯತ ಫಿದ್ದುನ್‌ಯಾ ವಲ್ ಆಖಿರಃ"

ಅರ್ಥ: ಓ ಅಲ್ಲಾಹ್! ನಾನು ನಿನ್ನಿಂದ ಇಹ ಮತ್ತು ಪರಲೋಕದಲ್ಲಿ ಕ್ಷಮೆ ಮತ್ತು ಕ್ಷೇಮವನ್ನು ಯಾಚಿಸುತ್ತೇನೆ.

### 7. ಇಕಾಮತ್‌ನ ಉತ್ತರ

ಇಕಾಮತ್ ಕೇಳುವವನು ಅದರ ವಚನಗಳನ್ನು ಪುನರಾವರ್ತಿಸುವುದು ಮುಸ್ತಹಬ್ (ಪುಣ್ಯಕಾರ್ಯ) ಆಗಿದೆ. 'ಹಯ್ಯ ಅಲಸ್ಸಲಾಃ, ಹಯ್ಯ ಅಲಲ್ ಫಲಾಹ್' ಎಂಬುದಕ್ಕೆ ಉತ್ತರವಾಗಿ لَا حَوْلَ وَلَا قُوَّةَ إِلَّا بِاللّٰهِ 'ಲಾ ಹೌಲ ವಲಾ ಕುವ್ವತ ಇಲ್ಲಾ ಬಿಲ್ಲಾಹ್' ಎನ್ನಬೇಕು. 'ಕದ್‌ಕಾಮತಿಸ್ಸಲಾಃ' ಎಂದಾಗ أَقَامَهَا اللّٰهُ وَأَدَامَهَا 'ಅಕಾಮಹಲ್ಲಾಹು ವಅದಾಮಹಾ' (ಅಲ್ಲಾಹನು ಇದನ್ನು ಸ್ಥಾಪಿಸಲಿ ಮತ್ತು ಶಾಶ್ವತಗೊಳಿಸಲಿ) ಎನ್ನಬೇಕು.

"ಹ. ಬಿಲಾಲ್(ರ) ಇಕಾಮತ್ ಹೇಳಲಾರಂಭಿಸಿದರೆ 'ಕದ್‌ಕಾಮತಿಸ್ಸಲಾಃ' ಎಂಬಲ್ಲಿಗೆ ತಲುಪಿದಾಗ ಪ್ರವಾದಿವರ್ಯರು(ಸ) 'ಅಕಾಮಹಲ್ಲಾಹು ವಅದಾಮಹಾ' ಎನ್ನುತ್ತಿದ್ದರು. ಉಳಿದ ಇಕಾಮತ್‌ಗೆ ಉತ್ತರವಾಗಿ ಅದಾನ್‌ನ ಉತ್ತರದ ವಚನಗಳನ್ನೇ ಹೇಳುತ್ತಿದ್ದರು."

(ವರದಿ: ಹ. ಉಮಾಮ(ರ)- ಅಬೂ ದಾವೂದ್)

### 8. ಮುಅದ್ದಿನ್‌ನ ಗುಣಗಳು

ಮುಅದ್ದಿನ್‌ಗೆ ಈ ಕೆಳಗಿನ ಗುಣಗಳು ಮುಸ್ತಹಬ್(ಅಪೇಕ್ಷಣೀಯ) ಆಗಿವೆ.

**i) ಸಂಬಳ ಪಡೆಯದಿರುವುದು:**

ಹ. ಉಸ್ಮಾನ್ ಬಿನ್ ಅಬಿಲ್ ಆಸ್(ರ) ವರದಿ ಮಾಡುತ್ತಾರೆ: "ನಾನು ಪ್ರವಾದಿ ವರ್ಯರಲ್ಲಿ(ಸ) ನನ್ನನ್ನು ನನ್ನ ಗೋತ್ರದ ಇಮಾಮ್ ಆಗಿ ನೇಮಕ ಮಾಡಿರೆಂದು ವಿನಂತಿಸಿದೆ. ಆಗ ಪ್ರವಾದಿ(ಸ) ಹೇಳಿದರು- ನೀವು ಅದರ ಇಮಾಮ್ ಆಗಿ ನೇಮಕಗೊಂಡಿರುವಿರಿ. ನೀವು ಬಲಹೀನರ ಬಗ್ಗೆ ಗಮನವಿಡಿರಿ ಮತ್ತು ಅದಾನ್‌ಗಾಗಿ ಸಂಬಳ ಪಡೆಯದ ವ್ಯಕ್ತಿಯನ್ನು ಮುಅದ್ದಿನ್ ಆಗಿ ನೇಮಿಸಿರಿ." (ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

"ಸಹಾಬಿಗಳು ಮತ್ತು ಹೆಚ್ಚಿನ ವಿದ್ವಾಂಸರು ಅದಾನ್ ಹೇಳುವುದಕ್ಕೆ ಸಂಬಳ ಪಡೆಯುವುದನ್ನು ಇಷ್ಟಪಟ್ಟಿರಲಿಲ್ಲ." (ತಿರ್ಮಿದಿ)

ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಅದಾನ್ ಹೇಳಿದುದಕ್ಕೆ ಸಂಬಳ ಸಿಗಬೇಕೆಂಬ ಶರ್ತ ಒಡ್ಡುವುದು ಹರಾಮ್(ನಿಷಿದ್ಧ) ಆಗಿದೆ.

(ನೈಲುಲ್ ಔತಾರ್- ಭಾಗ - 2, ಪುಟ: 49)

**ii) ವುಝೂ ಮಾಡಿಕೊಂಡಿರುವುದು:**

ಪ್ರವಾದಿ(ಸ) ಹೇಳಿದರು:

"ಅವನ ಸಲಾಮ್‌ಗೆ ಉತ್ತರ ಹೇಳುವುದರಿಂದ ನನ್ನನ್ನು ತಡೆದುದು ಶುದ್ಧವಾಗದೆ ಅಲ್ಲಾಹನ ದಿಕ್ರ್ ಮಾಡುವುದು ನನಗೆ ಇಷ್ಟವಾಗಲಿಲ್ಲ ಎಂಬುದು ಮಾತ್ರ."

(ವರದಿ: ಹ. ಮುಹಾಜಿರ್ ಬಿನ್ ಕನ್‌ಫದ್(ರ)- ಅಬೂ ದಾವೂದ್, ಅಹ್ಮದ್, ನಸಾಈ, ಇಬ್ನು ಮಾಜಃ)

**iii) ಕಿಬ್ಲಾಭಿಮುಖವಾಗಿ ನಿಲ್ಲುವುದು:**

ಅದಾನ್‌ಗಾಗಿ ಕಿಬ್ಲಾಭಿಮುಖವಾಗಿ ನಿಲ್ಲುವುದು ಸುನ್ನತ್ ಆಗಿದೆ ಎಂಬ ವಿಷಯವು ಸರ್ವಸಮ್ಮತವಾಗಿದೆ. ಏಕೆಂದರೆ ಪ್ರವಾದಿವರ್ಯರ(ಸ) ಇಬ್ಬರು ಮುಅದ್ದಿನ್‌ಗಳು ಅದಾನ್ ಹೇಳುವಾಗ ಕಿಬ್ಲಾಭಿಮುಖವಾಗಿಯೇ ನಿಲ್ಲುತ್ತಿದ್ದರು.

**iv) 'ಹಯ್ಯ ಅಲಸ್ಸಲಾಃ' ಮತ್ತು 'ಹಯ್ಯ ಅಲಲ್ ಫಲಾಹ್' ಎಂದು ಹೇಳುವಾಗ ತಲೆ, ಕುತ್ತಿಗೆ ಮತ್ತು ಎದೆಯನ್ನು ಬಲ ಮತ್ತು ಎಡಬದಿಗೆ ತಿರುಗಿಸುವುದು:**

"ಹ. ಬಿಲಾಲ್‌ರವರು(ರ) ಅದಾನ್ ಹೇಳುವಾಗ ನಾನು ಅವರ ಮುಖವನ್ನು ನೋಡುತ್ತಿದ್ದೆ. ಅವರು ಹಯ್ಯ ಅಲಸ್ಸಲಾಃ ಮತ್ತು ಹಯ್ಯ ಅಲಲ್ ಫಲಾಹ್ ಎನ್ನುತ್ತಾ ತಮ್ಮ ಮುಖವನ್ನು ಬಲ ಮತ್ತು ಎಡಭಾಗಕ್ಕೆ ತಿರುಗಿಸಿದರು."

(ವರದಿ: ಹ. ಅಬೂ ಜಹೀಫ್(ರ)- ಅಹ್ಮದ್, ಬುಖಾರಿ, ಮುಸ್ಲಿಮ್)

**v) ಎರಡೂ ಕಿವಿಗಳಲ್ಲಿ ಬೆರಳನ್ನು ಇರಿಸುವುದು:**

ಹ. ಬಿಲಾಲ್(ರ) ಹೀಗೆ ಹೇಳಿರುವರು: "ನಾನು ನನ್ನ ಎರಡೂ ಬೆರಳುಗಳನ್ನು ನನ್ನ ಕಿವಿಗಳಲ್ಲಿ ಇರಿಸಿ ಅದಾನ್ ಹೇಳಿದೆ."

(ಅಬೂ ದಾವೂದ್, ಇಬ್ನು ಹಿಬ್ಬಾನ್)

**vi) ಒಬ್ಬನೇ ಇರುವಾಗಲೂ ಏರಿದ ಧ್ವನಿಯಲ್ಲಿ ಅದಾನ್ ಹೇಳುವುದು:**

"ಹ. ಅಬೂ ಸಈದ್ ಖುದ್ರೀಯವರು(ರ) ಹ. ಅಬೂ ಸಲ್‌ಸಲ್‌ರವರಿಗೆ(ರ) ಹೀಗೆ ಹೇಳಿದರು: ನಿಮಗೆ ಆಡುಗಳು ಮತ್ತು ಅರಣ್ಯವೆಂದರೆ ಬಹಳ ಪ್ರೀತಿ ಎಂದು ನನಗೆ ತಿಳಿದಿದೆ. ನೀವು ನಿಮ್ಮ ಆಡುಗಳೊಂದಿಗೆ ಅರಣ್ಯದಲ್ಲಿರುವಾಗ ಗಟ್ಟಿಯಾಗಿ ಅದಾನ್ ಹೇಳಿರಿ. ಏಕೆಂದರೆ ಎಲ್ಲಿಯ ವರೆಗೆ ಮುಅದ್ದಿನ್‌ನ ಧ್ವನಿ ತಲಪುತ್ತದೋ ಅಲ್ಲಿಯ ವರೆಗಿರುವ ಜಿನ್ ಮತ್ತು ಮನುಷ್ಯರು ಅದನ್ನು ಕೇಳುತ್ತಾರೆ ಮತ್ತು ಅವರು ಪುನರುತ್ಥಾನ ದಿನ ಅವನ ಪರವಾಗಿ ಸಾಕ್ಷಿ ಹೇಳುವರು. ಪ್ರವಾದಿಯವರು(ಸ) ಕೂಡಾ ಹೀಗೆ ಹೇಳಿರುವುದನ್ನು ನಾನು ಕೇಳಿದ್ದೇನೆ."

(ಬುಖಾರಿ, ಅಹ್ಮದ್, ನಸಾಈ, ಇಬ್ನು ಮಾಜಃ)

**vii) ಅದಾನನ್ನು ತಡೆದು ತಡೆದು ಹೇಳುವುದು:**

ಅನೇಕ ಹದೀಸ್‌ಗಳಿಂದ ವ್ಯಕ್ತವಾಗುವಂತೆ ಇದು ಮುಸ್ತಹಬ್ ಆಗಿದೆ.

**viii) ಎತ್ತರದ ಜಾಗದಲ್ಲಿ ಅದಾನ್ ಹೇಳುವುದು:**

ಹ. ಉರ್ವ ಬಿನ್ ಝುಬೈರ್(ರ) ನಜ್ಜಾರ್ ಗೋತ್ರದ ಓರ್ವ ಮಹಿಳೆಯನ್ನುದ್ದೇಶಿಸಿ ಹೀಗೆ ಹೇಳಿರುವರು: "ನನ್ನ ಮನೆ ಮಸೀದಿಯ ಸುತ್ತಮುತ್ತಲಿರುವ ಎಲ್ಲ ಮನೆಗಳಿಗಿಂತಲೂ

ಎತ್ತರದಲ್ಲಿತ್ತು. ಹ. ಬಿಲಾಲ್(ರ) ನಮ್ಮ ಮನೆಯ ಮೇಲೇರಿ ಫಜ್ರ್‌ನ ಅದಾನ್ ಕೊಡುತ್ತಿದ್ದರು." (ಅಬೂ ದಾವೂದ್)

### ix) ಅದಾನ್ ಮತ್ತು ಇಕಾಮತ್‌ಗಳ ಮಧ್ಯಾವಧಿ

ಅದಾನ್ ಮತ್ತು ಇಕಾಮತ್‌ನ ಮಧ್ಯೆ ಎಷ್ಟು ಅವಧಿ ಇರಬೇಕೆಂದು ಹದೀಸ್‌ಗಳಿಂದ ನಿಖರವಾಗಿ ತಿಳಿದು ಬರುವುದಿಲ್ಲ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಪ್ರತಿಯೊಂದು ಅದಾನ್ ಮತ್ತು ಇಕಾಮತ್‌ನ ಮಧ್ಯೆ ನಮಾಝ್ ಇದೆ. ಈ ರೀತಿ ಅವರು ಮೂರು ಸಲ ಹೇಳಿದರು."

(ವರದಿ: ಹ. ಅಬ್ದುಲ್ಲಾ ಬಿನ್ ಮುಗ್‌ಫಲ್ ಮುಝ್ನಿ(ರ)- ಬುಖಾರಿ)

"ಪ್ರವಾದಿವರ್ಯರ(ಸ) ಮುಅದ್ದಿನ್, ಅದಾನ್‌ನ ನಂತರ ಪ್ರವಾದಿಯವರು(ಸ) (ತಮ್ಮ ಮನೆಯಿಂದ) ಹೊರ ಬರುವುದನ್ನು ಕಾಣುವ ತನಕ ಇಕಾಮತ್ ಹೇಳುತ್ತಿರಲಿಲ್ಲ. ಪ್ರವಾದಿ ವರ್ಯರನ್ನು(ಸ) ಕಂಡಕೂಡಲೇ ಅವರು ಇಕಾಮತ್ ಹೇಳುತ್ತಿದ್ದರು."

(ವರದಿ: ಹ. ಜಾಬಿರ್ ಬಿನ್ ಸಮ್ರ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

ಆದರೆ ಈ ಹದೀಸ್‌ಗಳು ಹಾಗೂ ಇನ್ನಿತರ ಕೆಲವು ಹದೀಸ್‌ಗಳಿಂದ ವ್ಯಕ್ತವಾಗುವಂತೆ ಅದಾನ್ ಮತ್ತು ಇಕಾಮತ್‌ನ ಮಧ್ಯೆ ಜನರು ಶೌಚ್ಯ, ವುಝೂ ಇತ್ಯಾದಿಗಳನ್ನು ಮಾಡಿ ಮುಗಿಸುವಷ್ಟು ಸಮಯಾವಕಾಶ ಇರುತ್ತಿತ್ತು.

ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರಗಳ ಪ್ರಕಾರ ಮಗ್ರಿಬ್‌ನ ಅದಾನ್ ಮತ್ತು ಇಕಾಮತ್‌ನ ಮಧ್ಯೆ ಕೇವಲ ಕುರ್‌ಆನಿನ ಮೂರು ಆಯತ್‌ಗಳನ್ನು ಪಠಿಸುವಷ್ಟು ಸಮಯ ವಿರಬೇಕು. ಉಳಿದ ನಮಾಝ್‌ಗಳ ವೇಳೆ ಜನರು ನಮಾಝ್‌ಗಾಗಿ ಬರುವುದನ್ನು ಕಾಯಬೇಕು.

(ಅಲ್ ಫಿಕ್ಹ್ ಅಲಲ್-ಮದಾಹಿಬಿಲ್ ಅರ್‌ಬಅ- ಭಾಗ-1, ಪುಟ:324)

### x) ಇಕಾಮತ್ ಮತ್ತು ನಮಾಝ್‌ನ ಮಧ್ಯಾವಧಿ

ಇಕಾಮತ್ ಮತ್ತು ನಮಾಝ್‌ನ ನಡುವೆ ಮಾತಾಡಬಹುದು. ಮಾತಾಡಿದುದರಿಂದ ಪುನಃ ಇಕಾಮತ್ ಹೇಳಬೇಕಾಗಿಲ್ಲ.

"ಒಂದು ದಿನ ಇಕಾಮತ್ ಆಯಿತು. ಆಗ ಪ್ರವಾದಿ(ಸ) ಮಸೀದಿಯ ಒಂದು ಮೂಲೆಯಲ್ಲಿ ಕುಳಿತು ಒಬ್ಬರೊಂದಿಗೆ ಸಂಭಾಷಣೆ ನಡೆಸುತ್ತಿದ್ದರು. ಇಕಾಮತ್ ಆದ ಬಳಿಕವೂ ಪ್ರವಾದಿವರ್ಯರು(ಸ) ನಮಾಝ್‌ಗಾಗಿ ಏಳಲಿಲ್ಲ. ಜನರಿಗೆ ತೂಕಡಿಕೆ ಆರಂಭವಾಯಿತು."

(ವರದಿ: ಹ. ಅನಸ್(ರ)- ಬುಖಾರಿ)

ಇನ್ನೊಂದು ವರದಿಯ ಪ್ರಕಾರ- "ಒಮ್ಮೆ ಇಕಾಮತ್ ಆದ ಬಳಿಕ ಪ್ರವಾದಿ ವರ್ಯರಿಗೆ(ಸ) ಸ್ನಾನ ಮಾಡಬೇಕೆಂದು ನೆನಪಾಯಿತು. ಅವರು ಮನೆಗೆ ಹೋಗಿ ಸ್ನಾನ ಮಾಡಿ ಬಂದು ಪುನಃ ಇಕಾಮತ್ ಹೇಳದೆಯೇ ನಮಾಝ್ ಮಾಡಿಸಿದರು." (ಬುಖಾರಿ)

ಪ್ರವಾದಿವರ್ಯರ(ಸ) ಮನೆಯು ಮಸೀದಿಗೆ ತಾಗಿಯೇ ಇತ್ತು ಎಂಬುದು ಇಲ್ಲಿ ಸ್ಮರಣೀಯ.

### xi) ಅದಾನ್ ಆದ ಬಳಿಕ ಮಸೀದಿಯಿಂದ ಹೊರಹೋಗುವುದು

ಅದಾನ್ ಆದ ಬಳಿಕ ಸೂಕ್ತ ಕಾರಣವಿಲ್ಲದೆ ಅಥವಾ ಮರಳಿ ಬರುವ ಇರಾದೆ ಇಲ್ಲದೆ ಮಸೀದಿಯಿಂದ ಹೊರಗೆ ಹೋಗುವುದು ನಿಷಿದ್ಧವಾಗಿದೆ.

ಪ್ರವಾದಿವರ್ಯರು(ಸ) ಈ ರೀತಿ ಆಜ್ಞಾಪಿಸಿರುವರು- "ನೀವು ಅದಾನ್ ಆಗುವಾಗ ಮಸೀದಿಯಲ್ಲಿದ್ದರೆ ನಿಮ್ಮ ಪೈಕಿ ಯಾರೂ ನಮಾಝ್ ಮಾಡದೆ ಮಸೀದಿಯಿಂದ ಹೊರ ಹೋಗಬಾರದು." (ವರದಿ: ಹ. ಅಬೂ ಹುರೈರಾ(ರ)- ಅಹ್ಮದ್)

### xii) ಅದಾನ್ ಮತ್ತು ಇಕಾಮತ್ ಒಬ್ಬನೇ ಹೇಳುವುದು

"ಹ. ಝಿಯಾದ್ ಬಿನ್ ಹಾರಿಸ್ ಸದಾಈ(ರ) ವರದಿ ಮಾಡುತ್ತಾರೆ: ಪ್ರವಾದಿ ವರ್ಯರು(ಸ) ನನಗೆ ಅದಾನ್ ಹೇಳಲು ಆದೇಶಿಸಿದರು. ಫಜ್ರ್‌ನ ಬೆಳಕು ಹರಿದಾಗ ನಾನು ಅದಾನ್ ಹೇಳಿದೆ. ಪ್ರವಾದಿವರ್ಯರು ವುಝೂ ಮಾಡಿ ಮುಗಿಸಿದ ನಂತರ ನಮಾಝ್‌ಗೆ ನಿಂತರು. ಹ. ಬಿಲಾಲ್(ರ) ಇಕಾಮತ್ ಹೇಳಬಯಸಿದಾಗ ಪ್ರವಾದಿ(ಸ) ಹೇಳಿದರು- ಝಿಯಾದ್(ರ) ಅವರೇ ಇಕಾಮತ್ ಹೇಳಲಿ. ಏಕೆಂದರೆ ಅದಾನ್ ಹೇಳಿದ ವ್ಯಕ್ತಿಯೇ ಇಕಾಮತ್ ಕೂಡಾ ಹೇಳಬೇಕು."

(ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಈ ಹದೀಸ್ ದುರ್ಬಲವಾದರೂ ಹೆಚ್ಚಿನ ವಿದ್ವಾಂಸರು ಹೀಗೆಯೇ ಮಾಡುತ್ತಿದ್ದರೆಂದು ಇಮಾಮ್ ತಿರ್ಮಿದಿಯವರು ಹೇಳಿರುತ್ತಾರೆ. ಆದರೆ ಈ ರೀತಿ ಮಾಡಲೇಬೇಕೆಂದಿಲ್ಲ. ಅದು ಉತ್ತಮವೆಂದು ಮಾತ್ರ. ಮುಅದ್ದಿನ್‌ನ ಹೊರತು ಇತರರು ಇಕಾಮತ್ ಹೇಳಿದರೆ ತಪ್ಪಿಲ್ಲ. ಎಲ್ಲ ಇಮಾಮರೂ ಅದನ್ನು ಜಾಯಿಝ್(ಧರ್ಮಸಮ್ಮತ) ಎಂದಿರುವರು.

(ಹಿದಾಯತುಲ್ ಮುಜ್ತಹಿದ್- ಭಾಗ-1, ಪುಟ: 84)

◊

# ನಮಾಝ್‌ನ ನಿಬಂಧನೆಗಳು

ನಮಾಝ್‌ನ ನಿಬಂಧನೆಗಳು ಎಂದರೆ ನಮಾಝ್‌ಗೆ ಅನಿವಾರ್ಯವಾದ ವಿಷಯ ಗಳಾಗಿವೆ. ಅವುಗಳ ಹೊರತು ನಮಾಝ್ ಸಿಂಧುವಾಗದು. ಅವು ಈ ಕೆಳಗಿನಂತಿವೆ-

**1. ಸಮಯ:** ಯಾವುದೇ ನಮಾಝನ್ನು ಅದರ ಸಮಯ ಆಗುವುದಕ್ಕಿಂತ ಮುಂಚೆ ನಿರ್ವಹಿಸಲು ಸಾಧ್ಯವಿಲ್ಲ. ಆದ್ದರಿಂದ ನಮಾಝ್‌ನ ಸಮಯ ಆಗಿದೆಯೋ ಎಂಬುದನ್ನು ಖಾತ್ರಿ ಪಡಿಸಿಕೊಳ್ಳುವುದು ಅಗತ್ಯ. ಅಲ್ಲಾಹನು ಹೀಗೆ ಆದೇಶಿಸಿರುವನು-

"ಖಂಡಿತವಾಗಿಯೂ ನಮಾಝ್ ಸತ್ಯವಿಶ್ವಾಸಿಗಳ ಮೇಲೆ ಸಮಯ ಪಾಲನೆಯ ಸಹಿತ ಕಡ್ಡಾಯಗೊಳಿಸಲಾಗಿದೆ."

**2. ವುಝೂ:** ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಈ ರೀತಿ ಹೇಳಿರುವನು:

"ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್‌ಗಾಗಿ ಏಳುವಾಗ ನಿಮ್ಮ ಮುಖ ಮತ್ತು ಕೈಗಳನ್ನು ಮೊಣಕೈಗಳ ತನಕ ತೊಳೆದುಕೊಳ್ಳಿರಿ(ಅರ್ಥಾತ್ ವುಝೂ ಮಾಡಿರಿ)."

ಪ್ರವಾದಿವರ್ಯರು(ಸ) ಈ ರೀತಿ ಹೇಳಿರುತ್ತಾರೆ:

"ಅಲ್ಲಾಹನು ಶುದ್ಧಿ(ವುಝೂ) ಇಲ್ಲದ ಯಾವುದೇ ನಮಾಝನ್ನು ಮತ್ತು ಸಮರಾರ್ಜಿತ ಸೊತ್ತಿನಿಂದ ಕದ್ದ ವಸ್ತುವಿನಿಂದ ಮಾಡಿದ ದಾನವನ್ನು ಸ್ವೀಕರಿಸುವುದಿಲ್ಲ."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

**3. ಶರೀರ, ವಸ್ತ್ರ ಮತ್ತು ಸ್ಥಳ ಶುದ್ಧವಾಗಿರುವುದು:** ಮನುಷ್ಯನು ನಮಾಝ್ ಮಾಡುವ ನೆಲವು ಅಶುದ್ಧವಾಗಿದ್ದರೆ ಮತ್ತು ಅವನ ಶರೀರ ಅಥವಾ ವಸ್ತ್ರ ಅಶುದ್ಧವಾಗಿದ್ದರೆ ನಮಾಝ್ ಸಿಂಧುವಾಗುವುದಿಲ್ಲ.

ಒಬ್ಬನು ಮಸೀದಿಯಲ್ಲಿ ಮೂತ್ರ ವಿಸರ್ಜನೆ ಮಾಡಿದಾಗ ಪ್ರವಾದಿವರ್ಯರು(ಸ) ನೀರು ಹಾಯಿಸಿ ಅದನ್ನು ಶುದ್ಧಗೊಳಿಸಲು ಆದೇಶಿಸಿದ್ದರೆಂಬುದನ್ನು ಈ ಹಿಂದೆ ವಿವರಿಸಲಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮೂತ್ರದಿಂದ (ಅರ್ಥಾತ್ ಅದರ ಹನಿಗಳು ದೇಹ ಅಥವಾ ಬಟ್ಟೆಗೆ ತಾಗುವುದ ರಿಂದ) ಶುದ್ಧವಾಗಿರಿ. ಏಕೆಂದರೆ ಗೋರಿಯ ಶಿಕ್ಷೆಯು ಸಾಮಾನ್ಯವಾಗಿ ಇದರ ಕಾರಣದಿಂದಾಗಿ ಆಗುತ್ತದೆ." [ವರದಿ: ಹ. ಅನಸ್(ರ)]

ಅಲ್ಲಾಹನು ಈ ರೀತಿ ಆದೇಶಿಸಿರುವನು:

"ಮತ್ತು ನಿಮ್ಮ ಉಡುಪನ್ನು ಶುದ್ಧವಾಗಿರಿಸಿರಿ."

"ಒಮ್ಮೆ ಒಬ್ಬರು ಪ್ರವಾದಿವರ್ಯರಲ್ಲಿ(ಸ) ಈ ರೀತಿ ವಿಚಾರಿಸಿದರು- ನಾನು ನನ್ನ ಪತ್ನಿಯ ಜೊತೆ ಸಹಶಯನದ ವೇಳೆ ಉಟ್ಟ ಬಟ್ಟೆಗಳಲ್ಲೇ ನಮಾಝ್ ಮಾಡಬಹುದೇ? ಆಗ ಪ್ರವಾದಿವರ್ಯರು(ಸ)- ಮಾಡಬಹುದು. ಒಂದು ವೇಳೆ ಅದರಲ್ಲೇನಾದರೂ ಮಾಲಿನ್ಯ ಕಂಡರೆ ಅದನ್ನು ತೊಳೆದುಕೊಳ್ಳಿರಿ ಎಂದು ಹೇಳಿದರು."

(ವರದಿ: ಹ. ಜಾಬಿರ್ ಬಿನ್ ಅಮ್ರ್(ರ)- ಅಹ್ಮದ್, ಇಬ್ನು ಮಾಜಃ)

**4. ಗುಪ್ತಾಂಗಗಳನ್ನು ಮರೆಸುವುದು:** ನಮಾಝ್‌ನಲ್ಲಿ ಸ್ತ್ರೀ ಪುರುಷರಿಬ್ಬರೂ ತಮ್ಮ ಗುಪ್ತಾಂಗಗಳನ್ನು ಮುಚ್ಚಿರಬೇಕೆಂಬ ಬಗ್ಗೆ ಎಲ್ಲಾ ಕರ್ಮಶಾಸ್ತ್ರ ಪಂಡಿತರಲ್ಲಿ ಏಕಾಭಿಪ್ರಾಯವಿದೆ. (ಹಿದಾಯತುಲ್ ಮುಜ್ತಹಿದ್- ಭಾಗ-1, ಪುಟ:89)

"ನಾನು ಪ್ರವಾದಿವರ್ಯರಲ್ಲಿ(ಸ) ಈ ರೀತಿ ವಿಚಾರಿಸಿದೆ- ನಾನು ಕೇವಲ ನನ್ನ ನಿಲುವಂಗಿಯಲ್ಲಿ ನಮಾಝ್ ಮಾಡಬಹುದೆ? ಆಗ ಪ್ರವಾದಿ(ಸ)- ಅದಕ್ಕೆ ಬಟನ್ ಹಚ್ಚಿರಿ ಒಂದು ಮುಳ್ಳಿನಿಂದಾದರೂ ಸರಿಯೆ(ಅರ್ಥಾತ್ ಗುಪ್ತಾಂಗಗಳನ್ನು ಹೇಗಾದರೂ ಮರೆಸಬೇಕು) ಎಂದು ಹೇಳಿದರು." (ವರದಿ: ಹ. ಸಲಮ ಬಿನ್ ಅಕ್‌ವಲ್(ರ)- ಬುಖಾರಿ)

ಪುರುಷನ ನಾಭಿಯಿಂದ ಮೊಣಕಾಲಿನ ವರೆಗಿನ ಭಾಗವು ಗುಪ್ತಾಂಗವಾಗಿದ್ದು ನಮಾಝ್‌ನಲ್ಲಿ ಅಷ್ಟನ್ನು ಕಡ್ಡಾಯವಾಗಿ ಮರೆಸಬೇಕು.

"ನಾನು ಒಂದು ಚದ್ದರವನ್ನು ಹೊದ್ದು ಕುಳಿತಿದ್ದೆ. ನನ್ನ ತೊಡೆಗಳು ತೆರೆದಿದ್ದುವು. ಆಗ ಪ್ರವಾದಿಯವರು(ಸ) ನನ್ನ ಬಳಿಯಿಂದ ಹಾದು ಹೋಗುತ್ತಾ ನನ್ನನ್ನುದ್ದೇಶಿಸಿ ಹೀಗೆ ಹೇಳಿದರು- ನಿಮ್ಮ ತೊಡೆಗಳನ್ನು ಮುಚ್ಚಿರಿ. ಏಕೆಂದರೆ ತೊಡೆಗಳು ಗುಪ್ತಾಂಗದ ಭಾಗವಾಗಿದೆ."

(ವರದಿ: ಹ. ಜರ್ಹದ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಮಾಲಿಕ್)

ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಪುರುಷರ ತೊಡೆ, ಮೊಣಕಾಲು ಮತ್ತು ಹೊಕ್ಕುಳು ಗುಪ್ತಾಂಗಗಳಲ್ಲಿ ಸೇರಿಲ್ಲ. ಅವರಿಗೆ ಈ ಕೆಳಗಿನ ವರದಿಯು ಆಧಾರವಾಗಿದೆ-

"ಖೈಬರ್‌ನ ದಿನ ಪ್ರವಾದಿವರ್ಯರು(ಸ) ತಮ್ಮ ತೊಡೆಗಳನ್ನು ತೆರೆದಿದ್ದರು. ಎಲ್ಲಿಯ ವರೆಗೆಂದರೆ ಈಗಲೂ ಅವರ ತೊಡೆಯ ಬಿಳಿ ಬಣ್ಣ ನಮ್ಮ ಕಣ್ಣಿಗೆ ಕಂಡಂತಾಗುತ್ತದೆ."

(ವರದಿ: ಹ. ಅನಸ್(ರ)- ಬುಖಾರಿ, ಅಹ್ಮದ್)

ಇತರ ಕರ್ಮಶಾಸ್ತ್ರ ಇಮಾಮರ ಪ್ರಕಾರ ಆ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಯಾವುದೋ ಕಾರಣದಿಂದ ಅಥವಾ ಅಗತ್ಯಕ್ಕಾಗಿ ತೊಡೆಗಳನ್ನು ತೆರೆದಿದ್ದರು. ಅಗತ್ಯ ಬಿದ್ದಾಗ ತೊಡೆ, ಹೊಕ್ಕುಳು ಮತ್ತು ಮೊಣಕಾಲುಗಳನ್ನು ತೆರೆಯುವುದು ಧರ್ಮಸಮ್ಮತವಾಗಿದೆ. ಇಮಾಮ್ ಬುಖಾರಿಯವರ ಪ್ರಕಾರ ವರದಿಯ ಪರಂಪರೆಯ ಆಧಾರದಲ್ಲಿ ಹ. ಅನಸ್(ರ) ಅವರ ಉಲ್ಲೇಖವು ಪ್ರಬಲವಾಗಿದ್ದರೂ ಹ. ಜರ್ಹದ್(ರ) ಅವರ ವರದಿಯು ಹೆಚ್ಚು

ಜಾಗರೂಕತೆಯು ಕ್ರಮವಾಗಿದೆ.

ಹಸ್ತಗಳು ಮತ್ತು ಮುಖದ ಹೊರತು ಮಹಿಳೆಯ ದೇಹದ ಎಲ್ಲ ಭಾಗಗಳನ್ನೂ ನಮಾಝ್‌ನ ವೇಳೆ ಮರೆಸುವುದು ಕಡ್ಡಾಯವಾಗಿದೆ. ಅಲ್ಲಾಹನು ಈ ರೀತಿ ಆದೇಶಿರುವನು:

"ತನ್ನಿಂತಾನೆ ಪ್ರಕಟವಾಗುವವುಗಳನ್ನು ಹೊರತುಪಡಿಸಿ ಮಹಿಳೆಯರು ತಮ್ಮ ಅಲಂಕಾರವನ್ನು ಪ್ರದರ್ಶಿಸಬಾರದು."

ಇದು ಇಮಾಮ್ ಶಾಫಿಈಯವರ(ರ) ಸಹಿತ ಹೆಚ್ಚಿನ ಪೂರ್ವ ಕಾಲ ವಿದ್ವಾಂಸರ ಅಭಿಮತವಾಗಿದೆ. ಹ. ಇಬ್ನು ಅಬ್ಬಾಸ್, ಇಬ್ನು ಉಮರ್ ಮತ್ತು ಆಯಿಶಾ(ರ) ಅವರಿಂದಲೂ ಇದೇ ರೀತಿಯ ಅಭಿಪ್ರಾಯ ವರದಿಯಾಗಿದೆ. ಅವರ ಪ್ರಕಾರ ತನ್ನಿಂತಾನೆ ಪ್ರಕಟವಾಗುವವು ಗಳೆಂದರೆ ಮುಖ ಮತ್ತು ಎರಡೂ ಹಸ್ತಗಳಾಗಿವೆ.

ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಮಹಿಳೆಯರಿಗೆ ಮುಖ ಮತ್ತು ಹಸ್ತಗಳಲ್ಲದೆ ಪಾದದ ಮೇಲ್ಭಾಗವನ್ನೂ ತೆರೆಯುವ ಅನುಮತಿಯಿದೆ. ಏಕೆಂದರೆ ಅದು ಸಾಮಾನ್ಯವಾಗಿ ಪ್ರಕಟವಾಗುತ್ತದೆ.

(ಅಲ್ ಮುಗ್ನೀ- ಭಾಗ-1, ಪುಟ:637; ಹಿದಾಯತುಲ್ ಮುಜ್ತಹಿದ್- ಭಾಗ-1, ಪುಟ:87)

ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಹಸ್ತದ ಒಳಭಾಗ ಮತ್ತು ಕಾಲುಗಳ ಅಡಿಭಾಗವು ಗುಪ್ತಾಂಗದಲ್ಲಿ ಸೇರಿದೆ.

(ಅಲ್ ಫಿಕ್ಹ್ ಅಲಲ್ ಮದಾಹಿಬಲ್ ಅರ್‌ಬಅ- ಭಾಗ-1 ಪುಟ:189)

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅಲ್ಲಾಹನು ಯಾವುದೇ ಪ್ರೌಢ ಮಹಿಳೆಯ ನಮಾಝನ್ನು ಅವಕುಂಟನದ ಹೊರತು (ಅರ್ಥಾತ್ ತಲೆ ತೆರೆದಿಟ್ಟು) ಸ್ವೀಕರಿಸುವುದಿಲ್ಲ."

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

ಸಲಮ ಬಿನ್ ಅಕ್ವಅ್‌ರವರ(ರ) ವರದಿಯಿಂದ ತಿಳಿದು ಬರುವಂತೆ ಪುರುಷನು ಕೇವಲ ಒಂದು ಬಟ್ಟೆಯಲ್ಲಿ ನಮಾಝ್ ಮಾಡಬಹುದು. ಆದರೆ ಎರಡು ಅಥವಾ ಅದಕ್ಕಿಂತ ಹೆಚ್ಚು ಬಟ್ಟೆಗಳನ್ನು ತೊಟ್ಟು ನಮಾಝ್ ಮಾಡುವುದು ಉತ್ತಮವಾಗಿದೆ. ನಮಾಝ್‌ಗಾಗಿ ಆದಷ್ಟು ಅಲಂಕಾರವನ್ನು ಹೊಂದುವುದೊಳ್ಳೆಯದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ನಮಾಝ್ ಮಾಡುವಾಗ ಎರಡು ಬಟ್ಟೆಗಳನ್ನು ಉಟ್ಟು ನಮಾಝ್ ಮಾಡಲಿ. ಆತನ ಬಳಿ ಒಂದೇ ಬಟ್ಟೆ ಇದ್ದರೆ ಅದನ್ನು ಲುಂಗಿಯಂತೆ ಉಡಲಿ. ಆತನು ಯಹೂದಿಗಳಂತೆ ದೇಹಕ್ಕೆ ಬಟ್ಟೆಯನ್ನು ಸುತ್ತಿಕೊಳ್ಳಬಾರದು."

(ವರದಿ: ಹ. ಇಬ್ನು ಉಮರ್(ರ)- ತಬ್ರಾನಿ, ಬೈಹಕಿ)

ನಾಲ್ಕೂ ಕರ್ಮಶಾಸ್ತ್ರ ಪದ್ಧತಿಗಳ ಪ್ರಕಾರ ಗುಪ್ತಾಂಗವನ್ನು ಮರೆಸುವ ಬಟ್ಟೆಯು ದಪ್ಪವಿರಬೇಕು. ಚರ್ಮದ ಬಣ್ಣ ಗೋಚರಿಸುವಷ್ಟು ತೆಳುವಾದ ಬಟ್ಟೆ ಧರಿಸಿದರೆ ಗುಪ್ತಾಂಗ ಮರೆಸಿದಂತಾಗುವುದಿಲ್ಲ. (ಅಲ್ ಫಿಕ್ಹು ಅಲಲ್ ಮದಾಹಿಬಲ್ ಅರ್‌ಬಅ- ಭಾಗ-1, ಪುಟ:165)

**5. ಕಿಬ್ಲಾಕ್ಕೆ ಮುಖ ಮಾಡುವುದು:** ನಮಾಝ್‌ನ ವೇಳೆ ಕಿಬ್ಲಾದ ಕಡೆಗೆ ಮುಖ ಮಾಡುವುದು ಅಗತ್ಯ. ಅಲ್ಲಾಹನು ಹೀಗೆ ಆದೇಶಿಸಿರುವನು:

**''ಮಸ್ಜಿದುಲ್ ಹರಾಮ್‌ನ ದಿಕ್ಕಿಗೆ ಮುಖ ಮಾಡಿರಿ. ನೀವೆಲ್ಲಿದ್ದರೂ ಅದರ ಕಡೆಗೇ ಮುಖ ಮಾಡಿ ನಮಾಝ್ ಮಾಡುತ್ತಲಿರಿ.''** **(ಪವಿತ್ರ ಕುರ್‌ಆನ್, 2:144)**

ಕಅಬಾದ ಬಳಿಯಲ್ಲಿ ಇರುವವನು ಮತ್ತು ಅದನ್ನು ನೋಡುತ್ತಿರುವವನು ಅದಕ್ಕೆ ಮುಖಮಾಡಿ ನಮಾಝ್ ಮಾಡಬೇಕು. ಆದರೆ ಕಅಬಾದ ಹತ್ತಿರ ಇಲ್ಲದವನು ಹಾಗೂ ಅದನ್ನು ನೋಡಲಾರದಷ್ಟು ದೂರವಿರುವವನು ಕಅಬಾದ ದಿಕ್ಕಿಗೆ ಮುಖಮಾಡಿದರೆ ಸಾಕು. ಕಅಬಾದ ಕಡೆಗೇ ನೇರವಾಗಿ ಮುಖಮಾಡಬೇಕೆಂದಿಲ್ಲ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಪೂರ್ವ ಮತ್ತು ಪಶ್ಚಿಮದ ಮಧ್ಯೆ ಕಿಬ್ಲಾ ಇದೆ."

**(ವರದಿ: ಹ. ಅಬೂ ಹುರೈರಾ(ರ)- ತಿರ್ಮಿದಿ, ಇಬ್ನು ಮಾಜ)**

ಇದು ಪ್ರವಾದಿವರ್ಯರು(ಸ) ಮದೀನಾ ನಗರದಲ್ಲಿದ್ದಾಗ ಹೇಳಿದ ಮಾತು.

ಒಬ್ಬನು ಮೋಡ ಕವಿದ ಅಥವಾ ಕತ್ತಲೆಯಿರುವ ಪ್ರದೇಶದಲ್ಲಿದ್ದು ಅವನಿಗೆ ಕಿಬ್ಲಾದ ದಿಕ್ಕು ತಿಳಿಯದೇ ಹೋದರೆ ಹಾಗೂ ಅದನ್ನು ತಿಳಿಸುವವರೂ ಯಾರೂ ಇಲ್ಲದೇ ಹೋದರೆ ಅವನು ತನ್ನ ಪ್ರಬಲ ಗುಮಾನಿಯ ಮೇರೆಗೆ ನಮಾಝ್ ಮಾಡಬಹುದು. ಅನಂತರ ಅವನಿಗೆ ತಾನು ನಮಾಝ್ ಮಾಡಿದ್ದ ದಿಕ್ಕು ಸರಿಯಾಗಿರಲಿಲ್ಲವೆಂದು ತಿಳಿದುಬಂದರೂ ಅವನು ನಮಾಝ್ ಪುನರಾವರ್ತಿಸಬೇಕಾಗಿಲ್ಲ.

"ಒಂದು ದಿನ ನಾವು ಯಾತ್ರೆಯ ವೇಳೆ ಮೋಡವಿದ್ದಾಗ ಕಿಬ್ಲಾ ಅಲ್ಲದ ಕಡೆಗೆ ಮುಖ ಮಾಡಿ ನಮಾಝ್ ಮಾಡಿದೆವು. ನಮಾಝ್ ಮುಗಿದ ಬಳಿಕ ಬಿಸಿಲು ಹರಡಿದಾಗ ನಾವು ಕಿಬ್ಲಾ ಅಲ್ಲದ ಕಡೆಗೆ ಮುಖಮಾಡಿ ನಮಾಝ್ ಮಾಡಿದೆವು ಎಂದು ಪ್ರವಾದಿವರ್ಯರಲ್ಲಿ(ಸ) ನಿವೇದಿಸಿಕೊಂಡೆವು. ಆಗ ಅವರು 'ನಿಮ್ಮ ನಮಾಝ್ ಅದರ ವಾಸ್ತವಿಕತೆಯೊಂದಿಗೆ ಅಲ್ಲಾಹನ ಬಳಿ ಎತ್ತಲ್ಪಟ್ಟಿದೆ' ಎಂದರು." **(ವರದಿ: ಹ. ಮುಆದ್ ಬಿನ್ ಜಬಲ್(ರ)- ತಬ್ರಾನಿ)**

ಇಮಾಮ್ ಅಬೂ ಹನೀಫಾರ(ರ) ಅಭಿಪ್ರಾಯ ಇದುವೇ ಆಗಿದೆ. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಈ ಹದೀಸ್ ಪ್ರಮಾಣ ಯೋಗ್ಯವಲ್ಲ. ಆದ್ದರಿಂದ ಯಾರಾದರೂ ಪ್ರಮಾದವಶಾತ್ ಕಿಬ್ಲಾ ಅಲ್ಲದ ಕಡೆಗೆ ತಿರುಗಿ ನಮಾಝ್ ಮಾಡಿದ್ದರೆ ಅದು ಗೊತ್ತಾದ ಬಳಿಕ ಅವನು ತನ್ನ ನಮಾಝನ್ನು ಪುನರಾವರ್ತಿಸಬೇಕು. ಏಕೆಂದರೆ ಕಿಬ್ಲಾಕ್ಕೆ ಮುಖ ಮಾಡಿ ನಮಾಝ್ ಮಾಡಬೇಕಾದುದು ಕಡ್ಡಾಯ. **(ತುಹ್ಫತುಲ್ ಅಹ್‌ವದೀ- ಭಾಗ-1, ಪುಟ:280)**

ಒಂದು ವೇಳೆ ನಮಾಝ್ ಮಾಡುತ್ತಿರುವಾಗಲೇ ಕಿಬ್ಲಾದ ಸರಿಯಾದ ದಿಕ್ಕು ತಿಳಿದುಬಂದರೆ ಆ ಸ್ಥಿತಿಯಲ್ಲೇ ಕಿಬ್ಲಾದ ಕಡೆಗೆ ತಿರುಗಿಕೊಳ್ಳಬೇಕು.

"ಜನರು ಕುಬಾದಲ್ಲಿ ಫಜ್ರ್ ನಮಾಝ್ ಮಾಡುತ್ತಿದ್ದರು. ಆಗ ಒಬ್ಬ ವ್ಯಕ್ತಿ ಬಂದು ಪ್ರವಾದಿವರ್ಯರ(ಸ) ಮೇಲೆ ಕುರ್‌ಆನ್ ಅವತೀರ್ಣಗೊಂಡಿದೆ ಮತ್ತು ಅವರಿಗೆ ಕಅಬಾದ

ಕಡೆಗೆ ಮುಖ ಮಾಡುವ ಆದೇಶ ನೀಡಲಾಗಿದೆ ಎಂಬ ಸುದ್ದಿ ತಿಳಿಸಿದನು. ಆಗಲೇ ಎಲ್ಲರೂ ಕಅಬಾದ ಕಡೆಗೆ ಮುಖ ತಿರುಗಿಸಿಕೊಂಡರು. ಆಗ ಅವರು ಸಿರಿಯಾದ ಕಡೆಗೆ ಮುಖ ಮಾಡಿ ನಮಾಝ್ ಮಾಡುತ್ತಿದ್ದರು." (ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಮುಸ್ಲಿಮ್)

ಎರಡು ಸ್ಥಿತಿಗಳಲ್ಲಿ ಕಿಬ್ಲಾದ ಕಡೆಗೆ ಮುಖ ಮಾಡುವ ಆಜ್ಞೆ ವಜಾಗೊಳ್ಳುತ್ತದೆ.

1) ಪ್ರಯಾಣದ ವೇಳೆ ಕುದುರೆ, ಒಂಟೆ ಇತ್ಯಾದಿಗಳಲ್ಲಿ ಸವಾರರಾಗಿ ಸಂಚರಿಸುತ್ತಾ ಫರ್ಝ್(ಕಡ್ಡಾಯ) ಅಲ್ಲದ ನಮಾಝ್ ಮಾಡುತ್ತಿರುವಾಗ.

"ಪ್ರವಾದಿವರ್ಯರ(ಸ) ವಾಹನವು ಯಾವ ದಿಕ್ಕಿಗೆ ಹೋಗುತ್ತಿತ್ತೋ ಅವರು ಅದೇ ದಿಕ್ಕಿಗೆ ಮುಖಮಾಡಿ ನಮಾಝ್ ಮಾಡುತ್ತಿದ್ದರು." (ಮುಸ್ಲಿಮ್)

"ಪ್ರವಾದಿ(ಸ) ತಮ್ಮ ತಲೆಯಿಂದ ಸನ್ನೆ ಮಾಡುತ್ತಿದ್ದರು. ಆದರೆ ಅವರು ಫರ್ಝ್ ನಮಾಝ್‌ನಲ್ಲಿ ಹೀಗೆ ಮಾಡುತ್ತಿರಲಿಲ್ಲ." (ವರದಿ: ಹ. ಆಮಿರ್ ಬಿನ್ ರಬೀಅ(ರ)- ಬುಖಾರಿ)

ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ತಕ್ಬೀರತುಲ್ ಊಲಾದ ವೇಳೆ ಕಿಬ್ಲಾದ ಕಡೆಗೆ ಮುಖ ಮಾಡುವುದು ಅಗತ್ಯ.

ಕಡ್ಡಾಯ ನಮಾಝುನ್ನು ಸೂಕ್ತ ಕಾರಣವಿಲ್ಲದೆ ಕುದುರೆ, ಒಂಟೆ ಇತ್ಯಾದಿಗಳಲ್ಲಿ ಸವಾರಿಯ ವೇಳೆ ನಿರ್ವಹಿಸಬಾರದು. ಅಂತೆಯೇ ಕಿಬ್ಲಾ ಅಲ್ಲದ ಬೇರೆಡೆಗೆ ತಿರುಗಿ ಫರ್ಝ್ ನಮಾಝ್ ನಿರ್ವಹಿಸಬಾರದು. ಈ ಬಗ್ಗೆ ಕರ್ಮಶಾಸ್ತ್ರ ಪಂಡಿತರಲ್ಲಿ ಏಕಾಭಿಪ್ರಾಯವಿದೆ.

2) ಭಯ ಮತ್ತು ಅನಿವಾರ್ಯತೆಯ ಸಂದರ್ಭದಲ್ಲಿ ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಾನು ನಿಮಗೆ ಯಾವುದಾದರೂ ಆಜ್ಞೆ ನೀಡಿದರೆ ನಿಮ್ಮ ಶಕ್ತಿಗೆ ಅನುಸಾರವಾಗಿ ಅದನ್ನು ಮಾಡಿರಿ. ಅಲ್ಲಾಹನು ಹೀಗೆ ಹೇಳಿರುವನು- ನೀವು ಭಯಗ್ರಸ್ತರಾಗಿದ್ದರೆ ಅಥವಾ ಸವಾರಿಯ ಮೇಲಿದ್ದರೆ ನಿಮಗೆ ಸಾಧ್ಯವಾಗುವಂತೆ ನಮಾಝ್ ಮಾಡಿರಿ. ಹ. ಇಬ್ನು ಉಮರ್‌ರವರು(ರ) ಈ ಸೂಕ್ತವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ: ನೀವು ಕಿಬ್ಲಾದ ಕಡೆ ಮುಖ ಮಾಡಿದರೂ ಮಾಡದಿದ್ದರೂ." (ಬುಖಾರಿ)

## ನಮಾಝ್ ಮಾಡುವುದು ಹೇಗೆ?

1) ಒಬ್ಬ ವ್ಯಕ್ತಿ ಮಸೀದಿಗೆ ಪ್ರವೇಶಿಸಿ ನಮಾಝ್ ಮಾಡಿದನು. ತರುವಾಯ ಆತ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾಗಿ ಸಲಾಮ್ ಹೇಳಿದನು. ಪ್ರವಾದಿ(ಸ) ಅವನ ಸಲಾಮ್‌ಗೆ ಉತ್ತರ ಹೇಳಿದ ಬಳಿಕ ಹೀಗೆ ಹೇಳಿದರು: 'ಮರಳಿ ಹೋಗಿ ನಮಾಝ್ ಮಾಡಿರಿ. ಏಕೆಂದರೆ ನೀವು ನಮಾಝ್ ಮಾಡಿಲ್ಲ.' ಆ ವ್ಯಕ್ತಿ ಮರಳಿ ಹೋಗಿ ನಮಾಝ್ ಮಾಡಿ ಮತ್ತೆ ಬಂದನು. ಪ್ರವಾದಿವರ್ಯರು(ಸ) ಆತನಿಗೆ ಪುನಃ ನಮಾಝ್ ಮಾಡಲು ಆಜ್ಞಾಪಿಸಿದರು. ಕೊನೆಗೆ ಆ ವ್ಯಕ್ತಿ ಹೇಳಿದ- 'ತಮ್ಮನ್ನು ಸತ್ಯದೊಂದಿಗೆ ರವಾನಿಸಿರುವವನ

ಆಣೆ! ನನಗೆ ಇದಕ್ಕಿಂತ ಉತ್ತಮ ನಮಾಝ್ ಮಾಡಲು ತಿಳಿದಿಲ್ಲ. ತಾವು ನನಗೆ ಕಲಿಸಿ ಕೊಡಿ.' ಆಗ ಪ್ರವಾದಿ(ಸ) ಹೇಳಿದರು: ನೀವು ನಮಾಝ್‌ಗಾಗಿ ನಿಂತಾಗ 'ಅಲ್ಲಾಹು ಅಕ್ಬರ್' ಎನ್ನಿರಿ. ಅನಂತರ ಪವಿತ್ರ ಕುರ್‌ಆನ್‌ನಿಂದ ನಿಮಗೆ ಸುಲಭವಾಗಿ ಓದಲಾಗುವ ಭಾಗವನ್ನು ಓದಿರಿ. ಇನ್ನೊಂದು ವರದಿಯಲ್ಲಿ 'ಅನಂತರ ಸೂರಃ ಫಾತಿಹಾ ಓದಿರಿ' ಎಂದಿದೆ. ಅನಂತರ ರುಕೂಅ್ ಮಾಡಿರಿ-ನೀವು ಸಾವಕಾಶವಾಗಿ ರುಕೂಅ್ ಮಾಡುವ ತನಕ. ಅನಂತರ ನೇರವಾಗಿ ನಿಲ್ಲಿರಿ, ಅನಂತರ ಸುಜೂದ್ ಮಾಡಿರಿ- ನೀವು ಸಾವಕಾಶವಾಗಿ ಸುಜೂದ್ ಮಾಡುವ ತನಕ. ಅನಂತರ ಏಳಿರಿ- ನೀವು ಸಾವಕಾಶವಾಗಿ ಕುಳಿತುಕೊಳ್ಳುವ ತನಕ. ಅನಂತರ ಸುಜೂದ್ ಮಾಡಿರಿ- ನೀವು ಸಾವಕಾಶವಾಗಿ ಸುಜೂದ್ ಮಾಡುವ ತನಕ. ತರುವಾಯ ಇಡೀ ನಮಾಝನ್ನು ಇದೇ ರೀತಿ ಮಾಡಿರಿ."

(ವರದಿ: ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್)

2) "ಅಬೂ ಕತಾದ(ರ) ಸೇರಿದಂತೆ ಪ್ರವಾದಿವರ್ಯರ(ಸ) ಹತ್ತು ಮಂದಿ ಸಂಗಾತಿಗಳಿದ್ದಾಗ ನಾನು ಹೇಳಿದೆ: 'ನನಗೆ ಪ್ರವಾದಿವರ್ಯರ(ಸ) ನಮಾಝ್‌ನ ಕುರಿತು ನಿಮ್ಮೆಲ್ಲರಿಗಿಂತ ಹೆಚ್ಚು ತಿಳಿದಿದೆ.' ಆಗ ಹ. ಅಬೂ ಕತಾದ(ರ) ಹೇಳಿದರು: 'ನೀವು ನಮಗಿಂತ ಹೆಚ್ಚು ಪ್ರವಾದಿವರ್ಯರ(ಸ) ಜೊತೆಗೆ ಇರಲಿಲ್ಲ. ಹಾಗೆಯೇ ನೀವು ನಮಗಿಂತ ಹೆಚ್ಚು ಪ್ರವಾದಿವರ್ಯರ(ಸ) ಬಳಿ ಹೋಗಿ ಬರುತ್ತಿರಲಿಲ್ಲ.' ಆಗ ನಾನು ಹೇಳಿದೆ- 'ಯಾಕಿಲ್ಲ?' ಆಗ ಅವರು ಹೇಳಿದರು: 'ಹಾಗಾದರೆ ಪ್ರವಾದಿವರ್ಯರ(ಸ) ನಮಾಝ್‌ನ ಕ್ರಮವನ್ನು ತಿಳಿಸಿರಿ.' ಆಗ ನಾನು ಹೇಳಿದೆ: 'ಪ್ರವಾದಿವರ್ಯರು(ಸ) ನಮಾಝ್‌ಗಾಗಿ ನಿಂತಾಗ ಮೊದಲು ನೇರವಾಗಿ ನಿಲ್ಲುತ್ತಿದ್ದರು ಮತ್ತು ತಮ್ಮ ಎರಡೂ ಕೈಗಳನ್ನು ಭುಜಗಳ ತನಕ ಎತ್ತಿ ಹಿಡಿದು 'ಅಲ್ಲಾಹು ಅಕ್ಬರ್' ಎನ್ನುತ್ತಿದ್ದರು. ಅನಂತರ ಅವರು ರುಕೂಅ್ ಮಾಡಬಯಸಿದಾಗ ತಮ್ಮ ಎರಡೂ ಕೈಗಳನ್ನು ಭುಜಗಳ ತನಕ ಎತ್ತಿ ಹಿಡಿದು 'ಅಲ್ಲಾಹು ಅಕ್ಬರ್' ಎನ್ನುತ್ತಾ ರುಕೂಅ್ ಮಾಡುತ್ತಿದ್ದರು. ರುಕೂಅ್‌ನಲ್ಲಿ ಅವರು(ಸ) ನೇರವಾಗಿ ಬಿಡುತ್ತಿದ್ದರು. ಅವರ(ಸ) ಶರೀರವು ಮೇಲೇರಿಯೂ ಇರುತ್ತಿರಲಿಲ್ಲ ಮತ್ತು ಕೆಳಗೆ ಬಾಗಿಯೂ ಇರುತ್ತಿರಲಿಲ್ಲ. ಅವರ(ಸ) ಕೈಗಳು ಮೊಣಕಾಲುಗಳ ಮೇಲೆ ಇರುತ್ತಿತ್ತು. ಅನಂತರ ಅವರು(ಸ) 'ಸಮಿಅಲ್ಲಾಹು ಲಿಮನ್ ಹಮಿದ' ಎನ್ನುತ್ತಾ ಏಳುತ್ತಿದ್ದರು. ಕೈಗಳನ್ನು ಎತ್ತಿ ನೇರವಾಗಿ ನಿಲ್ಲುತ್ತಿದ್ದರು. ಎಷ್ಟರ ವರೆಗೆಂದರೆ ದೇಹದ ಮೂಳೆಗಳೆಲ್ಲಾ ತಮ್ಮ ಸ್ಥಾನಕ್ಕೆ ಬರುತ್ತಿದ್ದುವು. ಅನಂತರ ಅವರು(ಸ) ಭೂಮಿಯ ಕಡೆಗೆ ಬಾಗುತ್ತಾ ಸುಜೂದ್ ಮಾಡುತ್ತಿದ್ದರು. ಅನಂತರ (ಎರಡೂ ಸುಜೂದ್‌ಗಳ ಬಳಿಕ) ಅವರು(ಸ) 'ಅಲ್ಲಾಹು ಅಕ್ಬರ್' ಎನ್ನುತ್ತಾ ತಮ್ಮ ಒಂದು ಕಾಲನ್ನು ಹರಡಿ ಅದರ ಮೇಲೆ ಕುಳಿತು

ಬಿಡುತ್ತಿದ್ದರು. ಎಷ್ಟರ ವರೆಗೆಂದರೆ ಎಲ್ಲ ಮೂಳೆಗಳೂ ಅವುಗಳ ಸ್ಥಾನಕ್ಕೆ ಬರುತ್ತಿದ್ದುವು. ಅನಂತರ ಅವರು(ಸ) (ಎರಡನೆಯ ರಕಅತ್‌ಗಾಗಿ) ನಿಲ್ಲುತ್ತಿದ್ದರು. ಅನಂತರ ಎರಡನೆಯ ರಕಅತ್‌ನಲ್ಲೂ ಹೀಗೆಯೇ ಮಾಡುತ್ತಿದ್ದರು. ಎಲ್ಲಿಯ ವರೆಗೆಂದರೆ ಅವರು(ಸ) ಎರಡು ರಕಅತ್‌ಗಳ ನಂತರ ಮೂರನೆಯ ರಕಅತ್‌ಗಾಗಿ ಎದ್ದಾಗ 'ಅಲ್ಲಾಹು ಅಕ್ಬರ್' ಎನ್ನುತ್ತಾ ತಮ್ಮ ಎರಡೂ ಕೈಗಳನ್ನು ಭುಜಗಳ ತನಕ ಎತ್ತುತ್ತಿದ್ದರು. ನಮಾಝ್‌ನ ಆರಂಭದಲ್ಲಿ ಮಾಡಿದಂತೆ. ಎಲ್ಲಿಯ ವರೆಗೆಂದರೆ ಅವರು(ಸ) ಕೊನೆಯ ರಕಅತ್‌ನಲ್ಲಿರುವಾಗ ತಮ್ಮ ಎಡಕಾಲನ್ನು ಹಿಂದೆ ಮಾಡುತ್ತಿದ್ದರು. (ಅದನ್ನು ಹರಡಿ ಬಲಕಾಲಿನ ಅಡಿಯಲ್ಲಿಡುತ್ತಿದ್ದರು ಮತ್ತು ಬಲಕಾಲನ್ನು ನೇರವಾಗಿ ನಿಲ್ಲಿಸುತ್ತಿದ್ದರು) ಮತ್ತು ನೆಲದಲ್ಲಿ ಕುಳಿತುಕೊಳ್ಳುತ್ತಿದ್ದರು. ಅನಂತರ ಸಲಾಮ್ ಹೇಳುತ್ತಿದ್ದರು.' ಆಗ ಇತರ ಸಹಾಬಿಗಳು ಹೇಳಿದರು- ನೀವು ಸರಿಯಾಗಿಯೇ ವಿವರಿಸಿದಿರಿ. ಪ್ರವಾದಿವರ್ಯರು(ಸ) ಹೀಗೆಯೇ ನಮಾಝ್ ಮಾಡುತ್ತಿದ್ದರು."

(ವರದಿ: ಅಬೂ ಹುಮೈದ್ ಸಾಇದೀ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಇಮಾಮ್ ಶಾಫಿಈಯವರು(ರ) ಇದೇ ಹದೀಸ್ ಪ್ರಕಾರ ನಮಾಝ್ ಮಾಡುತ್ತಿದ್ದರು.

3) "ಹ. ಅಬೂ ಮೂಸಾ ಅಶ್‌ಅರೀಯವರು(ರ) ತಮ್ಮ ಗೋತ್ರದ ಜನರನ್ನು ಕರೆದು ಹೇಳಿದರು: 'ನೀವು ಎಲ್ಲ ಸ್ತ್ರೀ ಪುರುಷರು ಮತ್ತು ಮಕ್ಕಳು ಒಟ್ಟಾಗಿ ಸೇರಿರಿ. ನಾನು ನಿಮಗೆ ಪ್ರವಾದಿವರ್ಯರ(ಸ) ನಮಾಝ್‌ನ ಕ್ರಮವನ್ನು ತಿಳಿಸುವೆನು.' ಎಲ್ಲರೂ ಒಟ್ಟು ಸೇರಿದ ಬಳಿಕ ಅವರು ವುಝೂ ಮಾಡಿ ತೋರಿಸಿದರು. ಸೂರ್ಯನು ನಡುನೆತ್ತಿಯಿಂದ ಸರಿದು ನೆರಳು ಹರಿದ ನಂತರ ಎದ್ದು ನಿಂತು 'ಅದಾನ್' ಹೇಳಿದರು. ಮುಂದಿನ ಸಾಲುಗಳಲ್ಲಿ ಪುರುಷರಿದ್ದರು. ಅವರ ಹಿಂದೆ ಮಕ್ಕಳು ಮತ್ತು ಅವರ ಹಿಂದೆ ಮಹಿಳೆಯರು. ಅನಂತರ ಅವರು 'ಇಕಾಮತ್' ಹೇಳಿದರು ಹಾಗೂ ಮುಂದೆ ನಿಂತರು. ತರುವಾಯ ತಮ್ಮ ಎರಡೂ ಕೈಗಳನ್ನು ಎತ್ತಿ 'ಅಲ್ಲಾಹು ಅಕ್ಬರ್' ಎಂದರು. ಅನಂತರ ಮೆಲುದನಿಯಲ್ಲಿ ಸೂರಃ ಫಾತಿಹಾ ಮತ್ತು ಅದರ ಜೊತೆಗೆ ಇನ್ನೊಂದು ಸೂರಃ ಪಠಿಸಿದರು. ಅನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ ರುಕೂಅ್ ಮಾಡಿದರು ಹಾಗೂ ಮೂರು ಸಲ سُبْحَانَ اللهِ وَبِحَمْدِهِ 'ಸುಬ್‌ಹಾನಲ್ಲಾಹಿ ವಬಿ ಹಮ್ದಿಹೀ' ಎಂದರು. ಅನಂತರ سَمِعَ اللهُ لِمَنْ حَمِدَهُ 'ಸಮಿಅಲ್ಲಾಹು ಲಿಮನ್ ಹಮಿದಃ' ಎನ್ನುತ್ತಾ ರುಕೂಅ್‌ನಿಂದ ಎದ್ದು ನೇರವಾಗಿ ನಿಂತರು. ಅನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ ಸುಜೂದ್ ಮಾಡಿದರು. ಅನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ ಸುಜೂದ್‌ನಿಂದ ತಲೆ ಎತ್ತಿದರು. ಅನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ ಎರಡನೆಯ ಸುಜೂದ್ ಮಾಡಿದರು. ಅನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ ಎದ್ದು ನಿಂತರು. ಈ ರೀತಿ ಅವರು ಪ್ರಥಮ 'ರಕಅತ್'ನಲ್ಲಿ ಆರು ಸಲ 'ಅಲ್ಲಾಹು ಅಕ್ಬರ್' ಹೇಳಿದರು. ಮತ್ತೆ ಮೂರನೆಯ 'ರಕಅತ್'ಗೆ ಎದ್ದು ನಿಂತಾಗ

'ಅಲ್ಲಾಹು ಅಕ್ಬರ್' ಎಂದರು. ನಮಾಝ್ ಪೂರ್ಣಗೊಂಡಾಗ(ನಾಲ್ಕು ರಕಅತ್‌ಗಳು) ಜನರನ್ನುದ್ದೇಶಿಸಿ ನಾನು ಹೇಗೆ 'ಅಲ್ಲಾಹು ಅಕ್ಬರ್' ಹೇಳಿದೆ, ಹೇಗೆ ರುಕೂಅ್ ಮತ್ತು ಸೂಜೂದ್ ಮಾಡಿದೆ ಎಂಬುದನ್ನು ಕಲಿಯಿರಿ ಮತ್ತು ನೆನಪಿಡಿ. ಏಕೆಂದರೆ ಈ ಸಮಯದಲ್ಲಿ (ಝುಹರ್‌ನ ಸಮಯದಲ್ಲಿ) ಪ್ರವಾದಿವರ್ಯರು(ಸ) ನಮಗೆ ಇದೇ ರೀತಿ ನಮಾಝ್ ಮಾಡಿಸುತ್ತಿದ್ದರು."

ಇಮಾಮ್ ಅಬೂ ಹನೀಫಾರವರು(ರ) ನಮಾಝ್‌ನ ಇದೇ ಕ್ರಮವನ್ನು ಅನುಸರಿಸುತ್ತಿದ್ದರು.

ಮೇಲೆ ವಿವರಿಸಲಾದ ಹದೀಸ್‌ಗಳಲ್ಲಿ ಮತ್ತು ಇನ್ನಿತರ ಕೆಲವು ಹದೀಸ್‌ಗಳಲ್ಲಿ ಪ್ರವಾದಿವರ್ಯರ(ಸ) ನಮಾಝ್‌ನ ಕ್ರಮವನ್ನು ವಿವರಿಸಲಾಗಿದೆ. ನಮಾಝ್‌ನಲ್ಲಿ ಕೆಲವು ವಿಷಯಗಳು ಕಡ್ಡಾಯ ಮತ್ತು ಇನ್ನು ಕೆಲವು ವಿಷಯಗಳು ಸುನ್ನತ್ ಆಗಿವೆ.

## ನಮಾಝ್‌ನ ಕಡ್ಡಾಯ ವಿಧಿಗಳು

ನಮಾಝ್‌ನ ಕೆಲವು ಫರ್ಝ್ ಮತ್ತು ವಾಜಿಬ್‌ಗಳಿವೆ(ಕಡ್ಡಾಯ ವಿಧಿಗಳು). ಉದ್ದೇಶಪೂರ್ವಕವಾಗಲೀ ಮರೆವಿನಿಂದಾಗಲೀ ಅವುಗಳ ಪೈಕಿ ಯಾವುದಾದರೊಂದು ಬಿಟ್ಟು ಹೋದರೆ ನಮಾಝ್ ಸಿಂಧುವಾಗದು. ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಫರ್ಝ್ ಮತ್ತು ವಾಜಿಬ್‌ಗಳು ಬೇರೆ ಬೇರೆಯಾಗಿವೆ. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಇವೆರಡೂ ಸಮಾನಾರ್ಥದ ಪದಗಳಾಗಿವೆ.

**1. ನಿಯ್ಯತ್(ಸಂಕಲ್ಪ):** ಎಲ್ಲ ಧಾರ್ಮಿಕ ವಿಧಿಗಳಿಗೆ ನಿಯ್ಯತ್ ಕಡ್ಡಾಯವಾಗಿರುವಂತೆ ನಮಾಝ್‌ಗೆ ಕೂಡಾ ನಿಯ್ಯತ್ ಕಡ್ಡಾಯ. ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ನಿಯ್ಯತ್ ನಮಾಝ್‌ನ ನಿಬಂಧನೆಗಳಲ್ಲಿ ಒಂದಾಗಿದೆ. 'ನಿಯ್ಯತ್' ಮನಸ್ಸಿನ ಸಂಕಲ್ಪವಾಗಿದೆ. ಆದ್ದರಿಂದ ಅದನ್ನು ಬಾಯಿಯಿಂದ ಹೇಳುವುದು ಬಿದ್‌ಅತ್ ಆಗಿದೆ ಎಂದು ಹನಫೀ ಕರ್ಮಶಾಸ್ತ್ರದ ನಿಯಮ. ಶಾಫಿಈ ಕರ್ಮಶಾಸ್ತ್ರದಂತೆ ನಿಯ್ಯತ್ ಬಾಯಿಯಿಂದ ಹೇಳುವುದು ಸುನ್ನತ್ ಆಗಿದೆ. (ಅಲ್ ಫಿಕ್ಹ್ ಅಲಾ ಮದಾಹಿಬಲ್ ಅರ್‌ಬಅ- ಭಾಗ-1, ಪುಟ: 214)

**2. ತಕ್ಬೀರತುತ್ತಹ್ರೀಮ್(ನಮಾಝ್ ಆರಂಭಿಸುವಾಗ 'ಅಲ್ಲಾಹು ಅಕ್ಬರ್' ಹೇಳುವುದು):**

ಪ್ರವಾದಿ(ಸ) ಹೀಗೆ ಹೇಳಿರುವರು:

"ನೈರ್ಮಲ್ಯವು ನಮಾಝ್‌ನ ಕೀಲಿಕೈಯಾಗಿದೆ. ಅದನ್ನು ಕಟ್ಟುವುದು ಅಲ್ಲಾಹು ಅಕ್ಬರ್ ಹೇಳುವುದಾಗಿದೆ. ಅದನ್ನು ಬಿಚ್ಚುವುದು ಸಲಾಮ್ ಹೇಳುವುದಾಗಿದೆ.

(ವರದಿ: ಹ. ಅಲೀ(ರ)- ಶಾಫಿಈ, ಅಹ್ಮದ್, ಅಬೂ ದಾವೂದ್, ಇಬ್ನು ಮಾಜಃ, ತಿರ್ಮಿದಿ)

**3. ಕಡ್ಡಾಯ ನಮಾಝ್ ನಿಂತು ನಿರ್ವಹಿಸುವುದು:** ನಿಲ್ಲುವ ಸಾಮರ್ಥ್ಯವಿರುವವನು ಕಡ್ಡಾಯ ನಮಾಝನ್ನು ನಿಂತುಕೊಂಡೇ ನಿರ್ವಹಿಸಬೇಕು. ಈ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತವಿದೆ.

ಅಲ್ಲಾಹನು ಈ ರೀತಿ ಆದೇಶಿಸಿರುವನು:

''ನಿಮ್ಮ ನಮಾಝ್‌ಗಳನ್ನು ಜಾಗರೂಕತೆಯಿಂದ ಪಾಲಿಸಿರಿ; ಮುಖ್ಯವಾಗಿ ಸರ್ವಗುಣ ಸಂಪನ್ನವಾದ ನಮಾಝ್. ಅತ್ಯಂತ ವಿಧೇಯ ದಾಸರು ನಿಲ್ಲುವ ಹಾಗೆ ಅಲ್ಲಾಹನ ಮುಂದೆ ನಿಲ್ಲಿರಿ.'' (ಪವಿತ್ರ ಕುರ್‌ಆನ್, 2:238)

"ನನಗೆ ಮೂಲವ್ಯಾಧಿ ಇತ್ತು. ನಾನು ಪ್ರವಾದಿವರ್ಯರಲ್ಲಿ(ಸ) ನಮಾಝ್‌ನ ಕುರಿತು ವಿಚಾರಿಸಿದೆ. ಆಗ ಅವರು ಹೇಳಿದರು- ನಿಂತುಕೊಂಡು ನಮಾಝ್ ನಿರ್ವಹಿಸಿರಿ. ನಿಲ್ಲಲು ಸಾಧ್ಯವಿಲ್ಲದಿದ್ದರೆ ಕುಳಿತುಕೊಂಡು ನಿರ್ವಹಿಸಿರಿ. ಕುಳಿತುಕೊಳ್ಳಲೂ ಸಾಧ್ಯವಿಲ್ಲದಿದ್ದರೆ ಮಲಗಿಕೊಂಡು ನಿರ್ವಹಿಸಿರಿ." [ವರದಿ: ಇಮ್ರಾನ್ ಬಿನ್ ಹಸೀನ್(ರ)]

ಫರ್ಝ್ ಅಲ್ಲದ ನಮಾಝ್‌ಗಳನ್ನು ಸಾಮರ್ಥ್ಯವಿದ್ದಾಗ್ಯೂ ಕುಳಿತುಕೊಂಡು ನಿರ್ವಹಿಸಬಹುದು. ಆದರೆ ಅದಕ್ಕೆ ನಿಂತುಕೊಂಡು ನಿರ್ವಹಿಸಿದ ನಮಾಝ್‌ನ ಅರ್ಧದಷ್ಟು ಮಾತ್ರ ಪುಣ್ಯಫಲ ದೊರೆಯುವುದು. ಹನಫೀ ಕ್ರಮದಂತೆ ವಿತ್ರ್, ಫಜ್ರ್‌ನ ಸುನ್ನತ್ ಮತ್ತು ಹರಕೆ ಹೊತ್ತ ನಮಾಝ್‌ಗಳನ್ನು ಕೂಡಾ ನಿಂತುಕೊಂಡೇ ನಿರ್ವಹಿಸಬೇಕು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಕುಳಿತುಕೊಂಡು ನಿರ್ವಹಿಸುವ ನಮಝ್‌ನ ಪುಣ್ಯಫಲವು ಅರ್ಧ ನಮಾಝ್ ನಷ್ಟಾಗಿದೆ." (ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಬುಖಾರಿ)

ಆದರೆ ಯಾರಾದರೂ ಸೂಕ್ತ ಕಾರಣಕ್ಕಾಗಿ ಫರ್ಝ್ ನಮಾಝನ್ನು ಕುಳಿತುಕೊಂಡೇ ನಿರ್ವಹಿಸಿದರೆ ಅವನ ಪುಣ್ಯಫಲದಲ್ಲಿ ಯಾವುದೇ ಕೊರತೆ ಆಗಲಾರದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಒಬ್ಬ ವ್ಯಕ್ತಿಯು ರೋಗಿಯಾದರೆ ಅಥವಾ ಅವನು ಪ್ರಯಾಣದಲ್ಲಿದ್ದರೆ ಅಲ್ಲಾಹನು ಅವನ ಪಾಲಿಗೆ ಅವನು ಆರೋಗ್ಯವಂತ ಅಥವಾ ಊರಲ್ಲಿದ್ದಾಗ ಮಾಡುತ್ತಿದ್ದ ಸತ್ಕರ್ಮವನ್ನೇ ದಾಖಲಿಸುತ್ತಾನೆ." (ಹ. ಅಬೂ ಮೂಸಾ ಅಶ್‌ಅರೀ(ರ)- ಬುಖಾರಿ)

**4. ಪ್ರತಿಯೊಂದು ರಕಅತ್‌ನಲ್ಲಿ ಸೂರಃ ಫಾತಿಹಾ ಪಠಿಸುವುದು:** ನಮಾಝ್‌ನ ಪ್ರತಿ ರಕಅತ್‌ನಲ್ಲಿಯೂ ಸೂರಃ ಫಾತಿಹಾವನ್ನು ಪಠಿಸುವುದು ಕಡ್ಡಾಯ.

ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಸೂರಃ ಫಾತಿಹಾ ಫರ್ಝ್ ಅಲ್ಲ. ಅದು ವಾಜಿಬ್ ಆಗಿದೆ. ಮಾತ್ರವಲ್ಲ ಮೊದಲು ಸೂರಃ ಫಾತಿಹಾ ಪಠಿಸಿ ಅನಂತರ ಬೇರೆ ಯಾವುದಾದರೂ ಸೂರಃ ಪಠಿಸಬೇಕು. ಈ ಕ್ರಮವು ವಿರುದ್ಧವಾದರೆ 'ವಾಜಿಬ್' ತೊರೆದಂತಾಗುವುದು. ನಮಾಝಿನ ಮೂಲ ಫರ್ಝ್- ಕುರ್‌ಆನಿನ ಯಾವುದಾದರೂ ಭಾಗವನ್ನು ಪಠಿಸುವುದಾಗಿದೆ. ಏಕೆಂದರೆ ಅಲ್ಲಾಹನು ಹೀಗೆ ಹೇಳಿರುವನು:

"ಇನ್ನು (ಮುಂದೆ) ಕುರ್‌ಆನ್‌ನಿಂದ, ಸುಲಭವಾಗಿ ಪಠಿಸಲು ನಿಮಗೆ ಸಾಧ್ಯವಿರುವಷ್ಟನ್ನು ಪಠಿಸಿರಿ" (ಪವಿತ್ರ ಕುರ್‌ಆನ್, 73:20)

ಪದೇ ಪದೇ ತಪ್ಪು ನಮಾಝ್ ಮಾಡುತ್ತಿದ್ದ ವ್ಯಕ್ತಿಗೆ ಪ್ರವಾದಿ(ಸ) ಇದನ್ನೇ ಬೋಧಿಸಿದ್ದರು:

"ನಿಮಗೆ ಕುರ್‌ಆನಿನ ಯಾವ ಭಾಗವು ಸುಲಭವಾಗುತ್ತದೋ ಅದನ್ನು ಓದಿರಿ."

ಹನಫೀ ಕ್ರಮದಂತೆ ಫರ್ಝ್ ನಮಾಝ್‌ನ ಕೇವಲ ಎರಡು ರಕಅತ್‌ಗಳಲ್ಲಿ ಕುರ್‌ಆನ್ ಪಠನ ಕಡ್ಡಾಯವಾಗಿದೆ. ನಾಲ್ಕು ರಕಅತ್‌ಗಳ ನಮಾಝ್ ಆಗಿದ್ದರೆ ಮೊದಲ ಮತ್ತು ಎರಡನೆಯ ರಕಅತ್‌ನಲ್ಲಿಯೇ ಕುರ್‌ಆನ್ ಪಠಿಸುವುದು ವಾಜಿಬ್ ಆಗಿದೆ. ವಿತ್ರ್, ಸುನ್ನತ್ ಮತ್ತು ನಫಿಲ್ ನಮಾಝ್‌ಗಳ ಪ್ರತಿ ರಕಅತ್‌ನಲ್ಲೂ ಕುರ್‌ಆನ್ ಪಠಿಸುವುದು ವಾಜಿಬ್ ಆಗಿದೆ. ಕಡ್ಡಾಯ ಕುರ್‌ಆನ್ ಪಠಣದ ಪ್ರಮಾಣವು ಒಂದು ದೊಡ್ಡ ಆಯತ್ ಅಥವಾ ಮೂರು ಚಿಕ್ಕ ಆಯತ್‌ಗಳಷ್ಟಾಗಿದೆ. ಸೂರಃ ಫಾತಿಹಾದ ಜೊತೆ ಬೇರಾವುದಾದರೂ ಸೂರಃ ಅಥವಾ ಕುರ್‌ಆನಿನ ಭಾಗವನ್ನು ಸೇರಿಸುವುದು ವಾಜಿಬ್ ಆಗಿದೆ. ಶಾಫಿಈ ಕ್ರಮದಂತೆ ಅದು ಸುನ್ನತ್.

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾವ ವ್ಯಕ್ತಿ ಸೂರಃ ಫಾತಿಹಾ ಪಠಿಸಲಿಲ್ಲವೋ ಅವನ ನಮಾಝ್ ನಮಾಝಲ್ಲ."

(ಹ. ಉಬಾದ ಬಿನ್ ಸಾಮಿತ್(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಪ್ರವಾದಿವರ್ಯರು(ಸ) ಯಾವುದೇ ನಮಾಝನ್ನು ಸೂರಃ ಫಾತಿಹಾದ ಹೊರತು ಎಂದಾದರೂ ನಿರ್ವಹಿಸಿದ್ದಾರೆಂದು ಸಾಬೀತಾಗಿಲ್ಲ.

'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್'ನ ಕುರಿತು ಅದು ಸೂರಃ ಫಾತಿಹದ ಭಾಗವೋ ಅಲ್ಲವೋ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಕೆಲವು ಸಹಾಬಿಗಳ ಪ್ರಕಾರ ಅದು ಸೂರಃ ಫಾತಿಹಾದ ಭಾಗವಾಗಿದ್ದು ಅದನ್ನು ಎಲ್ಲ ನಮಾಝ್‌ಗಳಲ್ಲಿ ಸೂರಃ ಫಾತಿಹಾ ಪಠಿಸುವಂತೆಯೇ ಪಠಿಸಬೇಕು.

"ನಾನು ಹ. ಅಬೂ ಹುರೈರಾರ(ರ) ಹಿಂದೆ ನಮಾಝ್ ಮಾಡಿದೆ. ಅವರು ಮೊದಲು 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' ಪಠಿಸಿ ಅನಂತರ ಸೂರಃ ಫಾತಿಹಾ ಪಠಿಸಿದರು."

(ವರದಿ: ನುಐಮುಲ್ ಮುಹ್‌ಜರ್(ರ)- ನಸಾಈ, ಇಬ್ನು ಮಾಜಃ, ಇಬ್ನು ಹಿಬ್ಬಾನ್)

ಇನ್ನು ಕೆಲವು ಮಂದಿ ಸಹಾಬಿಗಳ ಪ್ರಕಾರ 'ಬಿಸ್ಮಿಲ್ಲಾಹಿ...' ಸೂರಃ ಫಾತಿಹಾದ ಭಾಗವಲ್ಲ. ಅದೊಂದು ಪ್ರತ್ಯೇಕ ಆಯತ್ ಆಗಿದ್ದು ಅದನ್ನು ಬರ್ಕತ್ ಮತ್ತು ಎರಡು ಸೂರಃಗಳ ಮಧ್ಯೆ ಅಂತರಕ್ಕಾಗಿ ಅವತೀರ್ಣಗೊಳಿಸಲಾಗಿದೆ. ಇದನ್ನು ಸೂರಃ ಫಾತಿಹದ ಜೊತೆಗೆ ಪಠಿಸುವುದು ಒಳ್ಳೆಯದು. ಆದರೆ ಅದನ್ನು ಜೋರಾಗಿ ಪಠಿಸುವುದು ಸುನ್ನತ್ ಅಲ್ಲ.

"ಪ್ರವಾದಿ ಮುಹಮ್ಮದ್(ಸ), ಹ. ಅಬೂಬಕರ್(ರ), ಹ. ಉಮರ್(ರ) ಮತ್ತು ಹ. ಉಸ್ಮಾನ್‌ರವರ(ರ) ಹಿಂದೆ ನಾನು ನಮಾಝ್ ಮಾಡಿರುವೆನು. ಅವರಾರೂ 'ಬಿಸ್ಮಿಲ್ಲಾಹ್' ಜೋರಾಗಿ ಪಠಿಸುತ್ತಿರಲಿಲ್ಲ." (ವರದಿ: ಹ. ಅನಸ್(ರ)- ನಸಾಈ, ಇಬ್ನು ಹಿಬ್ಬಾನ್, ತಹಾವೀ)

ಪ್ರವಾದಿವರ್ಯರು(ಸ), ಸಹಾಬಿಗಳು ಮತ್ತು ತಾಬಈಗಳು ಎರಡೂ ರೀತಿಯನ್ನು ಅನುಸರಿಸುತ್ತಿದ್ದ ಬಗ್ಗೆ ವರದಿಗಳಿವೆ. ಇಮಾಮ್ ಇಬ್ನು ಕಯ್ಯಿಮ್ ಹೇಳುವಂತೆ, ಪ್ರವಾದಿ(ಸ) ಕೆಲವೊಮ್ಮೆ 'ಬಿಸ್ಮಿಲ್ಲಾಹ್' ಜೋರಾಗಿ ಓದುತ್ತಿದ್ದರು. ಆದರೆ ಹೆಚ್ಚಿನ ವೇಳೆ ಮೆಲುದನಿಯಲ್ಲೇ ಪಠಿಸುತ್ತಿದ್ದರು.

ಶಾಫಿಈ ಕ್ರಮದಂತೆ ಪ್ರಕಟವಾಗಿ ಓದುವ ನಮಾಝ್‌ಗಳಲ್ಲಿ ಸೂರಃ ಫಾತಿಹಾದ ಜೊತೆ 'ಬಿಸ್ಮಿಲ್ಲಾಹ್' ಜೋರಾಗಿ ಪಠಿಸುವುದು ಕಡ್ಡಾಯವಾಗಿದೆ. ಹನಫೀ ಕ್ರಮದಂತೆ 'ಬಿಸ್ಮಿಲ್ಲಾಹ್' ಪಠಿಸುವುದು ಸುನ್ನತ್. ಅದನ್ನು ಎಲ್ಲ ನಮಾಝ್‌ಗಳಲ್ಲಿಯೂ ಮೆಲುದನಿಯಲ್ಲೇ ಪಠಿಸಬೇಕು.

**5. ರುಕೂಅ್:** ರುಕೂಅ್ ನಮಾಝ್‌ನ ಕಡ್ಡಾಯ ವಿಧಿಯಾಗಿದೆ ಎಂಬ ಕುರಿತು ವಿದ್ವಾಂಸರಲ್ಲಿ ಒಮ್ಮತವಿದೆ. (ಅಲ್ ಮುಗ್ನಿ- ಭಾಗ-1, ಪುಟ:537)

ಅಲ್ಲಾಹನು ಈ ರೀತಿ ಆದೇಶಿಸಿರುವನು.

''ಸತ್ಯವಿಶ್ವಾಸಿಗಳೇ ಬಾಗಿರಿ ಮತ್ತು ಸಾಷ್ಟಾಂಗವೆಗಿರಿ'' (ಪವಿತ್ರ ಕುರ್‌ಆನ್, 23:77)

ರುಕೂಅನ್ನು ಸಾವಕಾಶವಾಗಿ ಮಾಡಬೇಕು. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅನಂತರ ರುಕೂಅ್ ಮಾಡಿರಿ. ನೀವು ಸಾವಕಾಶವಾಗಿ ರುಕೂಅ್ ಮಾಡುವ ತನಕ."

(ವರದಿ: ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್)

ಪ್ರವಾದಿ(ಸ) ಹೀಗೆ ಹೇಳಿದರು:

"ತನ್ನ ನಮಾಝ್‌ನಲ್ಲಿ ಕಳ್ಳತನ ಮಾಡುವವನು ಅತಿದೊಡ್ಡ ಕಳ್ಳನಾಗಿರುತ್ತಾನೆ. ಆಗ ಸಹಾಬಿಗಳು: 'ತನ್ನ ನಮಾಝ್‌ನಲ್ಲಿ ಒಬ್ಬನು ಕಳ್ಳತನ ಮಾಡುವುದು ಹೇಗೆ?' ಎಂದು ವಿಚಾರಿಸಿದರು. ಆಗ ಪ್ರವಾದಿ(ಸ)- 'ಆತ ಅದರ ರುಕೂಅ್ ಮತ್ತು ಸುಜೂದ್‌ಗಳನ್ನು ಪೂರ್ಣಗೊಳಿಸುವುದಿಲ್ಲ' ಎಂದರು."

ಇನ್ನೊಂದು ವರದಿಯಲ್ಲಿರುವಂತೆ ಪ್ರವಾದಿ(ಸ) ಹೇಳಿದರು:

"ಆತ ರುಕೂಅ್ ಮತ್ತು ಸುಜೂದ್‌ಗಳಲ್ಲಿ ತನ್ನ ಸೊಂಟವನ್ನು ನೇರವಾಗಿಸುವುದಿಲ್ಲ."

(ವರದಿ: ಅಬೂ ಕತಾದ(ರ)- ಅಹ್ಮದ್, ತಬ್ರಾನಿ, ಹಾಕಿಮ್, ಇಬ್ನು ಖುಝೈಮ)

**6. ಕೌಮ(ರುಕೂಅ್‌ನಿಂದ ಎದ್ದು ನೇರವಾಗಿ ನಿಲ್ಲುವುದು):**

"ಪ್ರವಾದಿ(ಸ) ರುಕೂಅ್‌ನಿಂದ ಎದ್ದಾಗ ನೇರವಾಗಿ ನಿಲ್ಲುತ್ತಿದ್ದರು. ಎಷ್ಟರ ವರೆಗೆಂದರೆ ಬೆನ್ನಿನ ಪ್ರತಿಯೊಂದು ಮೂಳೆ ತನ್ನ ಸ್ಥಾನಕ್ಕೆ ಮರಳುತ್ತಿತ್ತು."

(ವರದಿ: ಹ. ಅಬೂ ಹುಮೈದಾ(ರ)- ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಈ ರೀತಿ ಹೇಳಿರುವರು:

"ತನ್ನ ರುಕೂಅ್ ಮತ್ತು ಸುಜೂದ್‌ನ ಮಧ್ಯೆ ತನ್ನ ಸೊಂಟವನ್ನು ಯಾರು ನೇರವಾಗಿಸುವುದಿಲ್ಲವೋ ಅಲ್ಲಾಹನು ಆ ವ್ಯಕ್ತಿಯ ನಮಾಝ್‌ನ ಕಡೆಗೆ ನೋಡುವುದಿಲ್ಲ."

(ವರದಿ: ಹ. ಅಬೂ ಹುರೈರಾ(ರ)- ಅಹ್ಮದ್)

ಹನಫೀ ಕ್ರಮದಂತೆ ಕೌಮ ಫರ್ಝ್ ಅಲ್ಲ. ಅದು ವಾಜಿಬ್ ಆಗಿದೆ.

**7. ಎರಡು ಸುಜೂದ್ ಮತ್ತು ಅವುಗಳ ಮಧ್ಯೆ ಕುಳಿತುಕೊಳ್ಳುವುದು:**

ಪ್ರತಿಯೊಂದು ರಕಅತ್‌ನಲ್ಲಿ ಎರಡು ಸುಜೂದ್‌ಗಳನ್ನು ಮಾಡುವುದು ಮತ್ತು ಅವುಗಳ ಮಧ್ಯೆ ಕುಳಿತುಕೊಳ್ಳುವುದು ಕಡ್ಡಾಯವಾಗಿದೆ. ಸುಜೂದ್ ಮಾಡುವಾಗ ಏಳು ಅಂಗಗಳು ನೆಲಕ್ಕೆ ತಾಗಬೇಕು.

"ಪ್ರವಾದಿವರ್ಯರಿಗೆ(ಸ) ಏಳು ಅಂಗಗಳ ಮೇಲೆ ಸುಜೂದ್ ಮಾಡಲು ಆಜ್ಞಾಪಿಸಲಾಯಿತು. ತಲೆಕೂದಲು ಮತ್ತು ಬಟ್ಟೆಯನ್ನು ನೆಲಕ್ಕೆ ತಾಗುವುದರಿಂದ ತಡೆಯದಿರಲೂ ಆಜ್ಞಾಪಿಸಲಾಯಿತು. ಆ ಏಳು ಅಂಗಗಳು: ಹಣೆ, ಎರಡು ಹಸ್ತಗಳು, ಎರಡು ಮೊಣಕಾಲುಗಳು ಮತ್ತು ಎರಡು ಪಾದಗಳು." (ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್)

ಕೇವಲ ಹಣೆಯನ್ನು ನೆಲಕ್ಕೆ ಹಚ್ಚಿದರೂ ಕಡ್ಡಾಯ ವಿಧಿ ಪೂರ್ಣಗೊಳ್ಳುತ್ತದೆ. ಆದರೆ ಹಣೆಯ ಜೊತೆಗೆ ಮೂಗನ್ನು ನೆಲಕ್ಕೆ ತಾಗಿಸುವುದೂ ಸುನ್ನತ್ ಆಗಿದೆ.

"ಪ್ರವಾದಿ(ಸ) ಸುಜೂದ್ ಮಾಡುವಾಗ ತಮ್ಮ ಹಣೆ ಮತ್ತು ಮೂಗನ್ನು ನೆಲಕ್ಕೆ ತಾಗಿಸುತ್ತಿದ್ದರು." (ವರದಿ: ಹ. ಅಬೂ ಹುಮೈದಾ(ರ)- ಅಬೂ ದಾವೂದ್, ತಿರ್ಮಿದಿ)

**8. ಎರಡನೆಯ ಮತ್ತು ಕೊನೆಯ ರಕಅತ್‌ನ ನಂತರ ಕುಳಿತುಕೊಳ್ಳುವುದು ಹಾಗೂ 'ಅತ್ತಹಿಯ್ಯಾತ್' ಪಠಿಸುವುದು**

ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು- "ನೀವು ಪ್ರತಿ ಎರಡು ರಕಅತ್‌ಗಳ ನಂತರ ಕುಳಿತಾಗ ಈ ರೀತಿ ಹೇಳಿರಿ, 'ಅತ್ತಹಿಯ್ಯಾತು... ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ. ತರುವಾಯ ನಿಮಗೆ ಅತ್ಯಂತ ಪ್ರಿಯವಾದ ದುಆವನ್ನು ಅಲ್ಲಾಹನಲ್ಲಿ ಕೋರಿರಿ." (ವರದಿ: ಹ. ಇಬ್ನು ಮಸ್‌ಊದ್(ರ)- ಅಹ್ಮದ್, ನಸಾಈ)

ತಪ್ಪುತಪ್ಪಾಗಿ ನಮಾಝ್ ಮಾಡುತ್ತಿದ್ದವನನ್ನುದ್ದೇಶಿಸಿ ಪ್ರವಾದಿ(ಸ) ಹೀಗೆ ಹೇಳಿದರು:

"ನೀವು ಕೊನೆಯ ಸುಜೂದ್‌ನಿಂದ ತಲೆ ಎತ್ತಿದ ಬಳಿಕ 'ಅತ್ತಹಿಯ್ಯಾತ್' ಪಠಿಸುವಷ್ಟು ಕುಳಿತುಕೊಂಡರೆ ನಿಮ್ಮ ನಮಾಝ್ ಪೂರ್ಣಗೊಂಡಿತು."

(ಬುಖಾರಿ, ಮುಸ್ಲಿಮ್)

ಅತ್ತಹಿಯ್ಯಾತ್‌ನ ಹದೀಸ್ ವಿಭಿನ್ನ ಪದಗಳೊಂದಿಗೆ 24 ಮಂದಿ ಸಹಾಬಿಗಳಿಂದ ವರದಿಯಾಗಿದೆ. ಆ ಪೈಕಿ ಅತ್ಯಂತ ಪ್ರಬಲವಾದ ಮತ್ತು ಸರ್ವಸಮ್ಮತವಾದ ಹದೀಸ್‌ನಲ್ಲಿ ಈ ಕೆಳಗಿನಂತಿದೆ:

اَلتَّحِيَّاتُ لِلّٰهِ وَالصَّلَوَاتُ وَ الطَّيِّبَاتُ اَلسَّلَامُ عَلَيْكَ اَيُّهَا النَّبِيُّ وَرَحْمَةُ اللّٰهِ وَبَرَكَاتُهٗ اَلسَّلَامُ عَلَيْنَا وَعَلٰى عِبَادِاللّٰهِ الصَّالِحِيْنَ اَشْهَدُ اَنْ لَّآ اِلٰهَ اِلَّا اللّٰهُ وَاَشْهَدُ اَنَّ مُحَمَّدًا عَبْدُهٗ وَرَسُوْلُهٗ (بخاری و مسلم)

"ಅತ್ತಹಿಯ್ಯಾತು ಲಿಲ್ಲಾಹಿ ವಸ್ಸಲವಾತು ವತ್ತಯ್ಯಿಬಾತು ಅಸ್ಸಲಾಮು ಅಲೈಕ ಅಯ್ಯುಹನ್ನಬಿಯ್ಯು ವರಹ್ಮತುಲ್ಲಾಹಿ ವಬರಕಾತುಹೂ. ಅಸ್ಸಲಾಮು ಅಲೈನಾ ವಅಲಾ ಇಬಾದಿಲ್ಲಾಹಿ ಸ್ವಾಲಿಹೀನ್. ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ."

ಅರ್ಥ: ನಮ್ಮ ಅಭಿವಂದನೆಗಳು, ನಮ್ಮ ನಮಾಝ್‌ಗಳು ಮತ್ತು ಎಲ್ಲ ಪರಿಶುದ್ಧ ವಚನಗಳು ಅಲ್ಲಾಹನಿಗಾಗಿವೆ. ಓ ಪ್ರವಾದಿವರ್ಯರೇ! ತಮ್ಮ ಮೇಲೆ ಸಲಾಮ್, ಅಲ್ಲಾಹನ ದಯೆ ಮತ್ತು ಅವನ ಸಮೃದ್ಧಿಯಿರಲಿ. ನಮ್ಮ ಮೇಲೂ ಅಲ್ಲಾಹನ ಎಲ್ಲ ಸಜ್ಜನ ದಾಸರ ಮೇಲೂ ಶಾಂತಿಯಿರಲಿ. ಅಲ್ಲಾಹನ ಹೊರತು ಅನ್ಯ ಆರಾಧ್ಯನಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ ಮತ್ತು ಪ್ರವಾದಿ ಮುಹಮ್ಮದ್(ಸ) ಅಲ್ಲಾಹನ ದಾಸರು ಮತ್ತು ಅವನ ಸಂದೇಶವಾಹಕರಾಗಿರುವರೆಂದೂ ನಾನು ಸಾಕ್ಷ್ಯವಹಿಸುತ್ತೇನೆ.

(ವರದಿ: ಹ. ಇಬ್ನು ಮಸ್‌ಊದ್(ರ)- ಬುಖಾರಿ, ಮುಸ್ಲಿಮ್)

ಅನಂತರದ ಅತ್ಯಧಿಕ ಪ್ರಬಲ ಹದೀಸ್‌ನಲ್ಲಿ ಈ ಕೆಳಗಿನಂತಿದೆ:

اَلتَّحِيَّاتُ الْمُبَارَكَاتُ الصَّلَوَاتُ الطَّيِّبَاتُ لِلّٰهِ، اَلسَّلَامُ عَلَيْكَ اَيُّهَا النَّبِيُّ وَرَحْمَةُ اللّٰهِ وَبَرَكَاتُهٗ۔ اَلسَّلَامُ عَلَيْنَا وَ عَلٰى عِبَادِاللّٰهِ الصَّالِحِيْنَ اَشْهَدُ اَنْ لَّآ اِلٰهَ اِلَّااللّٰهُ وَ اَشْهَدُ اَنَّ مُحَمَّدًا عَبْدُهٗ وَرَسُوْلُهٗ۔

(مسلم ،شافعی، ابوداود، نسائی)

"ಅತ್ತಹಿಯ್ಯಾತುಲ್ ಮುಬಾರಕಾತು ಸ್ವಲವಾತು ತ್ತಯ್ಯಿಬಾತು ಲಿಲ್ಲಾಹಿ. ಅಸ್ಸಲಾಮು ಅಲೈಕ ಅಯ್ಯುಹನ್ನಬಿಯ್ಯು ವರಹ್ಮತುಲ್ಲಾಹಿ ವಬರಕಾತುಹೂ. ಅಸ್ಸಲಾಮು ಅಲೈನಾ ವ ಅಲಾ ಇಬಾದಿಲ್ಲಾಹಿ ಸ್ವಾಲಿಹೀನ್. ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವ ರಸೂಲುಹೂ."

ಅರ್ಥ: ನಮ್ಮ ಅಭಿವಂದನೆಗಳು, ನಮ್ಮ ಮಂಗಳ ಕಾರ್ಯಗಳು, ನಮ್ಮ ನಮಾಝ್‌ಗಳು ಮತ್ತು ಎಲ್ಲ ಪರಿಶುದ್ಧ ವಚನಗಳು ಅಲ್ಲಾಹನಿಗಾಗಿವೆ. ಓ ಪ್ರವಾದಿವರ್ಯರೇ! ತಮ್ಮ ಮೇಲೆ ಸಲಾಮ್, ಅಲ್ಲಾಹನ ದಯೆ ಮತ್ತು ಅವನ ಸಮೃದ್ಧಿಯಿರಲಿ. ನಮ್ಮ ಮೇಲೂ

ಅಲ್ಲಾಹನ ಎಲ್ಲ ಸಜ್ಜನ ದಾಸರ ಮೇಲೂ ಶಾಂತಿಯಿರಲಿ. ಅಲ್ಲಾಹನ ಹೊರತು ಅನ್ಯ ಆರಾಧ್ಯನಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ ಮತ್ತು ಮುಹಮ್ಮದ್(ಸ) ಅಲ್ಲಾಹನ ದಾಸರು ಮತ್ತು ಅವನ ಸಂದೇಶವಾಹಕರಾಗಿರುವರೆಂದೂ ನಾನು ಸಾಕ್ಷ್ಯವಹಿಸುತ್ತೇನೆ.

**(ವರದಿ: ಹ. ಇಬ್ನು ಅಬ್ಬಾಸ್(ರ)- ಮುಸ್ಲಿಮ್, ಶಾಫಿಈ, ಅಬೂ ದಾವೂದ್, ನಸಾಈ)**

ಇಮಾಮ್ ಶಾಫಿಈಯವರು(ರ) ಈ 'ಅತ್ತಹಿಯ್ಯಾತ್' ಆಯ್ಕೆ ಮಾಡಿದರೆ ಇಮಾಮ್ ಅಬೂ ಹನೀಫಾ(ರ) ಮೇಲಿನ 'ಅತ್ತಹಿಯ್ಯಾತ'ನ್ನು ಆರಿಸಿದ್ದಾರೆ.

ಹನಫೀ ಕರ್ಮಶಾಸ್ತ್ರದಂತೆ ಎರಡನೆಯ ರಕಅತ್‌ನ ನಂತರ ಕುಳಿತುಕೊಳ್ಳುವುದು ಮತ್ತು ಅತ್ತಹಿಯ್ಯಾತ್ ಪಠಿಸುವುದು ವಾಜಿಬ್ ಆಗಿದೆ. ಶಾಫಿಈ ಕ್ರಮದಂತೆ ಅವೆರಡೂ ಸುನ್ನತ್ ಆಗಿವೆ. ಕೊನೆಯ ರಕಅತ್‌ನ ನಂತರ ಕುಳಿತುಕೊಳ್ಳುವುದು ನಾಲ್ಕೂ ಇಮಾಮರ ಪ್ರಕಾರ ಫರ್ಝ್(ಕಡ್ಡಾಯ) ಆಗಿದೆ. ಅದರಲ್ಲಿ ಅತ್ತಹಿಯ್ಯಾತ್ ಪಠಿಸುವುದು ಶಾಫಿಈ ಕ್ರಮದಂತೆ ಕಡ್ಡಾಯ ಮತ್ತು ಹನಫೀ ಕ್ರಮದಂತೆ ವಾಜಿಬ್ ಆಗಿದೆ.

ಎರಡನೆಯ ರಕಅತ್‌ನ ನಂತರ ಅತ್ತಹಿಯ್ಯಾತ್‌ಗೆ ಕುಳಿತುಕೊಳ್ಳುವುದು ತಪ್ಪಿ ಹೋದರೆ ಕೊನೆಯಲ್ಲಿ 'ಸಹೂ'ನ ಸುಜೂದ್ ಮಾಡುವುದರ ಮೂಲಕ ಅದನ್ನು ಪರಿಹರಿಸಿಕೊಳ್ಳಬಹುದು.

**9. ಸಲಾಮ್:** ಪ್ರವಾದಿವರ್ಯರ(ಸ) ಈ ಕೆಳಗಿನ ಹದೀಸ್‌ನಿಂದ ಸಲಾಮ್ ಕಡ್ಡಾಯವಾಗಿದೆಯೆಂದು ತಿಳಿದು ಬರುತ್ತದೆ:

"ನಮಾಝ್‌ನ ಕೀಲಿಕೈ ನೈರ್ಮಲ್ಯವಾಗಿದೆ. ಅಲ್ಲಾಹು ಅಕ್ಬರ್ ಅದರ 'ತಹ್ರೀಮ್' (ಪಾವಿತ್ರತೆ) ಆಗಿದೆ ಮತ್ತು ಸಲಾಮ್ ಹೇಳುವುದು ಅದರ ಮುಕ್ತಾಯವಾಗಿದೆ."

**(ಅಹ್ಮದ್, ಶಾಫಿಈ, ಅಬೂ ದಾವೂದ್, ಇಬ್ನು ಮಾಜಃ, ತಿರ್ಮಿದಿ)**

ಸಲಾಮ್ ಬಲ ಕಡೆಗೆ ಮತ್ತು ಎಡಕಡೆಗೆ ತಿರುಗಿ ಹೇಳಬೇಕೆಂದು ಅನೇಕ ಹದೀಸ್‌ಗಳಿಂದ ತಿಳಿದು ಬರುತ್ತದೆ.

ಪ್ರವಾದಿವರ್ಯರು(ಸ) ಬಲ ಮತ್ತು ಎಡಕಡೆಗೆ ತಿರುಗಿ ಈ ರೀತಿ ಸಲಾಮ್ ಹೇಳುತ್ತಿದ್ದರು. اَلسَّلَامُ عَلَيْكُمْ وَرَحْمَةُ اللهِ 'ಅಸ್ಸಲಾಮು ಅಲೈಕುಮ್ ವರಹ್ಮತುಲ್ಲಾಹ್'

**(ವರದಿ: ಹ. ಇಬ್ನು ಅಬ್ಬಾಸ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)**

ಹನಫೀ ಕ್ರಮದಂತೆ 'ಅಸ್ಸಲಾಮು ಅಲೈಕುಮ್' ಹೇಳುವುದು ವಾಜಿಬ್ ಆಗಿದೆ.

**10. ಕ್ರಮ:** ನಮಾಝುನ್ನು ಪ್ರವಾದಿವರ್ಯರು(ಸ) ಕಲಿಸಿದ ಕ್ರಮಪ್ರಕಾರವೇ ನಿರ್ವಹಿಸುವುದು ಕಡ್ಡಾಯವಾಗಿದೆ.

ಹನಫೀ ಕ್ರಮದಂತೆ ಕ್ರಮಬದ್ಧತೆಯು ನಮಾಝ್‌ನ ನಿಬಂಧನೆಯಾಗಿದೆ.

**11. ಸಂತುಲನೆ ಮತ್ತು ಸಾವಧಾನ:** ನಮಾಝ್‌ನಲ್ಲಿ ಸಂತುಲನೆ ಮತ್ತು ಸಾವಧಾನ ಕಡ್ಡಾಯವಾಗಿದೆ. ನಮಾಝುನ್ನು ಸಾವಧಾನದಿಂದ ನೆರವೇರಿಸದಿದ್ದರೆ ಅದು ಅಸಿಂಧುವಾಗುವುದು.

ಹನಫೀ ಕ್ರಮದಂತೆ ಎಲ್ಲ ನಫಿಲ್ ಮತ್ತು ವಿತ್ರ್ ನಮಾಝ್‌ಗಳ ಎಲ್ಲ ರಕಅತ್‌ಗಳಲ್ಲೂ ಫರ್ಝ್ ನಮಾಝ್‌ಗಳ ಪ್ರಥಮ ಎರಡು ರಕಅತ್‌ಗಳಲ್ಲೂ ಸೂರಃ ಫಾತಿಹಾದ ಜತೆ ಇತರ ಯಾವುದಾದರೂ ಸೂರಃ ಅಥವಾ ಕುರ್‌ಆನಿನ ಯಾವುದಾದರೂ ಭಾಗವನ್ನು ಸೇರಿಸಿ ಓದುವುದು ವಾಜಿಬ್ ಆಗಿದೆ.

ಶಾಫಿಈ ಕ್ರಮದಂತೆ ಕೊನೆಯ ರಕಅತ್‌ನ ನಂತರ ಅತ್ತಹಿಯ್ಯಾತ್‌ನಲ್ಲಿ ಸಲಾತ್ ಪಠಿಸುವುದು ಕಡ್ಡಾಯವಾಗಿದೆ.

# ನಮಾಝ್‌ನ ಐಚ್ಛಿಕ ವಿಧಿಗಳು

**1. ರಫಉಲ್‌ಯದೈನ್(ಎರಡೂ ಕೈಗಳನ್ನು ಎತ್ತುವುದು)**

ಶಾಫಿಈ ಕ್ರಮದಂತೆ ನಾಲ್ಕು ಸಂದರ್ಭದಲ್ಲಿ ಎರಡೂ ಕೈಗಳನ್ನು ಎತ್ತುವುದು ಸುನ್ನತ್ ಆಗಿದೆ-

**i) ಪ್ರಥಮ ತಕ್ಬೀರ್ ಹೇಳುವಾಗ:** ಈ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತವಿದೆ. ಹಾಫಿಝ್ ಇಬ್ನು ಹಜರ್‌ರವರು(ರ) ಹೀಗೆ ಬರೆದಿರುವರು: "ನಮಾಝ್‌ನ ಆರಂಭದಲ್ಲಿ ರಫಉಲ್‌ಯದೈನ್ ಐವತ್ತು ಮಂದಿ ಸಹಾಬಿಗಳಿಂದ ವರದಿಯಾಗಿದೆ. ಸ್ವರ್ಗದ ವಾಗ್ದಾನ ಲಭಿಸಿದ ಹತ್ತು ಮಂದಿ ಸಹಾಬಿಗಳೂ ಅವರಲ್ಲಿದ್ದಾರೆ." (ಫತ್ಹುಲ್ ಬಾರಿ)

ಇಮಾಮ್ ಹಾಕಿಮ್‌ರವರು(ರ) ಹೀಗೆ ಬರೆದಿರುವರು: "ಖಿಲಫಾಉರ್ರಾಷಿದೀನ್, ಸ್ವರ್ಗದ ವಾಗ್ದಾನ ಲಭಿಸಿದ 10 ಮಂದಿ ಸಹಾಬಿಗಳು ಮತ್ತು ಹೆಚ್ಚಿನ ಸಂಖ್ಯೆಯ ಇತರ ಸಹಾಬಿಗಳು ವಿಭಿನ್ನ ದೇಶಗಳಲ್ಲಿ ಹರಡಿ ಹೋದಾಗ್ಯೂ ಒಮ್ಮತಾಭಿಪ್ರಾಯ ತಾಳಿದ್ದಂತಹ ವಿಷಯ ರಫಉಲ್‌ಯದೈನ್ ಆಗಿತ್ತು. ಅದರ ಹೊರತು ಬೇರಾವುದೂ ನಮಗೆ ತಿಳಿದಿಲ್ಲ."

(ಬೈಹಕಿ)

**ii-iii) ರುಕೂಅ್ ಮಾಡುವಾಗ ಮತ್ತು ರುಕೂಅ್‌ನಿಂದ ಏಳುವಾಗ:** ಈ ಎರಡೂ ಸಂದರ್ಭಗಳಲ್ಲಿ ರಫಉಲ್‌ಯದೈನ್ ಮಾಡುವುದು ಅನೇಕ ಸಹಾಬಿಗಳಿಂದ ಸಾಬೀತು ಗೊಂಡಿದೆ.

"ಪ್ರವಾದಿ(ಸ) ನಮಾಝ್‌ಗೆ ನಿಂತಾಗ ತಮ್ಮ ಭುಜಗಳ ತನಕ ಕೈಗಳನ್ನು ಎತ್ತಿ ತಕ್ಬೀರ್ ಹೇಳುತ್ತಿದ್ದರು. ಅವರು ರುಕೂಅ್ ಮಾಡುವಾಗಲೂ ಅದೇ ರೀತಿ ಕೈಗಳನ್ನು ಎತ್ತುತ್ತಿದ್ದರು. ರುಕೂಅ್‌ನಿಂದ ಏಳುವಾಗಲೂ ಅದೇ ರೀತಿ ಕೈಗಳನ್ನು ಎತ್ತುತ್ತಿದ್ದರು ಹಾಗೂ 'ಸಮಿಅಲ್ಲಾಹು ಲಿಮನ್ ಹಮಿದಃ, ರಬ್ಬನಾ ಲಕಲ್ ಹಮ್ದ್' ಎನ್ನುತ್ತಿದ್ದರು.

(ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಮುಸ್ಲಿಮ್, ಬೈಹಕಿ)

ಬುಖಾರಿಯಲ್ಲಿ ಈ ಕೆಳಗಿನ ಪದಗಳೂ ಇವೆ.

"ಅವರು(ಸ) ಸುಜೂದ್ ಮಾಡುವಾಗ ಮತ್ತು ಸುಜೂದ್‌ನಿಂದ ತಲೆ ಎತ್ತುವಾಗ ಹೀಗೆ ಮಾಡುತ್ತಿರಲಿಲ್ಲ." ಬೈಹಕಿಯಲ್ಲಿ ಈ ಕೆಳಗಿನ ಪದಗಳು ಹೆಚ್ಚಿವೆ: "ಪ್ರವಾದಿ(ಸ) ಅಲ್ಲಾಹನ ಬಳಿ ಮರಳಿ ಹೋಗುವ ತನಕವೂ ಅವರ ನಮಾಝ್ ಇದೇ ರೀತಿ ಇತ್ತು."

**iv) ಎರಡನೆಯ ರಕಅತ್‌ನಿಂದ ಎದ್ದು ಮೂರನೆಯ ರಕಅತ್ ಆರಂಭಿಸುವಾಗ:**

"ಹ. ಇಬ್ನು ಉಮರ್(ರ) ಎರಡನೆಯ ರಕಅತ್‌ನಿಂದ ಎದ್ದು ಮೂರನೆಯ ರಕಅತ್ ಆರಂಭಿಸುವಾಗ 'ರಫಉಲ್‌ಯದ್ಯೆನ್' ಮಾಡುತ್ತಿದ್ದರು. ಪ್ರವಾದಿವರ್ಯರು(ಸ) ಹೀಗೆಯೇ ಮಾಡುತ್ತಿದ್ದರೆಂದು ಅವರು ನಮಗೆ ತಿಳಿಸಿದರು."

(ವರದಿ: ಹ. ನಾಫಿಅ್(ರ)- ಬುಖಾರಿ, ಅಬೂ ದಾವೂದ್, ನಸಾಈ)

'ರಫಉಲ್‌ಯದ್ಯೆನ್'ನ ಎರಡು ಕ್ರಮಗಳು ಹದೀಸ್‌ಗಳಲ್ಲಿ ವರದಿಯಾಗಿವೆ-

1) ಹ. ಇಬ್ನು ಉಮರ್‌ರವರ(ರ) ಪೂರ್ವೋಕ್ತ ಹದೀಸ್‌ನಲ್ಲಿರುವಂತೆ ಕೈಗಳನ್ನು ಭುಜಗಳ ತನಕ ಎತ್ತುವುದು.

2) ಕೈಗಳನ್ನು ಕಿವಿಗಳ ತನಕ ಎತ್ತುವುದು.

"ಪ್ರವಾದಿ(ಸ) ಅಲ್ಲಾಹು ಅಕ್ಬರ್ ಎನ್ನುವಾಗ ಕಿವಿಗಳ ತನಕ ಕೈಗಳನ್ನು ಎತ್ತುತ್ತಿದ್ದರು."

(ವರದಿ: ಮಾಲಿಕ್ ಬಿನ್ ಹುವೈರಿಸ್(ರ)- ಮುಸ್ಲಿಮ್, ಅಹ್ಮದ್)

ಹನಫೀ ಕ್ರಮದಂತೆ 'ಅಲ್ಲಾಹು ಅಕ್ಬರ್' ಎನ್ನುವಾಗ ಕೈಗಳನ್ನು ಎತ್ತಲಾಗುವುದು. ಪುರುಷರು ಬೆರಳುಗಳನ್ನು ಹರಡಿ ಕಿವಿಗಳ ತನಕ ಕೈ ಎತ್ತುವರು ಮತ್ತು ಸ್ತ್ರೀಯರು ಭುಜಗಳ ತನಕ ಕೈ ಎತ್ತುವರು.

ಇಮಾಮ್ ಶಾಫಿಈಯವರು(ರ) ಮೇಲ್ಕಾಣಿಸಿದ ಎರಡೂ ಹದೀಸ್‌ಗಳನ್ನು ಸೇರಿಸಿರುವರು. ಅವರ ಪ್ರಕಾರ ಕೈಗಳನ್ನು ಭುಜಗಳ ತನಕ ಎತ್ತಬೇಕು. ಹೆಬ್ಬೆರಳುಗಳನ್ನು ಕಿವಿಯ ಹಾಲೆಯ ತನಕ ಮತ್ತು ಬೆರಳುಗಳನ್ನು ಕಿವಿಗಳ ತನಕ ಎತ್ತಬೇಕು.

'ರಫಉಲ್‌ಯದ್ಯೆನ್' ಮಾಡುವಾಗ ಕೈಗಳನ್ನು ಹರಡಿಕೊಂಡಿರಬೇಕು.

"ಪ್ರವಾದಿವರ್ಯರು(ಸ) ನಮಾಝ್‌ಗೆ ನಿಲ್ಲುವಾಗ ತಮ್ಮ ಕೈಗಳನ್ನು ಹರಡಿಸಿಕೊಂಡು ಎತ್ತುತ್ತಿದ್ದರು." (ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ)

ಪ್ರಥಮ ತಕ್ಬೀರ್ ಹೇಳುವುದಕ್ಕೆ ಮುಂಚೆಯೇ ಕೈಗಳನ್ನು ಎತ್ತಬಹುದು. 'ಅಲ್ಲಾಹು ಅಕ್ಬರ್' ಹೇಳುತ್ತಲೂ ಎತ್ತಬಹುದು. 'ಅಲ್ಲಾಹು ಅಕ್ಬರ್' ಹೇಳಿದ ನಂತರವೂ ಎತ್ತಬಹುದು. ಮುಂಚೆಯೇ ಕೈಯೆತ್ತುವ ಪ್ರಸ್ತಾಪ ಹ. ಇಬ್ನು ಉಮರ್(ರ) ಅವರಿಂದ ಉಲ್ಲೇಖಿತವಾದ ಮೇಲಿನ ಹದೀಸ್‌ನಲ್ಲಿದೆ. ಅವರದೇ ಇನ್ನೊಂದು ವರದಿಯಲ್ಲಿ 'ಅಲ್ಲಾಹು ಅಕ್ಬರ್' ಹೇಳುತ್ತಾ ಕೈಯೆತ್ತುವ ಪ್ರಸ್ತಾಪವಿದೆ.

"ಪ್ರವಾದಿ(ಸ) ಅಲ್ಲಾಹು ಅಕ್ಬರ್ ಹೇಳುವಾಗ ತಮ್ಮ ಕೈಗಳನ್ನು ಎತ್ತುತ್ತಿದ್ದರು."

(ಮುಸ್ನದ್ ಅಹ್ಮದ್)

'ಅಲ್ಲಾಹು ಅಕ್ಬರ್' ಎಂದು ಹೇಳಿದ ನಂತರ ಕೈಯೆತ್ತುವ ಪ್ರಸ್ತಾಪ ಈ ಕೆಳಗಿನ ಹದೀಸ್‌ನಲ್ಲಿದೆ:

"ಪ್ರವಾದಿ(ಸ) 'ಅಲ್ಲಾಹು ಅಕ್ಬರ್' ಎಂದು ಹೇಳುವಾಗ ತಮ್ಮ ಕೈಗಳನ್ನೆತ್ತಿದ್ದರು."

(ವರದಿ: ಹ. ಮಾಲಿಕ್ ಬಿನ್ ಹುವೈರಿಸ್(ರ)- ಮುಸ್ಲಿಮ್)

ಹಾಫಿಝ್ ಇಬ್ನು ಹಜರ್(ರ) ಹೀಗೆ ಹೇಳಿರುವರು:

"ಅಲ್ಲಾಹು ಅಕ್ಬರ್ ಎನ್ನುವುದಕ್ಕಿಂತ ಮುಂಚೆ ಕೈಯೆತ್ತಬೇಕೆಂದು ಹೇಳುವ ಯಾವ ವ್ಯಕ್ತಿಯನ್ನೂ ನಾನು ಕಂಡಿಲ್ಲ." ಆದ್ದರಿಂದ ನಾಲ್ಕೂ ಮದ್‌ಹಬ್‌ಗಳ ಪ್ರಕಾರ ಕೈಗಳನ್ನು ತಕ್ಬೀರ್ ಹೇಳುವುದರ ಜೊತೆಗೆ ಎತ್ತಬೇಕು.

## 2. ಬಲಕೈಯನ್ನು ಎಡಕೈಯ ಮೇಲಿಡುವುದು

ನಮಾಝ್‌ನಲ್ಲಿ ಬಲಕೈಯನ್ನು ಎಡಕೈಯ ಮೇಲಿಡುವುದು ಸುನ್ನತ್ ಆಗಿದೆ. ಈ ಕುರಿತು 18 ಮಂದಿ ಸಹಾಬಿಗಳು 20 ಹದೀಸ್‌ಗಳನ್ನು ವರದಿ ಮಾಡಿರುವರು.

"ಜನರು ನಮಾಝ್‌ನಲ್ಲಿ ತಮ್ಮ ಬಲಕೈಯನ್ನು ಎಡಕೈಯ ಮೇಲಿಡಬೇಕೆಂದು ಅವರಿಗೆ- ಸಹಾಬಿಗಳಿಗೆ - ಆಜ್ಞಾಪಿಸಲಾಗಿತ್ತು."

(ವರದಿ: ಹ. ಸಹಲ್ ಬಿನ್ ಸಅದ್(ರ)- ಬುಖಾರಿ, ಅಹ್ಮದ್)

"ಪ್ರವಾದಿ(ಸ) ಒಬ್ಬ ವ್ಯಕ್ತಿಯ ಪಕ್ಕದಿಂದ ಹಾದು ಹೋದರು. ಆತ ತನ್ನ ಎಡ ಕೈಯನ್ನು ಬಲಕೈಯ ಮೇಲಿಟ್ಟು ನಮಾಝ್ ಮಾಡುತ್ತಿದ್ದನು. ಪ್ರವಾದಿ(ಸ) ಅವನ ಎಡಕೈಯನ್ನು ಎಳೆದು ಬಲಕೈಯನ್ನು ಎಡಕೈಯ ಮೇಲಿಟ್ಟರು." (ವರದಿ: ಹ. ಜಾಬಿರ್(ರ)- ಅಹ್ಮದ್)

ಕೈ ಎಲ್ಲಿಡಬೇಕು ಎಂಬ ಬಗ್ಗೆ ಪೂರ್ವಜರಿಂದ ಮೂರು ಅಭಿಪ್ರಾಯಗಳು ವರದಿಯಾಗಿವೆ:

1) ಎದೆಯ ಮೇಲಿಡುವುದು.

2) ನಾಭಿಯ ಮೇಲಿಡುವುದು.

3) ನಾಭಿಯ ಕೆಳಗಿಡುವುದು.

ಆದರೆ ಈ ಬಗ್ಗೆ ಯಾವುದೇ ಅಧಿಕೃತ ಹದೀಸ್ ವರದಿಯಾಗಿಲ್ಲ. ಈ ಬಗ್ಗೆ ವರದಿ ಯಾಗಿರುವ ಎಲ್ಲ ಹದೀಸ್‌ಗಳಲ್ಲಿಯೂ ಏನಾದರೊಂದು ಕೊರತೆಯಿದೆ. ಆದ್ದರಿಂದ ಪೂರ್ವಜರ ಬಳಿ ಈ ಮೂರೂ ಕ್ರಮಗಳಿಗೆ ಮಾನ್ಯತೆಯಿತ್ತು ಎಂದು ಇಮಾಮ್ ತಿರ್ಮಿದಿ ಯವರು ಹೇಳುತ್ತಾರೆ. ಈ ಮೂರು ವಿಧದ ಹದೀಸ್‌ಗಳ ಪೈಕಿ ಒಂದೊಂದನ್ನು ಈ ಕೆಳಗೆ ಕೊಡಲಾಗಿದೆ-

1) "ನಾನು ಪ್ರವಾದಿವರ್ಯರನ್ನು(ಸ) ಬಲಕೈಯನ್ನು ಎಡಕೈಯ ಮಣಿಗಂಟಿನ ಮೇಲಿಟ್ಟು ಎದೆಯ ಮೇಲಿಡುವುದನ್ನು ಕಂಡಿರುವೆನು."

(ವರದಿ: ಹ. ಹಲಬ್ ತಾಈ(ರ)- ಅಹ್ಮದ್, ತಿರ್ಮಿದಿ)

ಇಮಾಮ್ ತಿರ್ಮಿದಿಯವರು ಈ ಹದೀಸನ್ನು 'ಹಸನ್'(ದ್ವಿತೀಯ ದರ್ಜೆಯ ಹದೀಸ್) ಎಂದಿರುವರು.

2) ಹ. ಅಲೀ(ರ) ಹೀಗೆ ಹೇಳಿರುವರು: "ಕೈಯನ್ನು ಕೈಯ ಮೇಲಿಟ್ಟು ನಾಭಿಯ ಕೆಳಗಿಡುವುದು ಸುನ್ನತ್ ಆಗಿದೆ."

(ವರದಿ: ಹ. ಅಬೂ ಜುಹೈಫಾ(ರ)- ಅಬೂ ದಾವೂದ್, ಅಹ್ಮದ್, ಇಬ್ನು ಅಬೀ ಶೈಬಾ, ದಾರಕುತ್ನಿ, ಬೈಹಕಿ)

ಈ ಹದೀಸ್‌ನ ವರದಿಗಾರರ ಪೈಕಿ ಒಬ್ಬರಾದ ಅಬ್ದುರ್ರಹ್ಮಾನ್ ಬಿನ್ ಇಸ್ಹಾಕ್ ವಾಸ್ತೀಯವರು(ರ) ಹದೀಸ್ ವರದಿಯ ಕುರಿತು 'ದುರ್ಬಲ ಹದೀಸ್' ಎಂದು ಪರಿಗಣಿಸಲ್ಪಡುತ್ತಾರೆ.

3) "ನಾನು ಹ. ಅಲೀಯವರು(ರ) ನಾಭಿಯ ಮೇಲೆ ಕೈ ಕಟ್ಟುವುದನ್ನು ಕಂಡಿರುವೆನು."

(ಹ. ಜರೀರುದ್ದಬ್ಬೀ(ರ)- ಅಬೂ ದಾವೂದ್)

ಈ ಹದೀಸ್‌ನ ಪರಂಪರೆಯು 'ಸಹೀಹ್' ಅಥವಾ 'ಹಸನ್' ಆಗಿದ್ದರೂ ಇದು ಹ. ಅಲೀಯವರ(ರ) ಕ್ರಿಯೆಯಾಗಿದೆ.

ಹನಫೀ ಕ್ರಮದಂತೆ ಪುರುಷರು ನಾಭಿಯ ಕೆಳಗೆ ಮತ್ತು ಸ್ತ್ರೀಯರು ಎದೆಯ ಮೇಲೆ ಕೈ ಕಟ್ಟಬೇಕು. ಶಾಫಿಈ ಕ್ರಮದಂತೆ ಸ್ತ್ರೀ ಪುರುಷರಿಬ್ಬರೂ ಎದೆಯ ಕೆಳಗೆ ನಾಭಿಯ ಮೇಲೆ ಸ್ವಲ್ಪ ಎಡಭಾಗಕ್ಕೆ ಕೈ ಕಟ್ಟಬೇಕು. (ಅಲ್ ಫಿಕ್ಹ್ ಅಲಾ ಮದಾಹಿಬಿಲ್ ಅರ್‌ಬಅ)

### 3. ಸೂರಃ ಫಾತಿಹಾದ ಮೊದಲು ದುಆ

ಈ ಕುರಿತು ಪ್ರವಾದಿವರ್ಯರಿಂದ(ಸ) ಏಳು ದುಆಗಳು ವರದಿಯಾಗಿವೆ. ಆ ಪೈಕಿ ಮೂರನ್ನು ಕೆಳಗೆ ಕೊಡಲಾಗಿದೆ-

1) "ಪ್ರವಾದಿವರ್ಯರು(ಸ) ನಮಾಝ್‌ಗಾಗಿ ಅಲ್ಲಾಹು ಅಕ್ಬರ್ ಎಂದ ಮೇಲೆ 'ಕಿರಾಅತ್' ಆರಂಭಿಸುವುದಕ್ಕಿಂತ ಮುಂಚೆ ಸ್ವಲ್ಪ ಹೊತ್ತು ಸುಮ್ಮನಿರುತ್ತಿದ್ದರು. ಒಂದು ದಿನ ನಾನು ವಿಚಾರಿಸಿದೆ- ಪ್ರವಾದಿವರ್ಯರೇ(ಸ)! ನನ್ನ ತಂದೆ-ತಾಯಿಗಳು ತಮಗೆ ಅರ್ಪಿತ. ತಕ್ಬೀರ್ ಮತ್ತು ಕಿರಾಅತ್‌ನ ಮಧ್ಯೆ ತಾವು ಮೌನವಾಗಿರುತ್ತೀರಿ. ಆಗ ತಾವು ಯಾವ ದುಆ ಪಠಿಸುತ್ತೀರಿ? ಆಗ ಪ್ರವಾದಿ(ಸ) ಹೇಳಿದರು. ನಾನು ಈ ದುಆ ಪಠಿಸುತ್ತೇನೆ"-

اَللّٰهُمَّ بَاعِدْ بَيْنِىْ وَ بَيْنَ خَطَايَاىَ كَمَا بَاعَدْتَ بَيْنَ الْمَشْرِقِ وَالْمَغْرِبِ اَللّٰهُمَّ نَقِّنِىْ مِنْ خَطَايَاىَ كَمَا يُنَقَّى الثَّوْبُ الْاَبْيَضُ مِنَ الدَّنَسِ۔ اَللّٰهُمَّ اغْسِلْنِى مِنْ خَطَايَاىَ بِالثَّلْجِ وَالْمَآءِ وَالْبَرْدِ۔

(بخاری، مسلم، ابوداود، نسائی، ابن ماجة)

"ಅಲ್ಲಾಹುಮ್ಮ ಬಾಇದ್ ಬೈನೀ ವ ಬೈನ ಖತಾಯಾಯ ಕಮಾ ಬಾಅತ್ತ ಬೈನಲ್ ಮಶ್ರಿಕಿ ವಲ್ ಮಗ್ರಿಬಿ ಅಲ್ಲಾಹುಮ್ಮ ನಕ್ಕಿನೀ ಮಿನ್ ಖತಾಯಾಯ ಕಮಾ ಯುನಕ್ಕಸ್ಸೌಬುಲ್ ಅಬ್‌ಯದು ಮಿನದ್ದನಸಿ. ಅಲ್ಲಾಹುಮ್ಮಗ್‌ಸಿಲ್ನೀ ಮಿನ್ ಖತಾಯಾಯ ಬಿಸ್ಸಲ್‌ಜಿ ವಲ್ ಮಾಇ ವಲ್ ಬರ್ದ್."

ಅರ್ಥ: ಓ ಅಲ್ಲಾಹ್! ನೀನು ಪೂರ್ವ ಮತ್ತು ಪಶ್ಚಿಮಗಳ ಮಧ್ಯೆ ಅಂತರವಿರಿಸಿದಂತೆ ನನ್ನ ಮತ್ತು ನನ್ನ ಪಾಪಗಳ ಮಧ್ಯೆ ಅಂತರವಿರಿಸು. ಓ ಅಲ್ಲಾಹ್! ಬಿಳಿ ಬಟ್ಟೆಯನ್ನು ಕೊಳೆಯಿಂದ ಶುದ್ಧಗೊಳಿಸುವಂತೆ ನನ್ನನ್ನು ನನ್ನ ಪಾಪಗಳಿಂದ ಶುದ್ಧಗೊಳಿಸು. ಓ ಅಲ್ಲಾಹ್! ನನ್ನ ಪಾಪಗಳನ್ನು ಮಂಜುಗಡ್ಡೆ, ನೀರು ಮತ್ತು ಇಬ್ಬನಿಯಿಂದತೊಳೆದುಬಿಡು.

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ಇಬ್ನು ಮಾಜ)

2) ಪ್ರವಾದಿವರ್ಯರು(ಸ) ನಮಾಝ್‌ಗೆ ನಿಂತಾಗ 'ಅಲ್ಲಾಹು ಅಕ್ಬರ್' ಹೇಳಿ ಈ ದುಆ ಪಠಿಸುತ್ತಿದ್ದರು:

وَجَّهْتُ وَجْهِيَ لِلَّذِي فَطَرَ السَّمٰوَاتِ وَالْاَرْضَ حَنِيْفاً وَّمَا اَنَا مِنَ الْمُشْرِكِينَ اِنَّ صَلَاتِي وَنُسُكِي وَمَحْيَايَ وَمَمَاتِي لِلّٰهِ رَبِّ الْعَالَمِينَ، لَا شَرِيْكَ لَهٗ وَ بِذٰلِكَ اُمِرْتُ وَاَنَا مِنَ الْمُسْلِمِينَ، اَللّٰهُمَّ اَنْتَ الْمَلِكُ لَا اِلٰهَ اِلَّا اَنْتَ، اَنْتَ رَبِّي وَاَنَا عَبْدُكَ ظَلَمْتُ نَفْسِي وَاعْتَرَفْتُ بِذَنْبِي فَاغْفِرْلِي ذُنُوبِي جَمِيْعًا۔ اِنَّهٗ لَا يَغْفِرُ الذُّنُوْبَ اِلَّا اَنْتَ وَاهْدِنِي لِاَحْسَنِ الْاَخْلَاقِ لَا يَهْدِي لِاَحْسَنِهَا اِلَّا اَنْتَ وَاصْرِفْ عَنِّي سَيِّئَهَا لَا يَصْرِفُ عَنِّي سَيِّئَهَا اِلَّا اَنْتَ لَبَّيْكَ وَسَعْدَيْكَ وَالْخَيْرُ كُلُّهٗ فِي يَدَيْكَ وَالشَّرُّ لَيْسَ اِلَيْكَ وَاَنَا بِكَ وَاِلَيْكَ۔ تَبَارَكْتَ وَتَعَالَيْتَ۔ اَسْتَغْفِرُكَ وَاَتُوبُ اِلَيْكَ (احمد، مسلم، ترمذی،ابوداود، نسائی، ابن ماجة)

"ವಜ್ಜಹ್ತು ವಜ್‌ಹಿಯ ಲಿಲ್ಲದೀ ಫತರಸ್ಸಮಾವಾತಿ ವಲ್ ಅರ್ದ ಹನೀಫನ್ ವಮಾ ಅನ ಮಿನಲ್ ಮುಶ್ರಿಕೀನ್. ಇನ್ನ ಸಲಾತೀ ವನುಸುಕೀ ವಮಹ್ಯಾಯ ವಮಮಾತೀ ಲಿಲ್ಲಾಹಿ ರಬ್ಬಿಲ್ ಆಲಮೀನ್. ಲಾ ಶರೀಕ ಲಹೂ ವಬಿದಾಲಿಕ ಉಮಿರ್ತು ವ ಅನ ಮಿನಲ್

ಮುಸ್ಲಿಮೀನ್. ಅಲ್ಲಾಹುಮ್ಮ ಅಂತಲ್ ಮಲಿಕು ಲಾ ಇಲಾಹ ಇಲ್ಲಾ ಅಂತ. ಅಂತ ರಬ್ಬೀ ವಅನ ಅಬ್ದುಕ. ಝಲಮ್ತು ನಫ್ಸೀ ವಅ್ತರಫ್ತು ಬಿ ದನ್ಬೀ ಫಗ್‌ಫಿರ್‌ಲೀ ದುನೂಬೀ ಜಮೀಅ, ಇನ್ನಹು ಲಾ ಯಗ್‌ಫಿರು ದ್ದುನೂಬ ಇಲ್ಲಾ ಅಂತ. ವಹ್ದಿನೀ ಬಿಅಹ್ಸನಿಲ್ ಅಖ್ಲಾಕಿ ಲಾ ಯಹ್ದೀ ಲಿಅಹ್ಸನಿಹಾ ಇಲ್ಲಾ ಅಂತ. ವಸ್ರಿಫ್ ಅನ್ನೀ ಸಯ್ಯಿಅಹಾ. ಲಾ ಯಸ್ರಿಫು ಅನ್ನೀ ಸಯ್ಯಿಅಹಾ ಇಲ್ಲಾ ಅಂತ. ಲಬ್ಬೈಕ ವಸಅ್ದೈಕ ವಲ್‌ಖೈರು ಕುಲ್ಲುಹೂ ಫೀ ಯದೈಕ ವಶ್ಶರ್ರು ಲೈಸ ಇಲೈಕ ವ ಅನಬಿಕ ವ ಇಲೈಕ. ತಬಾರಕ್ತ ವ ತಆಲೈತ. ಅಸ್ತಗ್ಫಿರುಕ ವ ಅತೂಬು ಇಲೈಕ.''

ಅರ್ಥ: ನಾನು ಏಕಾಗ್ರಚಿತ್ತನಾಗಿ ನನ್ನ ಮುಖವನ್ನು ಭೂಮಿ-ಆಕಾಶಗಳ ಸೃಷ್ಟಿಕರ್ತನತ್ತ ತಿರುಗಿಸಿದೆ. ನಾನು ಬಹುದೇವ ವಿಶ್ವಾಸಿಗಳಲ್ಲಿ ಸೇರಿಲ್ಲ. ನನ್ನ ನಮಾಝ್, ನನ್ನ ಬಲಿದಾನ, ನನ್ನ ಜೀವನ, ನನ್ನ ಮರಣ, ಸರ್ವಲೋಕ ಪರಿಪಾಲಕನಾದ ಅಲ್ಲಾಹನಿಗಾಗಿದೆ. ಅವನಿಗಾರೂ ಭಾಗೀದಾರರಿಲ್ಲ. ನನಗೆ ಅದನ್ನೇ ಆಜ್ಞಾಪಿಸಲಾಗಿದೆ. ನಾನು ಮುಸ್ಲಿಮರಲ್ಲಾಗಿರುವೆನು. ಓ ಅಲ್ಲಾಹ್! ಸಾಮ್ರಾಟನು ನೀನೇ. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನು ನನ್ನ ಪ್ರಭು ಮತ್ತು ನಾನು ನಿನ್ನ ದಾಸನಾಗಿರುವೆ. ನಾನು ನನ್ನ ಮೇಲೆ ಅಕ್ರಮವೆಸಗಿರುವೆನು. ನಾನು ನನ್ನ ಪಾಪಗಳನ್ನು ಒಪ್ಪಿಕೊಳ್ಳುತ್ತೇನೆ. ಆದ್ದರಿಂದ ನೀನು ನನ್ನೆಲ್ಲ ಪಾಪಗಳನ್ನು ಕ್ಷಮಿಸಿಬಿಡು. ನಿನ್ನ ಹೊರತು ಇನ್ನಾರೂ ಪಾಪಗಳನ್ನು ಕ್ಷಮಿಸುವವರಿಲ್ಲ. ನನಗೆ ಅತ್ಯುತ್ತಮ ಚಾರಿತ್ರ್ಯದ ಭಾಗ್ಯ ನೀಡು. ನಿನ್ನ ಹೊರತು ಅತ್ಯುತ್ತಮ ಚಾರಿತ್ರ್ಯದ ಭಾಗ್ಯ ನೀಡುವವರು ಯಾರೂ ಇಲ್ಲ. ನನ್ನಿಂದ ಕೆಟ್ಟ ಚಾರಿತ್ರ್ಯವನ್ನು ದೂರ ಮಾಡು. ನಿನ್ನ ಹೊರತು ಬೇರೆ ಯಾರೂ ನನ್ನಿಂದ ಕೆಟ್ಟ ಚಾರಿತ್ರ್ಯವನ್ನು ನೀಗಿಸಲಾರ. ನಾನು ನಿನ್ನ ಕರೆಗೆ ಓಗೊಡುತ್ತೇನೆ. ಎಲ್ಲ ಒಳಿತುಗಳೂ ನಿನ್ನ ಕೈಯಲ್ಲೇ ಇವೆ. ಕೆಡುಕನ್ನು ನಿನ್ನ ಕಡೆಗೆ ಸಂಬಂಧಿಸಲು ಸಾಧ್ಯವಿಲ್ಲ. ನಾನು ನಿನ್ನಿಂದಲೇ ಆಗಿರುವೆನು. ನಿನಗೆ ನಿಕಟವಾಗ ಬಯಸುತ್ತೇನೆ. ನೀನು ಪರಿಶುದ್ಧನು. ನೀನು ಉನ್ನತನು. ನಾನು ನಿನ್ನಿಂದ ನನ್ನ ಪಾಪಗಳಿಗೆ ಕ್ಷಮೆ ಯಾಚಿಸುತ್ತೇನೆ ಮತ್ತು ನಿನ್ನ ಮುಂದೆ ಪಶ್ಚಾತ್ತಾಪ ಪಡುತ್ತೇನೆ.

(ವರದಿ: ಹ. ಅಲೀ(ರ)- ಅಹ್ಮದ್, ಮುಸ್ಲಿಮ್, ತಿರ್ಮಿದಿ, ಅಬೂ ದಾವೂದ್, ನಸಾಈ, ಇಬ್ನು ಮಾಜಃ)

3) ಹ. ಉಮರ್(ರ) 'ಅಲ್ಲಾಹು ಅಕ್ಬರ್' ಎಂದು ಹೇಳಿದ ಬಳಿಕ ಈ ದುಆ ಪಠಿಸುತ್ತಿದ್ದರು:

سُبْحَانَكَ اللّٰهُمَّ وَبِحَمْدِكَ وَتَبَارَكَ اسْمُكَ وَتَعَالٰى جَدُّكَ وَلَا اِلٰهَ غَيْرُكَ

(مسلم، دارقطنی، ترمذی)

''ಸುಬ್‌ಹಾನಕಲ್ಲಾಹುಮ್ಮ ವಬಿಹಮ್ದಿಕ ವತಬಾರಕಸ್ಮುಕ ವತಆಲಾ ಜದ್ದುಕ ವಲಾ ಇಲಾಹ ಗೈರುಕ.''

ಅರ್ಥ: ನೀನು ಪರಮ ಪಾವನನು. ನಾನು ನಿನ್ನ ಸ್ತುತಿ ಸ್ತೋತ್ರ ಮಾಡುತ್ತೇನೆ. ನಿನ್ನ ಹೆಸರು ಮಂಗಳದಾಯಕವಾಗಿದೆ. ನಿನ್ನ ಮಹಿಮೆ ಮತ್ತು ಗರಿಮೆ ಉನ್ನತವಾಗಿದೆ ಮತ್ತು ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. (ಮುಸ್ಲಿಮ್, ದಾರಕುತ್ನಿ, ತಿರ್ಮಿದಿ)

ಇಮಾಮ್ ಇಬ್ನು ಕಯ್ಯಿಮ್‌ರವರು(ರ) ಹೀಗೆ ಬರೆದಿರುವರು: "ಹ. ಉಮರ್‌ರವರು(ರ) ಪ್ರವಾದಿವರ್ಯರ(ಸ) ಸ್ಥಾನದಲ್ಲಿ ನಮಾಝ್ ಮಾಡುತ್ತಿರುವಾಗ ಮೇಲಿನ ದುಆ ಪಠಿಸುತ್ತಿದ್ದರು. ಅದನ್ನು ಉಚ್ಚಸ್ವರದಲ್ಲಿ ಪಠಿಸುತ್ತಿದ್ದರು ಮತ್ತು ಜನರಿಗೆ ಅದನ್ನು ಕಲಿಸಿ ಕೊಡುತ್ತಿದ್ದರು." ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಇದೇ ದುಆ ಸುನ್ನತ್ ಆಗಿದೆ. ಇಮಾಮ್ ಶಾಫಿಈಯವರು(ರ) "ವಜ್ಜಹ್ತು..." ಪಠಿಸಬೇಕೆಂದಿರುವರು.

(ಅಲ್ ಫಿಕ್ಹ್ ಅಲಾ ಮದಾಹಿಬಲ್ ಅರ್‌ಬಅ- ಭಾಗ-1, ಪುಟ:235)

**4. 'ಅಊದುಬಿಲ್ಲಾಹ್' ಪಠಿಸುವುದು:** ಮೇಲಿನ ದುಆದ ನಂತರ 'ಅಊದುಬಿಲ್ಲಾಹ್' ಓದುವುದು ಸುನ್ನತ್ ಆಗಿದೆ. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಹೇಳಿರುವನು:

**"ನೀವು ಕುರ್‌ಆನನ್ನು ಪಠಿಸಲಾರಂಭಿಸುವಾಗ ಶಪಿತ ಶೈತಾನನಿಂದ ಅಲ್ಲಾಹನ ಅಭಯ ಯಾಚಿಸಿಕೊಳ್ಳಿರಿ."** **(ಪವಿತ್ರ ಕುರ್‌ಆನ್, 16:98)**

"ದುಆದ ಬಳಿಕ ಪ್ರವಾದಿ(ಸ)

اَللّٰهُمَّ اَعُوذُ بِكَ مِنَ الشَّيْطَانِ الرَّجِيمِ

'ಅಲ್ಲಾಹುಮ್ಮ ಅಊದುಬಿಕ ಮಿನಶ್ಶೈತಾನಿರ್ರಜೀಮ್' ಓದಿದರು."

(ವರದಿ: ಹ. ನಾಫಿಅ್ ಬಿನ್ ಜುಬೈರ್(ರ)- ಅಹ್ಮದ್, ಅಬೂ ದಾವೂದ್, ಇಬ್ನು ಮಾಜಃ, ಇಬ್ನು ಹಿಬ್ಬಾನ್)

ಹನಫೀ ಕರ್ಮಶಾಸ್ತ್ರದಂತೆ ಕೇವಲ ಪ್ರಥಮ ರಕಅತ್‌ನಲ್ಲಿ 'ಅಊದುಬಿಲ್ಲಾಹ್' ಪಠಿಸಬೇಕು. ಇಮಾಮ್ ಶಾಫಿಈಯವರ(ರ) ಪ್ರಕಾರ ಪ್ರತಿಯೊಂದು ರಕಅತ್‌ನಲ್ಲಿ 'ಅಊದುಬಿಲ್ಲಾಹ್' ಪಠಿಸಬೇಕು.

**5. ಆಮೀನ್:** ಪ್ರತಿಯೊಬ್ಬ ನಮಾಝ್ ಮಾಡುವವನು ಅವನು ಒಬ್ಬಂಟಿಯಾಗಿ ನಮಾಝ್ ಮಾಡುತ್ತಿರಲಿ, ಸಾಮೂಹಿಕವಾಗಿ ಮಾಡುತ್ತಿರಲಿ, ಇಮಾಮ್ ಆಗಿರಲಿ, ಹಿಂಬಾಲಕನಾಗಿರಲಿ- ಸೂರಃ ಫಾತಿಹಾದ ಅಂತ್ಯದಲ್ಲಿ آمِين (ಆಮೀನ್) ಹೇಳಬೇಕಾದುದು ಸುನ್ನತ್ ಆಗಿದೆ. 'ಆಮೀನ್'ನ ಅರ್ಥ 'ಅಲ್ಲಾಹನೇ! ಇದನ್ನು ಸ್ವೀಕರಿಸು' ಎಂದಾಗಿದೆ. ನಮಾಝ್ ರಹಸ್ಯ ವಾಚನದ್ದಾಗಿದ್ದರೆ ಆಮೀನ್ ಕೂಡಾ ಮೆಲುದನಿಯಲ್ಲಿ ಹೇಳಬೇಕು. ನಮಾಝ್ ಉಚ್ಚ ಸ್ವರದ್ದಾಗಿದ್ದರೆ 'ಆಮೀನ್' ಉಚ್ಚ ಸ್ವರದಲ್ಲಿ ಹೇಳಬೇಕು.

"ನಾನು ಹ. ಅಬೂ ಹುರೈರಾರ(ರ) ಹಿಂದೆ ನಮಾಝ್ ಮಾಡಿದಾಗ ಅವರು ಮೊದಲು 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' ಓದಿದ ನಂತರ ಸೂರಃ ಫಾತಿಹಾ ಪಠಿಸಿದರು. ಅವರು 'ವಲದ್ದಾಲ್ಲೀನ್'ಗೆ ತಲುಪಿದಾಗ 'ಆಮೀನ್' ಎಂದರು. ಜನರೂ 'ಆಮೀನ್' ಎಂದರು. ಸಲಾಮ್ ಹೇಳಿದ ಬಳಿಕ ಅಬೂ ಹುರೈರಾ(ರ) ಹೇಳಿದರು: ನನ್ನ ಪ್ರಾಣವು ಯಾರ ವಶದಲ್ಲಿದೆಯೋ ಆತನಾಣೆ! ನಿಮ್ಮೆಲ್ಲರಿಗಿಂತ ನನ್ನ ನಮಾಝ್ ಪ್ರವಾದಿವರ್ಯರ(ಸ) ನಮಾಝ್‌ಗೆ ಹೆಚ್ಚು ಹೋಲುತ್ತದೆ."

(ವರದಿ: ನಈಮುಲ್ ಮುಜ್ಮರ್(ರ)- ಬುಖಾರಿ, ನಸಾಈ,
ಇಬ್ನು ಖುಝೈಮ, ಇಬ್ನು ಹಿಬ್ಬಾನ್, ಇಬ್ನು ಶಿಹಾಬ್)

ಅತಾ(ರ) ಹೀಗೆ ಹೇಳಿರುವರು: "ನಾನು ಅದೇ ಮಸೀದಿಯಲ್ಲಿ 200 ಮಂದಿ ಸಹಾಬಿಗಳನ್ನು ಕಂಡಿದ್ದೇನೆ. ಇಮಾಮರು 'ವಲದ್ದಾಲ್ಲೀನ್' ಎಂದಾಗ ನನಗೆ ಅವರ 'ಆಮೀನ್' ಧ್ವನಿ ಜೋರಾಗಿ ಕೇಳಿಸುತ್ತಿತ್ತು."

ಹಿಂಬಾಲಕರು ಇಮಾಮರ ಜೊತೆಯೇ ಆಮೀನ್ ಹೇಳಬೇಕು. ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು: "ಇಮಾಮ್ 'ಆಮೀನ್' ಹೇಳುವಾಗ ನೀವೂ ಹೇಳಿರಿ. ಏಕೆಂದರೆ ಯಾರ 'ಆಮೀನ್'ನ ಜೊತೆಗೆ ಮಲಕ್‌ಗಳ ಆಮೀನ್ ಸೇರಿರುವುದೋ ಅವನ ಹಿಂದಿನೆಲ್ಲ ಪಾಪಗಳು ಕ್ಷಮಿಸಲ್ಪಟ್ಟುವು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್,
ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

'ಆಮೀನ್' ಹೇಳುವ ಬಗ್ಗೆ ಕರ್ಮಶಾಸ್ತ್ರದಲ್ಲಿ ಭಿನ್ನಾಭಿಪ್ರಾಯವಿಲ್ಲ. ಶಾಫಿಈ ಮತ್ತು ಅಹ್ಲುಲ್ ಹದೀಸ್ ಉಲಮಾಗಳ ಅಭಿಪ್ರಾಯದಂತೆ ಬಹಿರಂಗ ನಮಾಝ್‌ಗಳಲ್ಲಿ ಆಮೀನ್ ಉಚ್ಚಸ್ವರದಲ್ಲಿ ಹೇಳಬೇಕು. ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಎಲ್ಲ ನಮಾಝ್‌ಗಳಲ್ಲೂ ಮೆಲುದನಿಯಲ್ಲೇ ಹೇಳಬೇಕು. ಏಕೆಂದರೆ ಅನೇಕ ಕುರ್‌ಆನ್ ವಚನ ಮತ್ತು ಪ್ರವಾದಿ ವಚನಗಳಲ್ಲಿ ಅಲ್ಲಾಹನನ್ನು ಮೆಲುದನಿಯಲ್ಲಿ ಕರೆಯುವುದಕ್ಕೆ ಮಹತ್ವ ನೀಡಲಾಗಿದೆ.

**6. ಫಾತಿಹಾದ ನಂತರ ಕುರ್‌ಆನಿನ ಸ್ವಲ್ಪ ಭಾಗ ಓದುವುದು:** ಫಜ್ರ್ ಮತ್ತು ಜುಮಾದ ಎರಡೂ ರಕಅತ್‌ಗಳಲ್ಲಿ, ಝುಹರ್, ಅಸರ್, ಮಗ್ರಿಬ್ ಮತ್ತು ಇಶಾದ ಪ್ರಥಮ ಎರಡು ರಕಅತ್‌ಗಳಲ್ಲಿ ವಿತ್ರ್, ಸುನ್ನತ್ ಮತ್ತು ನಫಿಲ್ ನಮಾಝ್‌ಗಳ ಎಲ್ಲ ರಕಅತ್‌ಗಳಲ್ಲಿ ಸೂರಃ ಫಾತಿಹಾದ ನಂತರ ಕುರ್‌ಆನಿನ ಯಾವುದಾದರೂ ಸೂರಃ ಅಥವಾ ಕೆಲವು ಆಯತ್‌ಗಳನ್ನು ಪಠಿಸುವುದು ಸುನ್ನತ್ ಆಗಿದೆ. ಈ ಬಗ್ಗೆ ಅನೇಕ ಹದೀಸ್‌ಗಳಿವೆ.

"ಸೂರಃ ಫಾತಿಹಾ ಓದಬೇಕು ಮತ್ತು ಅದರ ಜೊತೆಗೆ ಕುರ್‌ಆನಿನ ಯಾವ ಭಾಗವು ನಿಮಗೆ ಸುಲಭವಾಗಿದೆಯೋ ಅದನ್ನು ಓದಬೇಕೆಂದು ನಮಗೆ ಆದೇಶಿಸಲಾಗಿದೆ."

(ವರದಿ: ಹ. ಅಬೂ ಸಈದ್(ರ)- ಅಬೂ ದಾವೂದ್)

"ಪ್ರವಾದಿವರ್ಯರು(ಸ) ಝುಹರ್ ನಮಾಝ್‌ನ ಮೊದಲ ಎರಡು ರಕಅತ್‌ಗಳಲ್ಲಿ ಸೂರಃ ಫಾತಿಹಾ ಮತ್ತು ಎರಡು ಸೂರಃಗಳನ್ನು ಓದುತ್ತಿದ್ದರು. ಕೊನೆಯ ಎರಡು ರಕಅತ್ ಗಳಲ್ಲಿ (ಕೇವಲ) ಸೂರಃ ಫಾತಿಹಾ ಓದುತ್ತಿದ್ದರು. ಕೆಲವೊಮ್ಮೆ ನಮಗೆ ಯಾವುದಾದರೂ ಸೂರಃ ಓದಿ ಹೇಳುತ್ತಿದ್ದರು. ಪ್ರವಾದಿ(ಸ) ಮೊದಲನೆಯ 'ರಕಅತ'ನ್ನು ಎರಡನೆಯ ರಕಅತ್ ಗಿಂತ ದೀರ್ಘಗೊಳಿಸುತ್ತಿದ್ದರು. ಇದೇ ರೀತಿ ಅಸರ್ ಮತ್ತು ಫಜ್ರ್ ನಮಾಝ್‌ಗಳಲ್ಲಿಯೂ ಪ್ರವಾದಿ(ಸ) ಮೊದಲನೆಯ ರಕಅತನ್ನು ಎರಡನೆಯ ರಕಅತ್‌ಗಿಂತ ದೀರ್ಘಗೊಳಿಸುತ್ತಿದ್ದರು."

(ವರದಿ: ಹ. ಅಬೂ ಕತಾದ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್)

## ಕಿರಾಅತ್‌ನ ಕುರಿತು ಕೆಲವು ನಿಯಮಗಳು

1) ಹಾಫಿಝ್ ಇಬ್ನು ಕಯ್ಯಿಮ್‌ರವರು(ರ) ತಮ್ಮ 'ಝಾದುಲ್ ಮಆದ್' ಎಂಬ ಗ್ರಂಥದಲ್ಲಿ ಫಾತಿಹಾದ ನಂತರದ ಕಿರಾಅತ್‌ನ ಕುರಿತು ಬಹಳ ದೀರ್ಘವಾಗಿ ಚರ್ಚಿಸಿದ್ದಾರೆ. ಅದರ ಸಾರಾಂಶ ಈ ಕೆಳಗಿನಂತಿದೆ:

ಫಜ್ರ್ ನಮಾಝ್‌ನಲ್ಲಿ ಪ್ರವಾದಿ(ಸ) ಸಾಮಾನ್ಯವಾಗಿ 60ರಿಂದ 100ರ ವರೆಗಿನ ಆಯತ್‌ಗಳನ್ನು ಪಠಿಸುತ್ತಿದ್ದರು. ಎರಡೂ ರಕಅತ್‌ಗಳಲ್ಲಿ ಅವರು(ಸ) ಸೂರಃ ಕಾಫ್, ಸೂರಃ ರೂಮ್, ಸೂರಃ ಅಶ್ಶಮ್ಸ್, ಸೂರಃ ಅಝ್ಝಿಲ್‌ಝಾಲ್ ಪಠಿಸುತ್ತಿದ್ದರು. ಒಮ್ಮೆ ಪ್ರಯಾಣದಲ್ಲಿ ಪ್ರವಾದಿ(ಸ) ಫಜ್ರ್ ನಮಾಝ್‌ನಲ್ಲಿ ಸೂರಃ ಅಲ್ ಫಲಕ್ ಮತ್ತು ಸೂರಃ ಅನ್ನಾಸ್ ಓದಿದರು. ಒಮ್ಮೆ ಅವರು ಸೂರಃ ಅಲ್ ಮೂಮಿನೂನ್‌ನಿಂದ ನಮಾಝ್ ಆರಂಭಿಸಿದರು. ಹ. ಮೂಸಾ(ಅ) ಮತ್ತು ಹ. ಹಾರೂನ್‌ರ(ಅ) ಪ್ರಸ್ತಾಪ ಬಂದಾಗ ಅವರಿಗೆ(ಸ) ಕೆಮ್ಮು ಬಂತು. ಆಗ ಅವರು(ಸ) ರುಕೂಅ್ ಮಾಡಿದರು. ಶುಕ್ರವಾರ ಫಜ್ರ್ ನಮಾಝ್ ನಲ್ಲಿ ಪ್ರವಾದಿ(ಸ) ಸೂರಃ 'ಅಸ್ಸಜ್‌ದಃ' ಮತ್ತು ಸೂರಃ 'ಅದ್ದಹ್ರ್' ಪಠಿಸುತ್ತಿದ್ದರು.

ಝುಹರ್ ನಮಾಝ್‌ನಲ್ಲಿ ಒಮ್ಮೊಮ್ಮೆ ಪ್ರವಾದಿ(ಸ) ದೀರ್ಘ ಕಿರಾಅತ್ ಓದುತ್ತಿದ್ದರು. ಕೆಲವೊಮ್ಮೆ ಅವರು 'ಅಸ್ಸಜ್‌ದಃ', 'ಅಲ್ಲೈಲ್', ಅಲ್ ಬುರೂಜ್, ಅತ್ತಾರಿಕ್ ಸೂರಃಗಳನ್ನು ಪಠಿಸುತ್ತಿದ್ದರು.

ಪ್ರವಾದಿವರ್ಯರ(ಸ) ಅಸರ್ ನಮಾಝ್ ಸಾಮಾನ್ಯವಾಗಿ ಝುಹರ್ ನಮಾಝ್‌ನ ಅರ್ಧ(ಝುಹರ್ ನಮಾಝ್ ದೀರ್ಘವಾಗಿದ್ದರೆ) ಅಥವಾ ಅದರಷ್ಟೇ ಆಗಿರುತ್ತಿತ್ತು.

ಮಗ್ರಿಬ್‌ನಲ್ಲಿಯೂ ಪ್ರವಾದಿವರ್ಯರು(ಸ) ದೀರ್ಘ ಕಿರಾಅತ್ ಮಾಡುತ್ತಿದ್ದರು. ಅವರು(ಸ) ಅಲ್ ಅಅ್‌ರಾಫ್ (ಎರಡು ರಕಅತ್‌ಗಳಲ್ಲಿ) ಅತ್ತೂರ್, ಅಲ್ ಮುರ್‌ಸಲಾತ್ ನಂತಹ ಸೂರಃಗಳನ್ನು ಪಠಿಸುತ್ತಿದ್ದರು. ಅಲ್ಲಾಮಾ ಇಬ್ನು ಅಬ್ದುಲ್ ಬರ್‌ರವರ(ರ) ಪ್ರಕಾರ ಪ್ರವಾದಿ(ಸ) ಮಗ್ರಿಬ್ ನಮಾಝ್‌ನಲ್ಲಿ ಅಲ್ ಅಅ್‌ರಾಫ್, ಅಸ್ಸಾಫ್ಫಾತ್, ಹಾಮೀಮ್ ಅಸ್ಸಜ್‌ದಃ, ಅದ್ದುಖಾನ್, ಅಲ್ ಅಅ್‌ಲಾ, ಅಲ್ ಮುರ್‌ಸಲಾತ್ ಸೂರಃಗಳನ್ನು ಪಠಿಸುತ್ತಿದ್ದರು. ಪ್ರವಾದಿ(ಸ) ಮಗ್ರಿಬ್ ನಮಾಝ್‌ನಲ್ಲಿ ಚಿಕ್ಕ ಸೂರಃಗಳನ್ನೂ ಪಠಿಸುತ್ತಿದ್ದರು.

ಆದರೆ ಮಗ್ರಿಬ್ ನಮಾಝ್‌ನಲ್ಲಿ ಕೇವಲ ಚಿಕ್ಕ ಸೂರಃಗಳನ್ನೇ ಪಠಿಸುವ ಕ್ರಮವು ಸುನ್ನತ್‌ಗೆ ವ್ಯತಿರಿಕ್ತವಾಗಿದ್ದು ಅದನ್ನು ಮರ್ವಾನ್ ಬಿನ್ ಹಕಮ್ ಜಾರಿಗೆ ತಂದನು.

ಇಶಾ ನಮಾಝ್‌ನಲ್ಲಿ ಪ್ರವಾದಿವರ್ಯರು(ಸ) 'ಅತ್ತೀನ್' ಓದಿದರು. ಹಾಗೂ ಹ. ಮುಆದ್‌ರಿಗೆ(ರ) ಹೀಗೆ ಆದೇಶಿಸಿದರು- "ಇಶಾ ನಮಾಝ್‌ನ ಕಿರಾಅತ್‌ನ ಸಮಯವು 'ಅಶ್ಶಮ್ಸ್', 'ಅಲ್ ಅಅ್‌ಲಾ', 'ಅಲ್ಲೈಲ್' ಇತ್ಯಾದಿ ಸೂರಃಗಳಿಗೆ ಸಮಾನವಾಗಿದೆ."

ಜುಮಾ ಮತ್ತು ಈದ್‌ನ ಹೊರತು ಇತರ ನಮಾಝ್‌ಗಳಲ್ಲಿ ಪ್ರವಾದಿ(ಸ) ಒಂದು ಅಥವಾ ಕೆಲವು ನಿರ್ದಿಷ್ಟ ಸೂರಃಗಳನ್ನೇ ಯಾವಾಗಲೂ ಪಠಿಸುತ್ತಿರಲಿಲ್ಲ.

"ದೊಡ್ಡ ಅಥವಾ ಚಿಕ್ಕ ಸೂರಃಗಳ ಪೈಕಿ ಯಾವ ಸೂರಃವನ್ನೂ ಪ್ರವಾದಿವರ್ಯರು(ಸ) ಫರ್ಝ್ ನಮಾಝ್‌ಗಳಲ್ಲಿ ಓದುತ್ತಿರುವುದನ್ನು ನಾನು ಕೇಳದೆ ಇರಲಿಲ್ಲ."

(ವರದಿ: ಹ. ಅಮ್ರ್ ಬಿನ್ ಶುಐಬ್(ರ)- ಅವರ ತಂದೆಯಿಂದ - ಅವರು ಅವರ ತಂದೆಯಿಂದ: ಅಬೂ ದಾವೂದ್)

ಪ್ರವಾದಿವರ್ಯರು(ಸ) ಪೂರ್ಣ ಸೂರಃ ಪಠಿಸುತ್ತಿದ್ದರು. ಕೆಲವೊಮ್ಮೆ ಒಂದು ಸೂರಃವನ್ನು ಎರಡು ರಕಅತ್‌ಗಳಲ್ಲಿ ಪಠಿಸುತ್ತಿದ್ದರು. ಕೆಲವೊಮ್ಮೆ ಯಾವುದಾದರೂ ಸೂರಃದ ಆರಂಭದ ಭಾಗವನ್ನು ಓದುತ್ತಿದ್ದರು. ಸೂರಃದ ಮಧ್ಯಭಾಗದ ಮತ್ತು ಕೊನೆಯ ಆಯತ್‌ಗಳನ್ನು ಪಠಿಸುವ ಕ್ರಮ ಪ್ರವಾದಿವರ್ಯರಿಂದ ಸಾಬೀತುಗೊಂಡಿಲ್ಲ.

ಪ್ರವಾದಿವರ್ಯರ(ಸ) ಫಜ್ರ್ ನಮಾಝ್ ಉಳಿದೆಲ್ಲ ನಮಾಝ್‌ಗಳಿಗಿಂತ ದೀರ್ಘ ವಾಗಿರುತ್ತಿತ್ತು. ಅವರು(ಸ) ಪ್ರತಿಯೊಂದು ಆಯತನ್ನು ನಿಲ್ಲಿಸಿ ನಿಲ್ಲಿಸಿ ಉಚ್ಚಸ್ವರದಿಂದ ಓದುತ್ತಿದ್ದರು. ಪದಗಳನ್ನು ದೀರ್ಘಮಾಡಿ ಪಠಿಸುತ್ತಿದ್ದರು.

2) ಕಿರಾಅತ್ ಸುಶ್ರಾವ್ಯವಾಗಿ ಓದುವುದು ಉತ್ತಮ. ಪ್ರವಾದಿ(ಸ) ಈ ರೀತಿ ಆದೇಶಿಸಿರುವರು:

"ಕುರ್‌ಆನ್ ಓದುವಾಗ ನಿಮ್ಮ ಸ್ವರವನ್ನು ಸುಂದರವಾಗಿಸಿರಿ."

"ಕುರ್‌ಆನನ್ನು ರಾಗವಾಗಿ ಓದದವನು ನಮ್ಮವನಲ್ಲ."

"ನಿಮಗೆ ಕೇಳಿದಾಗ ಅವನು ಅಲ್ಲಾಹನನ್ನು ಭಯ ಪಡುತ್ತಾನೋ ಎಂದು ಭಾಸವಾಗು ವಂತಹವನ ಸ್ವರವು ಕುರ್‌ಆನ್ ಪಠಿಸುವವರ ಪೈಕಿ ಅತ್ಯುತ್ತಮ ಸ್ವರವಾಗಿದೆ."

ನಫಿಲ್ ನಮಾಝ್‌ಗಳಲ್ಲಿ ಕುರ್‌ಆನ್ ಓದುವಾಗ ಅಲ್ಲಾಹನ ಕರುಣೆಯ ಪ್ರಸ್ತಾಪ ಬಂದರೆ ಅವನ ಅನುಗ್ರಹವನ್ನು ಅರಸುವುದು, ಅಲ್ಲಾಹನ ಶಿಕ್ಷೆಯ ಪ್ರಸ್ತಾಪ ಬಂದಾಗ ಅವನ ಅಭಯ ಯಾಚಿಸುವುದು. ಅಲ್ಲಾಹನ ಹಿರಿಮೆ-ಗರಿಮೆಗಳ ಪ್ರಸ್ತಾಪ ಬಂದಾಗ 'ಸುಬ್ಹಾನಲ್ಲಾಹ್' ಅಥವಾ 'ತಬಾರಕಲ್ಲಾಹು ರಬ್ಬುಲ್ ಆಲಮೀನ್' ಎನ್ನುವುದು ಸುನ್ನತ್ ಆಗಿದೆ. (ಅಲ್ ಮುಗ್ನಿ- ಭಾಗ-1, ಪುಟ: 587)

"ಒಂದು ರಾತ್ರಿ ನಾನು ಪ್ರವಾದಿವರ್ಯರ(ಸ) ಜೊತೆ ನಮಾಝ್‌ಗೆ ನಿಂತಿದ್ದೆ. ಪ್ರವಾದಿ(ಸ) ಸೂರಃ ಅಲ್ ಬಕರಃ ಆರಂಭಿಸಿದರು. ನೂರು ಆಯತ್ ಓದಿ ರುಕೂಅ್ ಮಾಡಬಹುದೆಂದು ನಾನು ಭಾವಿಸಿದ್ದೆ. ಆದರೆ ಪ್ರವಾದಿ(ಸ) ಓದುತ್ತಲೇ ಇದ್ದರು. ಸೂರಃ ಮುಗಿಸಿ ರುಕೂಅ್ ಮಾಡಬಹುದೆಂದು ನಾನು ಭಾವಿಸಿದ್ದೆ. ಆದರೆ ಅವರು(ಸ) ಸೂರಃ ಆಲಿ ಇಮ್ರಾನ್ ಆರಂಭಿಸಿದರು. ಅದನ್ನು ಮುಗಿಸಿ ಸೂರಃ ಅನ್ನಿಸಾ ಆರಂಭಿಸಿದರು. ಪ್ರವಾದಿ(ಸ) ಸಾವಧಾನವಾಗಿ ನಿಲ್ಲಿಸಿ ನಿಲ್ಲಿಸಿ ಪಠಿಸುತ್ತಿದ್ದರು. ತಸ್ಬೀಹ್‌ನ ಆಯತ್ ಬಂದಾಗ 'ಸುಬ್ಹಾನಲ್ಲಾಹ್' ಎನ್ನುತ್ತಿದ್ದರು. ಕೋರಿಕೆಯ ಆಯತ್ ಬಂದಾಗ ಪ್ರಾರ್ಥಿಸುತ್ತಿದ್ದರು. ಅಭಯ ಯಾಚಿಸುವ ಆಯತ್ ಬಂದಾಗ ಅಭಯ ಯಾಚಿಸುತ್ತಿದ್ದರು.

(ವರದಿ: ಹ. ಹುಝೈಫಾ ಬಿನ್ ಯಮಾನ್(ರ)- ಮುಸ್ಲಿಮ್)

ಈ ತಸ್ಬೀಹ್, ಪ್ರಾರ್ಥನೆ ಮತ್ತು ಅಭಯ ಯಾಚನೆ ಪ್ರತಿಯೊಬ್ಬ ವ್ಯಕ್ತಿಯೂ ಮಾಡಬೇಕು. ಆತ ಒಂಟಿಯಾಗಿ ನಮಾಝ್ ಮಾಡುತ್ತಿರಲಿ, ಸಾಮೂಹಿಕವಾಗಿ ಮಾಡುತ್ತಿರಲಿ, ಇಮಾಮ್ ಆಗಿರಲಿ, ಹಿಂಬಾಲಕನಾಗಿರಲಿ.

اَلَيْسَ اللّٰهُ بِاَحْكَمِ الْحَاكِمِينَ

'ಅಲೈಸಲ್ಲಾಹು ಬಿಅಹ್ಕಮಿಲ್ ಹಾಕಿಮೀನ್.' (ಅಲ್ಲಾಹನು ಎಲ್ಲ ನ್ಯಾಯಾಧೀಶರ ನ್ಯಾಯಾಧೀಶನಲ್ಲವೇ?) ಎಂದು ಪಠಿಸುವವನು ಅಥವಾ ಆಲಿಸುವವನು

بَلٰى وَاَنَا عَلٰى ذٰلِكَ لَمِنَ الشّٰهِدِينَ

'ಬಲಾ ವಅನ ಅಲಾ ದಾಲಿಕ ಲಮಿನ ಶ್ಶಾಹಿದೀನ್.' (ಏಕಿಲ್ಲ, ನಾನು ಅದರ ಸಾಕ್ಷ್ಯ ವಹಿಸುವವರಲ್ಲಾಗಿರುತ್ತೇನೆ) ಎನ್ನಬೇಕು.

اَلَيْسَ اللّٰهُ بِقَادِرٍ عَلٰى اَنْ يُّحْىَ الْمَوْتٰى

'ಅಲೈಸಲ್ಲಾಹು ಬಿಕಾದಿರಿನ್ ಅಲಾ ಅಂಯುಹ್ಯಿಯಲ್ ಮೌತಾ.' (ಅಲ್ಲಾಹನು ಸತ್ತವರನ್ನು ಜೀವಂತಗೊಳಿಸಲು ಸಮರ್ಥನಲ್ಲವೇ?) ಎಂದು ಪಠಿಸುವವನು ಅಥವಾ ಅದನ್ನು ಆಲಿಸುವವನು 'ಬಲಾ ಅಶ್‌ಹದು' (ಏಕಿಲ್ಲ! ನಾನು ಅದಕ್ಕೆ ಸಾಕ್ಷ್ಯವಹಿಸುತ್ತೇನೆ) ಎನ್ನಬೇಕು. 'ಫಬಿಅಯ್ಯಿ ಹದೀಸಿನ್ ಬಅ್‌ದಹೂ ಯೂಮಿನೂನ್.' (ಈ ಜನರು ಈ ಕುರ್‌ಆನಿನ ಬಳಿಕ ಯಾವ ವಚನದ ಮೇಲೆ ವಿಶ್ವಾಸವಿಡುವರು?) ಎಂದು ಪಠಿಸುವವನು ಅಥವಾ ಅದನ್ನು ಆಲಿಸುವವನು اٰمَنْتُ بِاللّٰهِ 'ಆಮನ್ತು ಬಿಲ್ಲಾಹ್.' (ನಾನು ಅಲ್ಲಾಹನ ಮೇಲೆ ವಿಶ್ವಾಸವಿರಿಸಿದೆ) ಎನ್ನಬೇಕು.

سَبِّحِ اسْمَ رَبِّكَ الْاَعْلٰى

**'ಸಬ್ಬಿಹಿಸ್ಮರಬ್ಬಿಕಲ್ ಅಲ್‌ಲಾ'** (ನಿಮ್ಮ ಮಹೋನ್ನತ ಪ್ರಭುವಿನ ಸ್ತುತಿಸ್ತೋತ್ರ ಮಾಡಿರಿ) ಎಂದಾಗ

سُبْحَانَ رَبِّىَ الْاَعْلٰى

**'ಸುಬ್‌ಹಾನ ರಬ್ಬಿಯಲ್ ಅಲ್‌ಲಾ'** (ನನ್ನ ಮಹೋನ್ನತ ಪ್ರಭು ಪರಮ ಪಾವನನು) ಎನ್ನಬೇಕು. ನಮಾಝ್‌ನಲ್ಲಿ ಮಾತ್ರವಲ್ಲ ಇತರ ಕುರ್‌ಆನ್ ಪಠನದ ವೇಳೆಯಲ್ಲೂ ಈ ನಿಯಮವನ್ನು ಪಾಲಿಸಬೇಕು.

ಹನಫೀ ಕ್ರಮದಂತೆ ಇದು ಕೇವಲ ನಫಿಲ್ ನಮಾಝ್‌ಗಳ ವಿಷಯ. ಆದರೆ ಇಮಾಮ್ ಶಾಫಿಈ ಮತ್ತು ಅಹ್ಲುಲ್ ಹದೀಸ್ ವಿದ್ವಾಂಸರ ಪ್ರಕಾರ ಫರ್ಝ್ (ಕಡ್ಡಾಯ) ನಮಾಝ್‌ಗಳಲ್ಲೂ ಹೀಗೆ ಹೇಳುವುದು ಸುನ್ನತ್ ಆಗಿದೆ. ಪ್ರವಾದಿವರ್ಯರು(ಸ) ಯಾವುದೇ ಫರ್ಝ್ ನಮಾಝ್‌ನಲ್ಲಿ ಇಂತಹ ಪ್ರಾರ್ಥನೆ ಮಾಡಿದ್ದ ವರದಿ ಹದೀಸ್‌ಗಳಲ್ಲಿ ಇಲ್ಲ. ಆದ್ದರಿಂದ ಹನಫೀಗಳು ಇದನ್ನು ಕೇವಲ ನಫಿಲ್ ನಮಾಝ್‌ಗೆ ಸೀಮಿತಗೊಳಿಸಿದ್ದಾರೆ.

**(ಅಲ್ ಮುಗ್ನಿ- ಭಾಗ-1, ಪುಟ:587)**

**7. ಸೂರಃ ಫಾತಿಹಾ ಮತ್ತು ಕಿರಾಅತ್‌ಗಳ ನಂತರ ಮೌನ:** ಸೂರಃ ಫಾತಿಹಾದ ನಂತರ ಇನ್ನೊಂದು ಸೂರಃ ಆರಂಭಿಸುವುದಕ್ಕೆ ಮುಂಚೆ ಮತ್ತು ಕಿರಾಅತ್ ಮುಗಿದ ಬಳಿಕ ರುಕೂಅ್‌ಗಾಗಿ 'ಅಲ್ಲಾಹು ಅಕ್ಬರ್' ಹೇಳುವುದಕ್ಕೆ ಮುಂಚೆ ಸ್ವಲ್ಪ ಹೊತ್ತು ಮೌನವಾಗಿರುವುದು ಸುನ್ನತ್ ಆಗಿದೆ.

"ಪ್ರವಾದಿ(ಸ) ಎರಡು ಕಡೆ ಮೌನ ವಹಿಸುತ್ತಿದ್ದರು. ಒಂದು, ನಮಾಝ್ ಆರಂಭಿಸಿದಾಗ. ಎರಡು, ಕಿರಾಅತ್ ಪೂರ್ಣಗೊಳಿಸಿದಾಗ."

ಇನ್ನೊಂದು ವರದಿಯ ಪ್ರಕಾರ:

"ಒಂದು ಮೌನ ಪ್ರವಾದಿ(ಸ) 'ಅಲ್ಲಾಹು ಅಕ್ಬರ್' ಹೇಳಿದಾಗ, ಇನ್ನೊಂದು ಪ್ರವಾದಿ(ಸ) 'ಗೈರಿಲ್ ಮಗ್‌ದೂಬಿ ಅಲೈಹಿಮ್ ವಲದ್ದಾಲ್ಲೀನ್' ಎಂದಾಗ."

**(ವರದಿ: ಹ. ಸಮ್ರಃ(ರ)- ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)**

ಹನಫೀ ಕ್ರಮದಂತೆ ಎರಡನೆಯ ಮೌನ ಅಪೇಕ್ಷಿತವಲ್ಲ.

**8. ಮಧ್ಯದ ತಕ್ಬೀರ್‌ಗಳು:** ನಮಾಝ್‌ನಲ್ಲಿ ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ವರ್ಗವಾಗುವಾಗ 'ಅಲ್ಲಾಹು ಅಕ್ಬರ್' ಹೇಳುವುದು ಸುನ್ನತ್ ಆಗಿದೆ. ಆದರೆ ರುಕೂಅ್‌ನಿಂದ ಏಳುವಾಗ 'ಅಲ್ಲಾಹ್ ಅಕ್ಬರ್'ನ ಬದಲಿಗೆ 'ಸಮಿಅಲ್ಲಾಹು ಲಿಮನ್ ಹಮಿದಃ' ಎನ್ನಬೇಕು.

"ಪ್ರವಾದಿ(ಸ) ನಮಾಝ್‌ಗೆ ನಿಂತಾಗ 'ಅಲ್ಲಾಹು ಅಕ್ಬರ್' ಎನ್ನುತ್ತಿದ್ದರು. ರುಕೂಅ್‌ಗೆ ಹೋಗುವಾಗ 'ಅಲ್ಲಾಹು ಅಕ್ಬರ್' ಎನ್ನುತ್ತಿದ್ದರು. ರುಕೂಅ್‌ನಿಂದ ಏಳುವಾಗ 'ಸಮಿಅಲ್ಲಾಹು ಲಿಮನ್ ಹಮಿದಃ' (ತನ್ನನ್ನು ಸ್ತುತಿಸಿದವನ ಸ್ವರವನ್ನು ಅಲ್ಲಾಹನು ಆಲಿಸಿದನು) ಎನ್ನುತ್ತಿದ್ದರು. ನಿಂತಾದ ಬಳಿಕ 'ರಬ್ಬನಾ ಲಕಲ್ ಹಮ್ದ್' (ನಮ್ಮ ಪ್ರಭೂ! ಸ್ತುತಿಸ್ತೋತ್ರಗಳೆಲ್ಲವೂ ನಿನಗೇ ಆಗಿವೆ). ಅನಂತರ ಸುಜೂದ್‌ಗೆ ಹೋಗುವಾಗ 'ಅಲ್ಲಾಹು ಅಕ್ಬರ್' ಎನ್ನುತ್ತಿದ್ದರು. ಸುಜೂದ್‌ನಿಂದ ಎದ್ದು ಕುಳಿತಾಗ 'ಅಲ್ಲಾಹು ಅಕ್ಬರ್' ಎನ್ನುತ್ತಿದ್ದರು. ಎರಡನೆಯ ರಕಅತ್‌ನಿಂದ ಎದ್ದಾಗ 'ಅಲ್ಲಾಹು ಅಕ್ಬರ್' ಎನ್ನುತ್ತಿದ್ದರು. ನಮಾಝ್ ಮುಗಿಯುವ ತನಕ ಎಲ್ಲ ರಕಅತ್‌ಗಳಲ್ಲಿಯೂ ಹೀಗೆಯೇ ಮಾಡುತ್ತಿದ್ದರು. ಪ್ರವಾದಿವರ್ಯರು(ಸ) ಇಹಲೋಕ ತ್ಯಾಗ ಮಾಡುವ ತನಕ ಅವರ ನಮಾಝ್ ಹೀಗೆಯೇ ಇರುತ್ತಿತ್ತು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್)

**9. ರುಕೂಅ್‌ನ ಕ್ರಮ ಮತ್ತು ದುಆ:** ರುಕೂಅ್‌ನಲ್ಲಿ ಬಾಗಿ ಮೊಣ ಕಾಲುಗಳ ಮೇಲೆ ಕೈಗಳನ್ನಿಟ್ಟರೆ ಫರ್ಝ್(ಕಡ್ಡಾಯ ವಿಧಿ) ಪೂರ್ಣಗೊಳ್ಳುತ್ತದೆ. ರುಕೂಅ್‌ನಲ್ಲಿ ಸೊಂಟವನ್ನು ನೇರವಾಗಿಡುವುದು ಕೆಳಕ್ಕೆ ಅಥವಾ ಮೇಲಕ್ಕೆ ಬಾಗದಿರುವುದು ಮತ್ತು ಬೆರಳುಗಳನ್ನು ಬಿಡಿಸಿ ಕೈಗಳನ್ನು ಮೊಣಕಾಲುಗಳ ಮೇಲಿಟ್ಟು ಮೊಣಕೈಗಳನ್ನು ಶರೀರದಿಂದ ದೂರವಿಡುವುದು ಸುನ್ನತ್ ಆಗಿದೆ.

"ಹ. ಉಕ್ಬಾ ಬಿನ್ ಅಮ್ರ್ ನಮಾಝ್ ಮಾಡಿದರು. ತಮ್ಮ ಮೊಣಕೈಗಳನ್ನು ಶರೀರದಿಂದ ದೂರವಿಟ್ಟರು. ಕೈಗಳನ್ನು ಮೊಣಕಾಲುಗಳ ಮೇಲಿಟ್ಟು ಬೆರಳುಗಳನ್ನು ಬಿಡಿಸಿಟ್ಟರು ಮತ್ತು ಪ್ರವಾದಿ(ಸ) ಹೀಗೆಯೇ ನಮಾಝ್ ಮಾಡುವುದನ್ನು ನಾನು ಕಂಡಿರುವೆನು ಎಂದು ಹೇಳಿದರು." (ಅಹ್ಮದ್, ಅಬೂ ದಾವೂದ್, ನಸಾಈ)

"ಪ್ರವಾದಿ(ಸ) ರುಕೂಅ್ ಮಾಡುವಾಗ ನೇರವಾಗಿರುತ್ತಿದ್ದರು. ತಲೆಯನ್ನು ಕೆಳಕ್ಕೆ ಅಥವಾ ಮೇಲಕ್ಕೆ ಬಾಗಿಸುತ್ತಿರಲಿಲ್ಲ. ತಮ್ಮ ಕೈಗಳನ್ನು ಮೊಣಕಾಲುಗಳ ಮೇಲೆ ಇರಿಸುತ್ತಿದ್ದರು."

(ವರದಿ: ಹ. ಅಬೂ ಹುಮೈದ್(ರ)- ನಸಾಈ)

ರುಕೂಅ್‌ನಲ್ಲಿ سُبْحَانَ رَبِّيَ الْعَظِيم 'ಸುಬ್‌ಹಾನ ರಬ್ಬಿಯಲ್ ಅಳೀಮ್' (ನನ್ನ ಮಹಾನ್ ಪ್ರಭು ಪರಮ ಪಾವನನು) ಎನ್ನುವುದು ಸುನ್ನತ್ ಆಗಿದೆ.

'ಫಸಬ್ಬಿಹ್ ಬಿಸ್ಮಿ ರಬ್ಬಿಕಲ್ ಅಳೀಮ್' (ನಿಮ್ಮ ಮಹಾನ್ ಪ್ರಭುವಿನ ನಾಮವನ್ನು ಸ್ತುತಿಸಿರಿ) ಎಂಬ ಕುರ್‌ಆನ್ ಸೂಕ್ತ ಅವತೀರ್ಣಗೊಂಡಾಗ ಪ್ರವಾದಿ(ಸ) 'ಇದನ್ನು ರುಕೂಅ್‌ನಲ್ಲಿ ಅಳವಡಿಸಿರಿ' ಎಂದರು.

(ವರದಿ: ಹ. ಉಕ್ಬಾ ಬಿನ್ ಆಮಿರ್(ರ)- ಅಹ್ಮದ್, ಅಬೂ ದಾವೂದ್)

ಅನೇಕ ಹದೀಸ್‌ಗಳಿಂದ ತಿಳಿದು ಬರುವಂತೆ 'ಸುಬ್‌ಹಾನ ರಬ್ಬಿಯಲ್ ಅಝೀಮ್' ಕನಿಷ್ಠ ಮೂರು ಸಲ ಹೇಳಬೇಕು. ಅದಕ್ಕಿಂತ ಹೆಚ್ಚು ಐದು, ಏಳು, ಒಂಬತ್ತು, ಹತ್ತು ಮತ್ತು ಹನ್ನೊಂದು ಸಲವೂ ಹೇಳಬಹುದು. ಇದಲ್ಲದೆ ರುಕೂಅ್‌ನಲ್ಲಿ ಇನ್ನೂ ಕೆಲವು ದುಆಗಳನ್ನು ಪಠಿಸುವುದು ಸುನ್ನತ್ ಆಗಿದೆ:

1) ಪ್ರವಾದಿ(ಸ) ರುಕೂಅ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ لَكَ رَكَعْتُ وَبِكَ اٰمَنْتُ۔ وَلَكَ اَسْلَمْتُ۔ اَنْتَ رَبِّی۔ خَشَعَ سَمْعِی وَ بَصَرِیْ وَ مُخِّی وَ عَظْمِی وَ عَصْبِی وَ مَااسْتَقَلَّتْ بِهٖ قَدَمِی لِلّٰهِ رَبِّ الْعٰلَمِین۔ (احمد، مسلم، ابوداؤد، نسآئی)

"ಅಲ್ಲಾಹುಮ್ಮ ಲಕ ರಕಅ್‌ತು ವಬಿಕ ಆಮನ್ತು ವಲಕ ಅಸ್ಲಮ್ತು ಅನ್ತ ರಬ್ಬೀ ಖಷಅ ಸಮ್‌ಈ ವ ಬಸರೀ ವ ಮುಖ್ಖೀ ವ ಅಳ್‌ಮೀ, ವ ಅಸ್‌ಬೀ ವ ಮಸ್ತಕಲ್ಲತ್ ಬಿಹೀ ಕದಮೀ ಲಿಲ್ಲಾಹಿ ರಬ್ಬಿಲ್ ಆಲಮೀನ್."

ಅರ್ಥ: ಓ ಅಲ್ಲಾಹ್! ನಾನು ನಿನಗಾಗಿ ರುಕೂಅ್ ಮಾಡಿದೆ. ನಾನು ನಿನ್ನ ಮೇಲೆ ವಿಶ್ವಾಸವಿರಿಸಿದೆ ಮತ್ತು ನನ್ನನ್ನು ನಿನ್ನ ವಶಕ್ಕೆ ಒಪ್ಪಿಸಿದೆ. ನೀನು ನನ್ನ ಪ್ರಭು, ನನ್ನ ಕಿವಿ, ನನ್ನ ಕಣ್ಣು, ನನ್ನ ಮೆದುಳು, ನನ್ನ ಎಲುಬು, ನನ್ನ ನರನಾಡಿಗಳು ಮತ್ತು ನನ್ನ ಕಾಲಿನಲ್ಲಿರುವ ಎಲ್ಲ ಅವಯವಗಳು ಸರ್ವಲೋಕಗಳ ಪ್ರಭುವಿನ ಮುಂದೆ ಬಾಗಿದುವು.

(ವರದಿ: ಹ. ಅಲೀ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ನಸಾಈ)

2) ಪ್ರವಾದಿ(ಸ) ತಮ್ಮ ರುಕೂಅ್ ಮತ್ತು ಸುಜೂದ್‌ಗಳಲ್ಲಿ ಈ ದುಆ ಪಠಿಸುತ್ತಿದ್ದರು:

سُبْحٰنَكَ اللّٰهُمَّ رَبَّنَا وَبِحَمْدِكَ اَللّٰهُمَّ اغْفِرْلِی۔ (احمد، بخاری، مسلم)

"ಸುಬ್‌ಹಾನಕಲ್ಲಾಹುಮ್ಮ ರಬ್ಬನಾ ವಬಿಹಮ್‌ದಿಕ ಅಲ್ಲಾಹುಮ್ಮಗ್‌ಫಿರ್ಲೀ."

ಅರ್ಥ: ಓ ಅಲ್ಲಾಹ್! ಓ ನಮ್ಮ ಪ್ರಭೂ! ನೀನು ಪಾವನನು. ನಾವು ನಿನ್ನನ್ನು ಸ್ತುತಿಸುತ್ತೇವೆ. ಓ ಅಲ್ಲಾಹ್! ನಮ್ಮನ್ನು ಕ್ಷಮಿಸು.

(ವರದಿ: ಹ. ಆಯಿಶಾ(ರ)- ಅಹ್ಮದ್, ಬುಖಾರಿ, ಮುಸ್ಲಿಮ್)

3) ಪ್ರವಾದಿ(ಸ) ತಮ್ಮ ರುಕೂಅ್ ಮತ್ತು ಸುಜೂದ್‌ಗಳಲ್ಲಿ ಈ ದುಆ ಪಠಿಸುತ್ತಿದ್ದರು:

سُبُّوحٌ قُدُّوسٌ رَبُّ الْمَلٰٓئِكَةِ وَالرُّوحِ (احمد، مسلم، ابوداؤد، نسآئی)

"ಸುಬ್ಬೂಹುನ್, ಕುದ್ದೂಸುನ್, ರಬ್ಬುಲ್ ಮಲಾಯಿಕತಿ ವರ್ರೂಹ್."

ಅರ್ಥ: ಓ ಅಲ್ಲಾಹ್! ನೀನು ಪರಮ ಪಾವನನು, ಎಲ್ಲ ಕುಂದು ಕೊರತೆಗಳಿಂದ ಮುಕ್ತನು. ಮಲಕ್‌ಗಳ ಮತ್ತು ಜಿಬ್ರೀಲ್‌ನ ಪ್ರಭುವಾಗಿರುವೆ.

(ವರದಿ: ಹ. ಆಯಿಶಾ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ನಸಾಈ)

4) ಒಂದು ರಾತ್ರಿ ನಾನು ಪ್ರವಾದಿವರ್ಯರ(ಸ) ಜೊತೆ ನಮಾಝ್‌ಗೆ ನಿಂತಿದ್ದೆ. ಅವರು ರುಕೂಅ್‌ನಲ್ಲಿ ಈ ದುಆ ಪಠಿಸಿದರು:

سُبْحَانَ ذِى الْجَبَرُوتِ وَالْمَلَكُوتِ وَالْكِبْرِيَاءِ وَالْعَظْمَةِ (ابوداؤد)

"ಸುಬ್‌ಹಾನ ದಿಲ್ ಜಬರೂತಿ ವಲ್ ಮಲಕೂತಿ ವಲ್ ಕಿಬ್ರಿಯಾಇ ವಲ್ ಅಳ್‌ಮತಿ."

ಅರ್ಥ: ಶಕ್ತಿ, ಆಧಿಪತ್ಯ, ಹಿರಿಮೆ ಮತ್ತು ಮಹಿಮೆಯ ಒಡೆಯನಾದ ಅಲ್ಲಾಹನು ಪರಮ ಪಾವನನು.

(ವರದಿ: ಹ. ಔಫ್ ಬಿನ್ ಮಾಲಿಕ್(ರ)- ಅಬೂ ದಾವೂದ್)

**10. ನಿಲ್ಲುವಾಗಿನ ದುಆ:** ರುಕೂಅ್‌ನಿಂದ ಏಳುವಾಗ

سَمِعَ اللّٰهُ لِمَنْ حَمِدَهُ

'ಸಮಿಅಲ್ಲಾಹು ಲಿಮನ್ ಹಮಿದಃ' ಮತ್ತು ಎದ್ದು ನಿಂತಾಗ

رَبَّنَا لَكَ الْحَمْدُ

'ರಬ್ಬನಾ ಲಕಲ್ ಹಮ್‌ದು' ಎನ್ನುವುದು ಸುನ್ನತ್ ಆಗಿದೆ. ಸಾಮೂಹಿಕ ನಮಾಝ್ ನಲ್ಲಿರುವಾಗ ಇಮಾಮ್

سَمِعَ اللّٰهُ لِمَنْ حَمِدَهُ

'ಸಮಿಅಲ್ಲಾಹು ಲಿಮನ್ ಹಮಿದಃ' ಎನ್ನಬೇಕು.

ಪ್ರವಾದಿ(ಸ) ರುಕೂಅ್‌ನಿಂದ ಏಳುವಾಗ

سَمِعَ اللّٰهُ لِمَنْ حَمِدَهُ

'ಸಮಿಅಲ್ಲಾಹು ಲಿಮನ್ ಹಮಿದಃ' ಮತ್ತು ಎದ್ದು ನಿಂತ ಬಳಿಕ

رَبَّنَا لَكَ الْحَمْدُ

'ರಬ್ಬನಾ ಲಕಲ್ ಹಮ್ದ್' ಎನ್ನುತ್ತಿದ್ದರು.

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್)

ರುಕೂಅ್‌ನಿಂದ ಎದ್ದು ನಿಂತಾಗ ಹೇಳುವ ಇನ್ನೂ ಕೆಲವು ದುಆಗಳಿವೆ: ಅವುಗಳ ಪೈಕಿ ಕೆಲವನ್ನು ಇಲ್ಲಿ ಕೊಡಲಾಗಿದೆ:

1) "ಒಮ್ಮೆ ನಾವು ಪ್ರವಾದಿವರ್ಯರ(ಸ) ಹಿಂದೆ ನಮಾಝ್ ಮಾಡುತ್ತಿದ್ದೆವು. ಅವರು(ಸ) ರುಕೂಅ್‌ನಿಂದ ತಲೆ ಎತ್ತುವಾಗ 'ಸಮಿಅಲ್ಲಾಹು ಲಿಮನ್ ಹಮಿದಃ' ಎಂದರು. ಆಗ ಹಿಂದಿನಿಂದ ಒಬ್ಬ ವ್ಯಕ್ತಿ ಹೀಗೆ ಪ್ರಾರ್ಥಿಸಿದರು-

رَبَّنَا لَكَ الْحَمْدُ حَمْدًا كَثِيرًا طَيِّبًا مُبَارَكًا فِيهِ

**'ರಬ್ಬನಾ ಲಕಲ್ ಹಮ್ದು ಹಮ್‌ದನ್ ಕಸೀರನ್, ತಯ್ಯಿಬನ್, ಮುಬಾರಕನ್ ಫೀಹಿ'**

ಅರ್ಥ: ಓ ನಮ್ಮ ಪ್ರಭೂ! ಸರ್ವಸ್ತುತಿಯೂ ನಿನಗೇ ಮೀಸಲು. ಅತ್ಯಧಿಕ ಸ್ತುತಿ, ಅತ್ಯಂತ ಪಾವನನು ಮತ್ತು ಮಂಗಳದಾಯಕನು.

ಪ್ರವಾದಿವರ್ಯರು(ಸ) ಸಲಾಮ್ ಹೇಳಿದ ನಂತರ ಹೀಗೆ ವಿಚಾರಿಸಿದರು- 'ಈ ಹೇಳಿದ್ದು ಯಾರು?' ಆ ವ್ಯಕ್ತಿ, 'ಓ ಪ್ರವಾದಿವರ್ಯರೇ(ಸ)! ನಾನು' ಎಂದು ಹೇಳಿದ. ಆಗ ಪ್ರವಾದಿ(ಸ) ಹೇಳಿದರು- ಈಗ ನಾನು ಮೂವತ್ತಕ್ಕಿಂತಲೂ ಅಧಿಕ ಮಲಕ್‌ಗಳು ನಾ ಮುಂದು, ತಾ ಮುಂದು ಎನ್ನುತ್ತಾ ಅದನ್ನು ಲಿಖಿತಗೊಳಿಸಲಿಕ್ಕಾಗಿ ಧಾವಿಸುತ್ತಿರುವುದನ್ನು ಕಂಡೆ."

**(ವರದಿ: ಹ. ರಫಾಅ ಬಿನ್ ರಾಫಿಅ್(ರ)- ಬುಖಾರಿ, ಅಹ್ಮದ್, ಮಾಲಿಕ್, ಅಬೂ ದಾವೂದ್)**

2) ಪ್ರವಾದಿವರ್ಯರು(ಸ) ರುಕೂಅ್‌ನಿಂದ ತಲೆ ಎತ್ತಿದಾಗ ಈ ದುಆ ಪಠಿಸುತ್ತಿದ್ದರು:

رَبَّنَا وَلَكَ الْحَمْدُ مِلْأَ السَّمٰوَاتِ وَالْأَرْضِ وَمَا بَيْنَهُمَا وَمِلْأَ مَاشِئْتَ مِنْ شَيْءٍ بَعْدُ (احمد، مسلم، ابوداؤد، ترمذی)

**"ರಬ್ಬನಾ ವಲಕಲ್ ಹಮ್ದು ಮಿಲ್ ಅಸ್ಸಮಾವಾತಿ ವಲ್ ಅರ್ದಿ ವಮಾ ಬೈನಹುಮಾ ವಮಿಲ್‌ಅ ಮಾಶಿಅ್‌ತ ಮಿನ್ ಶೈಇನ್ ಬಅ್‌ದ್."**

ಅರ್ಥ: ಓ ನಮ್ಮ ಪ್ರಭೂ! ಸರ್ವಸ್ತುತಿಯೂ ನಿನಗೇ ಮೀಸಲು. ಆಕಾಶಗಳಷ್ಟು, ಭೂಮಿಯಷ್ಟು ಮತ್ತು ಅವುಗಳ ಮಧ್ಯೆ ಇರುವವುಗಳಷ್ಟು ಮತ್ತು ಅದರ ನಂತರ ನೀನು ಬಯಸಿದ ವಸ್ತುವಿನಷ್ಟು.

**(ವರದಿ: ಹ. ಅಲೀ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)**

3) ಪ್ರವಾದಿ(ಸ) ರುಕೂಅ್‌ನಿಂದ ತಲೆ ಎತ್ತಿದಾಗ ಈ ದುಆ ಪಠಿಸುತ್ತಿದ್ದರು:

اَللّٰهُمَّ لَكَ الْحَمْدُ مِلْأَالسَّمَاءِ وَمِلْأَالْأَرْضِ وَمِلْأَ مَا شِئْتَ مِنْ شَيْءٍ بَعْدُ۔ اَللّٰهُمَّ طَهِّرْنِي بِالثَّلْجِ وَالْبَرَدِ وَالْمَآءِ الْبَارِدِ۔ اَللّٰهُمَّ طَهِّرْنِي مِنَ الذُّنُوبِ وَ نَقِّنِي مِنْهَا كَمَا يُنَقَّى الثَّوْبُ الْاَبْيَضُ مِنَ الدَّنَسِ۔

(احمد، مسلم، ابوداؤد، ابن ماجة)

"ಅಲ್ಲಾಹುಮ್ಮ ಲಕಲ್ ಹಮ್ದು ಮಿಲ್ ಅಸ್ಸಮಾಇ ವಮಿಲ್ ಅಲ್ ಅರ್ದಿ ವಮಿಲ್‌ಅ ಮಾಶಿಅ್‌ತ ಮಿನ್ ಶೈಇನ್ ಬಅ್‌ದ್. ಅಲ್ಲಾಹುಮ್ಮ ತಹ್ಹಿರ್‌ನೀ ಬಿಸ್ಸಲ್‌ಜಿ ವಲ್ ಬರ್ದಿ ವಲ್ ಮಾಇಲ್ ಬಾರಿದಿ. ಅಲ್ಲಾಹುಮ್ಮ ತಹ್ಹಿರ್‌ನೀ ಮಿನದ್ದುನೂಬಿ ವನಕ್ಕಿನೀ ಮಿನ್‌ಹಾ ಕಮಾ ಯುನಕ್ಕಸ್ಸೌಬುಲ್ ಅಬ್‌ಯದು ಮಿನದ್ದನಸಿ."

ಅರ್ಥ: ಓ ಅಲ್ಲಾಹ್! ಸರ್ವಸ್ತುತಿಯೂ ನಿನಗೇ ಮೀಸಲು. ಆಕಾಶದಷ್ಟು, ಭೂಮಿಯಷ್ಟು ಮತ್ತು ಆ ಬಳಿಕ ನೀನು ಬಯಸುವ ಪ್ರತಿಯೊಂದು ವಸ್ತುವಿನಷ್ಟು. ಓ ಅಲ್ಲಾಹ್! ನನ್ನನ್ನು ಮಂಜುಗಡ್ಡೆ, ಇಬ್ಬನಿ ಮತ್ತು ತಂಪಾದ ನೀರಿನಿಂದ ಶುದ್ಧಗೊಳಿಸು. ಓ ಅಲ್ಲಾಹ್! ನನ್ನನ್ನು ಪಾಪಗಳಿಂದ ಮುಕ್ತಗೊಳಿಸು. ಬಿಳಿ ಬಟ್ಟೆಯು ಕೊಳೆಯಿಂದ ಮುಕ್ತವಾಗುವಂತೆ ನನ್ನನ್ನು ಪಾಪದಿಂದ ಮುಕ್ತಗೊಳಿಸು.

(ವರದಿ: ಹ. ಅಬ್ದುಲ್ಲಾ ಬಿನ್ ಔಫ್(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ಇಬ್ನು ಮಾಜಃ)

4) 'ಸಮಿಅಲ್ಲಾಹು ಲಿಮನ್ ಹಮಿದಃ' ಎಂದು ಹೇಳಿದ ಬಳಿಕ ಪ್ರವಾದಿ(ಸ) ಈ ದುಆ ಪಠಿಸುತ್ತಿದ್ದರು:

اَللّٰهُمَّ رَبَّنَا لَكَ الْحَمْدُ مِلْأَ السَّمٰوَاتِ وَمِلْأَ الْأَرْضِ وَ مِلْأَ مَا شِئْتَ مِنْ شَيْءٍ بَعْدُ۔ اَهْلَ الثَّنَآءِ وَالْمَجْدِ۔ اَحَقُّ مَا قَالَ الْعَبْدُ كُلُّنَا لَكَ عَبْدٌ۔ لَا مَانِعَ لِمَآ اَعْطَيْتَ وَلَا مُعْطِيَ لِمَا مَنَعْتَ وَلَا يَنْفَعُ ذَاالْجَدِّ مِنْكَ الْجَدُّ۔

(مسلم، احمد، ابوداؤد)

"ಅಲ್ಲಾಹುಮ್ಮ ರಬ್ಬನಾ ಲಕಲ್ ಹಮ್ದು ಮಿಲ್ ಅಸ್ಸಮಾವಾತಿ ವಮಿಲ್ ಅಲ್ ಅರ್ದಿ ವಮಿಲ್‌ಅ ಮಾ ಶಿಅ್‌ತ ಮಿನ್ ಶೈಇನ್ ಬಅ್‌ದ್. ಅಹ್‌ಲಸ್ಸನಾಇ ವಲ್ ಮಜ್ದ್. ಅಹಕ್ಕು ಮಾ ಕಾಲಲ್ ಅಬ್ದು ಕುಲ್ಲುನಾ ಲಕ ಅಬ್ದ್- ಲಾ ಮಾನಿಅ ಲಿಮಾ ಅಅ್‌ತೈತ ವಲಾ ಮುಅ್‌ತಿಯ ಲಿಮಾ ಮನಅ್‌ತ ವಲಾ ಯಂಫಉ ದಲ್ ಜದ್ದಿ ಮಿನ್‌ಕಲ್ ಜದ್ದ್."

ಅರ್ಥ: ಓ ಅಲ್ಲಾಹ್! ನಮ್ಮ ಪ್ರಭೂ! ಸರ್ವಸ್ತುತಿಯೂ ನಿನಗೇ ಮೀಸಲು. ಆಕಾಶಗಳಷ್ಟು, ಭೂಮಿಯಷ್ಟು, ಅದರ ನಂತರ ನೀನು ಬಯಸುವ ಪ್ರತಿಯೊಂದು ವಸ್ತುವಿನಷ್ಟು. ಓ ಹೊಗಳಿಕೆ ಮತ್ತು ಮಹಿಮೆಯವನೇ! ದಾಸನು ಹೇಳಬೇಕಾದ ಅತ್ಯಧಿಕ ಬಾಧ್ಯತೆಯಿರುವ ವಿಷಯ ಇದುವೇ ಆಗಿದೆ. ನಮ್ಮ ಪೈಕಿ ಪ್ರತಿಯೊಬ್ಬರೂ ನಿನ್ನ ದಾಸರು. ನೀನು ತಡೆದುದನ್ನು ಕೊಡಿಸಲು ಯಾರಿಗೂ ಸಾಧ್ಯವಿಲ್ಲ. ನೀನು ಕೊಡುವುದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಯಾವ ದೊಡ್ಡಸ್ತಿಕೆಯವನ ದೊಡ್ಡಸ್ತಿಕೆಯೂ ನಿನ್ನ ಬಳಿ ಪ್ರಯೋಜನಕ್ಕೆ ಬಾರದು.

(ವರದಿ: ಹ. ಅಬೂ ಸಈದ್ ಖುದ್ರೀ(ರ)- ಮುಸ್ಲಿಮ್, ಅಹ್ಮದ್, ಅಬೂ ದಾವೂದ್)

**11. ಸುಜೂದ್ ಮಾಡುವ ಮತ್ತು ಸುಜೂದ್‌ನಿಂದ ಏಳುವ ಕ್ರಮ:** ಸುಜೂದ್‌ಗೆ ಹೋಗುವಾಗ ಮೊದಲು ಮೊಣಕಾಲುಗಳನ್ನು ನೆಲದ ಮೇಲೆ ಇಡಬೇಕು. ಅನಂತರ ಕೈಗಳನ್ನಿಡಬೇಕು. ಸುಜೂದ್‌ನಿಂದ ಏಳುವಾಗ ಮೊದಲು ಕೈಗಳನ್ನು ನೆಲದಿಂದ ಎತ್ತಬೇಕು. ಅನಂತರ ಮೊಣಕಾಲುಗಳನ್ನೆತ್ತಬೇಕು.

"ಪ್ರವಾದಿ(ಸ) ಸುಜೂದ್‌ಗೆ ಹೋಗುವಾಗ ತಮ್ಮ ಕೈಗಳಿಗಿಂತ ಮೊದಲು ತಮ್ಮ ಮೊಣಕಾಲುಗಳನ್ನು ನೆಲದ ಮೇಲೆ ಇಡುತ್ತಿದ್ದರು. ಸುಜೂದ್‌ನಿಂದ ಏಳುವಾಗ ತಮ್ಮ ಮೊಣಕಾಲುಗಳಿಗಿಂತ ಮೊದಲು ತಮ್ಮ ಕೈಗಳನ್ನು ಎತ್ತುತ್ತಿದ್ದರು."

(ವರದಿ: ಹ. ವಾಇಲ್ ಬಿನ್ ಹಜರ್(ರ)- ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಇದುವೇ ಇಮಾಮ್ ಅಬೂ ಹನೀಫಾರ(ರ) ಅಭಿಮತ. ಇಮಾಮ್ ಶಾಫಿಈಯವರ(ರ) ಅಭಿಪ್ರಾಯದಂತೆ ಸುಜೂದ್‌ಗೆ ಹೋಗುವಾಗ ಮೊದಲು ಕೈಗಳನ್ನು ನೆಲದ ಮೇಲಿಟ್ಟು ಆ ಮೇಲೆ ಮೊಣಕಾಲುಗಳನ್ನಿಡಬೇಕು. ಸುಜೂದ್‌ನಿಂದ ಏಳುವಾಗ ಮೊದಲು ಕೈಗಳನ್ನೆತ್ತಿ ಆ ಬಳಿಕ ಮೊಣಕಾಲುಗಳನ್ನೆತ್ತಬೇಕು. (ನೈಲುಲ್ ಔತಾರ್- ಭಾಗ-1, ಪುಟ: 212)

**12. ಸುಜೂದ್‌ನ ಕ್ರಮ:** ಸುಜೂದ್ ಮಾಡುವಾಗ ತೋಳುಗಳನ್ನು ಶರೀರದಿಂದ ದೂರ ಇಡಬೇಕು. ಮೊಣಕೈಗಳನ್ನು ಎತ್ತಿ ಹಿಡಿಯಬೇಕು.

1) "ಪ್ರವಾದಿ(ಸ) ಸುಜೂದ್ ಮಾಡುವಾಗ ತಮ್ಮ ಎರಡೂ ತೋಳುಗಳನ್ನು ತಮ್ಮ ಶರೀರದಿಂದ ದೂರವಿಡುತ್ತಿದ್ದರು. ಎಲ್ಲಿಯ ವರೆಗೆಂದರೆ ಅವರ ಕಂಕುಳುಗಳು ಕಾಣಿಸುತ್ತಿದ್ದುವು." (ವರದಿ: ಹ. ಅಬ್ದುಲ್ಲಾ ಬಿನ್ ಬುಜೈನಾ(ರ)- ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ಸುಜೂದ್ ಮಾಡುವಾಗ ನಿಮ್ಮ ಹಸ್ತಗಳನ್ನು ನೆಲದ ಮೇಲಿಡಿರಿ ಮತ್ತು ಮೊಣಕೈಗಳನ್ನು ಮೇಲೆತ್ತಿರಿ." (ವರದಿ: ಹ. ಬರಾಅ್ ಬಿನ್ ಆಝಿಬ್(ರ)- ಮುಸ್ಲಿಮ್)

ಆದರೆ ಆ ಬಗ್ಗೆ ಸಮತೋಲನವನ್ನು ಕಾಪಾಡಬೇಕು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಸುಜೂದ್‌ನಲ್ಲಿ ಸಮತೋಲನವನ್ನು ಕಾಪಾಡಿರಿ. ನಿಮ್ಮ ಪೈಕಿ ಯಾರೂ ನಾಯಿಯಂತೆ ತನ್ನ ತೋಳುಗಳನ್ನು ಹರಡದಿರಲಿ." (ವರದಿ: ಹ. ಅನಸ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್)

2) ಕೈ ಬೆರಳುಗಳನ್ನು ಪರಸ್ಪರ ಜೋಡಿಸಿಡುವುದು.

"ಪ್ರವಾದಿ(ಸ) ರುಕೂಅ್ ಮಾಡುವಾಗ ಕೈಬೆರಳುಗಳನ್ನು ಹರಡಿ ಇಡುತ್ತಿದ್ದರು. ಸುಜೂದ್ ಮಾಡುವಾಗ ಅವುಗಳನ್ನು ಪರಸ್ಪರ ಜೋಡಿಸುತ್ತಿದ್ದರು."

(ವರದಿ: ಹಾಕಿಮ್, ಇಬ್ನು ಹಿಬ್ಬಾನ್)

3) ಎರಡೂ ಕೈಗಳನ್ನು ಭುಜಗಳಿಗೆ ಸಮಾನವಾಗಿ ಇಡಬೇಕು. ಇದು ಶಾಫಿಈ ಕ್ರಮ. ಹನಫೀ ಕ್ರಮದಂತೆ ಕೈಗಳನ್ನು ಮುಖಕ್ಕೆ ಸಮಾನವಾಗಿ ಇಡಬೇಕು.

4) ಕೈ ಮತ್ತು ಕಾಲುಗಳ ಬೆರಳುಗಳನ್ನು ಕಿಬ್ಲಾಭಿಮುಖವಾಗಿ ಇಡಬೇಕು.

"ಪ್ರವಾದಿ(ಸ) ಸುಜೂದ್ ಮಾಡುವಾಗ ತಮ್ಮ ತೋಳುಗಳನ್ನು ನೆಲದ ಮೇಲೆ ಒರಗಿಸುತ್ತಿರಲಿಲ್ಲ. ನೆಲದಿಂದ ಎಳೆದೂ ಇಡುತ್ತಿರಲಿಲ್ಲ. ಅವರು(ಸ) ತಮ್ಮ ಎರಡೂ ಕಾಲುಗಳ ಬೆರಳುಗಳನ್ನು ಕಿಬ್ಲಾಭಿಮುಖವಾಗಿ ಇಡುತ್ತಿದ್ದರು." (ವರದಿ: ಹ. ಅಬೂ ಹುಮೈದ್(ರ)- ಬುಖಾರಿ)

5) ಹೊಟ್ಟೆಯನ್ನು ತೋಳುಗಳಿಂದ ದೂರವಿಡಬೇಕು:

"ಪ್ರವಾದಿ(ಸ) ಸುಜೂದ್ ಮಾಡುವಾಗ ತಮ್ಮ ಎರಡೂ ತೋಳುಗಳನ್ನು ಹರಡುತ್ತಿದ್ದರು. ಅವರ(ಸ) ಹೊಟ್ಟೆಯು ತೋಳುಗಳಿಗೆ ತಾಗಿರುತ್ತಿರಲಿಲ್ಲ."

(ವರದಿ: ಹ. ಅಬೂ ಹುಮೈದ್(ರ)- ಅಬೂ ದಾವೂದ್)

ನಾಲ್ಕು ಮಂದಿ ಇಮಾಮರ ಅಭಿಪ್ರಾಯದಂತೆ ಈ ಎಲ್ಲ ಕ್ರಿಯೆಗಳನ್ನು ಇತರ ನಮಾಝ್ ಮಾಡುವವರಿಗೆ ತೊಂದರೆಯಾಗದಂತೆ ನಿರ್ವಹಿಸಬೇಕು. ಇತರ ನಮಾಝ್ ಮಾಡುವವರಿಗೆ ತೊಂದರೆಯಾಗುವಂತೆ ಯಾವ ಕ್ರಿಯೆಯನ್ನೂ ನಿರ್ವಹಿಸುವುದು ಧರ್ಮಸಮ್ಮತವಲ್ಲ. ಹನಫೀ ಮತ್ತು ಶಾಫಿಈ ಕ್ರಮದಂತೆ ಮಹಿಳೆಯರು ಸುಜೂದ್‌ನಲ್ಲಿ ತಮ್ಮ ತೋಳುಗಳನ್ನು ಹೊಟ್ಟೆಗೆ ತಾಗಿಸಿಡುವುದು ಸುನ್ನತ್ ಆಗಿದೆ.

**13. ಸುಜೂದ್‌ನ ದುಆ:** ಸುಜೂದ್‌ನಲ್ಲಿ سُبْحَانَ رَبِّيَ الْأَعْلَى 'ಸುಬ್‌ಹಾನ ರಬ್ಬಿಯಲ್ ಅಅ್‌ಲಾ.' (ನನ್ನ ಮಹೋನ್ನತ ಪ್ರಭು ಪರಮ ಪಾವನನು) ಎನ್ನುವುದು ಸುನ್ನತ್ ಆಗಿದೆ. ಈ ಬಗ್ಗೆ ಅನೇಕ ಹದೀಸ್‌ಗಳಿವೆ. ಆ ಪೈಕಿ ಒಂದು ಹದೀಸ್ ಹೀಗಿದೆ:

"ಸಬ್ಬಿಹಿಸ್ಮ ರಬ್ಬಿಕಲ್ ಅಅ್‌ಲಾ (ನಿಮ್ಮ ಮಹೋನ್ನತ ಪ್ರಭುವಿನ ನಾಮದ ಗುಣಗಾನ ಮಾಡಿರಿ) ಎಂಬ ಆಯತ್ ಅವತೀರ್ಣಗೊಂಡಾಗ ಪ್ರವಾದಿ(ಸ) ನಮಗೆ ಇದನ್ನು ನಿಮ್ಮ ಸುಜೂದ್‌ನಲ್ಲಿ ಅಳವಡಿಸಿರಿ ಎಂದು ಆದೇಶಿಸಿದರು."

(ವರದಿ: ಹ. ಉಕ್ಬಾ ಬಿನ್ ಆಮಿರ್(ರ)- ಅಹ್ಮದ್, ಅಬೂ ದಾವೂದ್, ಇಬ್ನು ಮಾಜಃ, ಹಾಕಿಮ್)

ಒಂದು ಸಲ 'ಸುಬ್‌ಹಾನ ರಬ್ಬಿಯಲ್ ಅಝೀಮ್' ಮತ್ತು 'ಸುಬ್‌ಹಾನ ರಬ್ಬಿಯಲ್ ಅಅ್‌ಲಾ' ಹೇಳುವುದರಿಂದ ಸಾವಧಾನದ ಕಡ್ಡಾಯ ವಿಧಿ ಪೂರ್ತಿಯಾಗುತ್ತದೆ. ಆದರೆ ಈ 'ತಸ್ಬೀಹ'ನ್ನು ಕನಿಷ್ಠ ಮೂರು ಸಲ ಹೇಳಬೇಕು. ಐದು, ಏಳು, ಒಂಬತ್ತು ಮತ್ತು ಹನ್ನೊಂದು ಸಲವೂ ಹೇಳಬಹುದು. ಒಬ್ಬನು ಒಬ್ಬಂಟಿಯಾಗಿ ನಮಾಝ್ ಮಾಡುತ್ತಿದ್ದರೆ ಆತ ಅತ್ಯಧಿಕ ಸಂಖ್ಯೆಯಲ್ಲಿ ತಸ್ಬೀಹ್ ಪಠಿಸಬೇಕು. ಈ ತಸ್ಬೀಹ್‌ನ ಹೊರತಾಗಿ ಸುಜೂದ್‌ನಲ್ಲಿ ಹೇಳುವ ಅನೇಕ ದುಆಗಳು ಹದೀಸ್‌ಗಳಲ್ಲಿ ವರದಿಯಾಗಿವೆ. ಅವುಗಳ ಪೈಕಿ ಕೆಲವನ್ನು ಇಲ್ಲಿ ಕೊಡಲಾಗಿದೆ-

1) ಪ್ರವಾದಿ(ಸ) ಸುಜೂದ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ لَكَ سَجَدْتُ وَبِكَ اٰمَنْتُ وَلَكَ اَسْلَمْتُ سَجَدَ وَجْهِيَ لِلَّذِي خَلَقَهٗ فَصَوَّرَهٗ فَاَحْسَنَ صُوَرَهٗ فَشَقَّ سَمْعَهٗ وَبَصَرَهٗ فَتَبَارَكَ اللّٰهُ اَحْسَنُ الْخَالِقِينَ ۔ (مسلم، احمد)

"ಅಲ್ಲಾಹುಮ್ಮ ಲಕ ಸಜದ್ತು ವಬಿಕ ಆಮನ್ತು ವಲಕ ಅಸ್ಲಮ್ತು ಸಜದ ವಜ್‌ಹಿಯ ಲಿಲ್ಲದೀ ಖಲಕಹೂ ಫಸವ್ವರಹೂ ಫ ಅಹ್ಸನ ಸುವರಹೂ ಫಶಕ್ಕ ಸಮ್‌ಅಹೂ ವಬಸರಹೂ ಫತಬಾರಕಲ್ಲಾಹು ಅಹ್ಸನುಲ್ ಖಾಲಿಕೀನ್."

ಅರ್ಥ: ಓ ಅಲ್ಲಾಹ್! ನಾನು ನಿನಗೆ ಸುಜೂದ್ ಮಾಡಿದೆ. ನಿನ್ನ ಮೇಲೆ ವಿಶ್ವಾಸವಿರಿಸಿದೆ ಮತ್ತು ನನ್ನನ್ನು ನಿನಗೊಪ್ಪಿಸಿದೆ. ನನ್ನ ಮುಖವು ಅದನ್ನು ಸೃಷ್ಟಿಸಿದ, ಅದಕ್ಕೆ ಸುಂದರ ರೂಪ ನೀಡಿದ, ಅದಕ್ಕೆ ಕಿವಿ-ಕಣ್ಣುಗಳನ್ನು ನೀಡಿದ ಅಲ್ಲಾಹನಿಗೆ ಸುಜೂದ್ ಮಾಡಿತು. ಆದ್ದರಿಂದ ಅತ್ಯುತ್ತಮ ಸೃಷ್ಟಿಕರ್ತನಾದ ಅಲ್ಲಾಹನು ಮಂಗಳ ದಾಯಕನಾಗಿದ್ದಾನೆ. (ವರದಿ: ಹ. ಅಲೀ(ರ)- ಮುಸ್ಲಿಮ್, ಅಹ್ಮದ್)

2) ಪ್ರವಾದಿ(ಸ) ತಹಜ್ಜುದ್ ನಮಾಝ್‌ನ ವೇಳೆ ಸುಜೂದ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ اجْعَلْ فِي قَلْبِي نُورًا وَّفِي سَمْعِي نُورًا وَّفِي بَصَرِي نُورًا وَّ عَنْ يَمِينِي نُورًا وَّعَنْ يَسَارِي نُورًا وَّاَمَامِي نُورًا وَّخَلْفِي نُورًا وَّفَوْقِي نُورًا وَّ تَحْتِي نُورًا وَّاجْعَلْنِي نُورًا (احمد، مسلم)

**"ಅಲ್ಲಾಹುಮ್ಮಜ್‌ಅಲ್ ಫೀ ಕಲ್ಬೀ ನೂರನ್ ವಫೀ ಸಮ್‌ಈ ನೂರನ್ ವಫೀ ಬಸರೀ ನೂರನ್ ವ ಅಂಯಮೀನೀ ನೂರನ್ ವ ಅಂಯಸಾರೀ ನೂರನ್ ವ ಅಮಾಮೀ ನೂರನ್ ವ ಖಲ್ಫೀ ನೂರನ್ ವಫೌಕೀ ನೂರನ್ ವ ತಹ್ತೀ ನೂರನ್ ವಜ್‌ಅಲ್‌ನೀ ನೂರನ್."**

ಅರ್ಥ: ಓ ಅಲ್ಲಾಹ್! ನನ್ನ ಮನದಲ್ಲಿ ಪ್ರಕಾಶಮಾಡು. ನನ್ನ ಕಿವಿಯಲ್ಲಿ ಪ್ರಕಾಶ ಮಾಡು. ನನ್ನ ಕಣ್ಣುಗಳಲ್ಲಿ ಪ್ರಕಾಶ ಮಾಡು. ನನ್ನ ಬಲಭಾಗದಲ್ಲಿ ಪ್ರಕಾಶ ಮಾಡು. ನನ್ನ ಎಡಭಾಗದಲ್ಲಿ ಪ್ರಕಾಶ ಮಾಡು. ನನ್ನ ಮುಂದೆ ಪ್ರಕಾಶ ಮಾಡು. ನನ್ನ ಹಿಂದೆ ಪ್ರಕಾಶ ಮಾಡು. ನನ್ನ ಮೇಲೆ ಪ್ರಕಾಶ ಮಾಡು. ನನ್ನ ಕೆಳಗೆ ಪ್ರಕಾಶ ಮಾಡು ಮತ್ತು ನನ್ನನ್ನೂ ಪ್ರಕಾಶಮಾನಗೊಳಿಸು. (ವರದಿ: ಹ. ಇಬ್ನು ಅಬ್ಬಾಸ್(ರ)- ಅಹ್ಮದ್, ಮುಸ್ಲಿಮ್)

3) ಒಂದು ರಾತ್ರಿ ನಾನು ಪ್ರವಾದಿವರ್ಯರನ್ನು(ಸ) ಅವರ ಹಾಸಿಗೆಯಲ್ಲಿ ಕಾಣಲಿಲ್ಲ. ನಾನು ಕೈಯಿಂದ ತಡಕಾಡಿದೆ. ಆಗ ಅವರು ನಮಾಝ್ ಮಾಡುತ್ತಿದ್ದರು. ಸುಜೂದ್‌ನಲ್ಲಿ ಅವರು ಈ ರೀತಿ ಪ್ರಾರ್ಥಿಸುತ್ತಿದ್ದರು-

رَبِّ اَعْطِ نَفْسِی تَقْوَاهَا وَزَكِّهَا اَنْتَ خَيْرُ مَنْ زَكَّاهَا، اَنْتَ وَلِيُّهَا وَمَوْلَاهَا۔ (احمد)

**"ರಬ್ಬಿ ಅಅ್ತಿ ನಫ್‌ಸೀ ತಕ್‌ವಾಹಾ ವ ಝುಕ್ಕಿಹಾ ಅಂತಖೈರು ಮನ್ ಝುಕ್ಕಾಹಾ. ಅಂತ ವಲಿಯ್ಯುಹಾ ವಮೌಲಾಹಾ."**

ಅರ್ಥ: ಓ ನನ್ನ ಪ್ರಭೂ! ನನ್ನ ಆತ್ಮಕ್ಕೆ ಅದರ ಭಕ್ತಿಯನ್ನು ದಯಪಾಲಿಸು ಮತ್ತು ಅದನ್ನು ಸಂಸ್ಕರಿಸು. ನೀನೇ ಅದನ್ನು ಅತ್ಯುತ್ತಮವಾಗಿ ಸಂಸ್ಕರಿಸಬಲ್ಲೆ. ನೀನೇ ಅದರ ಒಡೆಯ ಮತ್ತು ಕಾರ್ಯನಿರ್ವಾಹಕನಾಗಿರುವೆ. (ವರದಿ: ಹ. ಆಯಿಶಾ(ರ)- ಅಹ್ಮದ್)

4) ಪ್ರವಾದಿ(ಸ) ಸುಜೂದ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ اغْفِرْلِی ذَنْبِی كُلَّهٗ دِقَّهٗ وَجُلَّهٗ، اَوَّلَهٗ وَاٰخِرَهٗ، وَ عَلَانِيَتَهٗ وَسِرَّهٗ۔ (مسلم، ابوداؤد)

**"ಅಲ್ಲಾಹುಮ್ಮಗ್‌ಫಿರ್ಲೀ ದನ್‌ಬೀ ಕುಲ್ಲಹೂ ದಿಕ್ಕಹೂ ವಜುಲ್ಲಹೂ ಅವ್ವಲಹೂ ವ ಆಖಿರಹೂ ವ ಅಲಾನಿಯತಹೂ ವಸಿರ್ರಹೂ."**

ಅರ್ಥ: ಓ ಅಲ್ಲಾಹ್! ನನ್ನೆಲ್ಲ ಪಾಪಗಳನ್ನೂ ಕ್ಷಮಿಸಿಬಿಡು. ಚಿಕ್ಕ, ದೊಡ್ಡ, ಹಿಂದಿನ, ನಂತರದ, ಬಹಿರಂಗ, ರಹಸ್ಯವಾದ (ಎಲ್ಲ ಪಾಪಗಳನ್ನು).

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಅಬೂ ದಾವೂದ್)

5) ಒಂದು ರಾತ್ರಿ ನಾನು ಪ್ರವಾದಿ(ಸ) ಅವರನ್ನು ಕಾಣಲಿಲ್ಲ. ಅವರು ಸುಜೂದ್‌ನಲ್ಲಿದ್ದರು ಮತ್ತು ಈ ದುಆ ಪಠಿಸುತ್ತಿದ್ದರು:

اَللّٰهُمَّ اِنِّی اَعُوذُ بِرِضَاكَ مِنْ سَخَطِكَ وَاَعُوذُ بِمُعَافَاتِكَ مِنْ عُقُوبَتِكَ وَاَعُوذُ بِكَ مِنْكَ، لَآ اُحْصِی ثَنَـآءً عَلَیْكَ، اَنْتَ كَمَا اَثْنَیْتَ عَلَی نَفْسِكَ۔ (مسلم، ابوداؤد، ترمذی)

"ಅಲ್ಲಾಹುಮ್ಮ ಇನ್ನೀ ಅಊದು ಬಿರದಾಕ ಮಿನ್ ಸಖತಿಕ ವ ಅಊದು ಬಿಮುಆಫಾತಿಕ ಮಿನ್ ಉಕೂಬತಿಕ ವ ಅಊದುಬಿಕ ಮಿನ್‌ಕ ಲಾ ಉಹ್‌ಸೀ ಸನಾಅ ಅಲೈಕ ಅಂತ ಕಮಾ ಅಸ್‌ನೈತ ಅಲಾ ನಫ್‌ಸಿಕ."

ಅರ್ಥ: ಓ ಅಲ್ಲಾಹ್! ನಾನು ನಿನ್ನ ಕ್ರೋಧದಿಂದ ನಿನ್ನ ಮೆಚ್ಚುಗೆಯ ಅಭಯ ಯಾಚಿಸುತ್ತೇನೆ. ನಿನ್ನ ಶಿಕ್ಷೆಯಿಂದ ನಿನ್ನ ಕ್ಷಮಾಶೀಲತೆಯ ಅಭಯ ಯಾಚಿಸುತ್ತೇನೆ. ನಾನು ನಿನ್ನಿಂದ ನಿನ್ನ ಅಭಯವನ್ನು ಯಾಚಿಸುತ್ತೇನೆ. ನಾನು ನಿನ್ನ ಸ್ತುತಿ ಸ್ತೋತ್ರಗಳನ್ನು ಮಾಡಲು ಶಕ್ತನಲ್ಲ. ನೀನು ನಿನ್ನ ಗುಣಗಾನ ಮಾಡಿದಂತೆಯೇ ಇರುವೆ.

(ವರದಿ: ಹ. ಆಯಿಶಾ(ರ)- ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

6) ಒಂದು ರಾತ್ರಿ ನಾನು ಪ್ರವಾದಿ(ಸ) ಅವರನ್ನು ಕಾಣಲಿಲ್ಲ. ಅವರು ರುಕೂಅ್ ಅಥವಾ ಸುಜೂದ್ ಮಾಡುತ್ತಾ ಈ ದುಆ ಪಠಿಸುತ್ತಿದ್ದರು.

سُبْحَانَكَ اَللّٰهُمَّ وَبِحَمْدِكَ لَآاِلٰهَ اِلَّآ اَنْتَ

"ಸುಬ್‌ಹಾನಕ ಅಲ್ಲಾಹುಮ್ಮ ವಬಿಹಮ್‌ದಿಕ ಲಾ ಇಲಾಹ ಇಲ್ಲಾ ಅನ್ತ."

ಅರ್ಥ: ಓ ಅಲ್ಲಾಹ್! ನೀನು ಪರಮ ಪಾವನನು. ನಾನು ನಿನ್ನನ್ನು ಸ್ತುತಿಸುತ್ತೇನೆ. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. [ವರದಿ: ಹ. ಆಯಿಶಾ(ರ)]

7) ಪ್ರವಾದಿ(ಸ) ಸುಜೂದ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ اغْفِرْلِی خَطِیْئَتِی وَجَهْلِی وَاِسْرَافِی فِیٓ اَمْرِی، وَمَآ اَنْتَ اَعْلَمُ بِهِ مِنِّی، اَللّٰهُمَّ اغْفِرْلِی جِدِّی وَهَزْلِی وَخَطَئِی وَعَمْدِی وَكُلُّ ذٰلِكَ عِنْدِی۔ اَللّٰهُمَّ اغْفِرْلِی مَا قَدَّمْتُ وَمَآ اَخَّرْتُ وَمَآ اَسْرَرْتُ وَمَا اَعْلَنْتُ اَنْتَ اِلٰهِی لَآاِلٰهَ اِلَّآ اَنْتَ۔ (احمد، مسلم)

ಅಲ್ಲಾಹುಮ್ಮಗ್‌ಫಿರ್ಲೀ ಖತೀಅತೀ ವ ಜಹ್‌ಲೀ ವ ಇಸ್ರಾಫೀ ಫೀ ಅಮ್ರೀ. ವಮಾ ಅನ್ತ ಅಅ್‌ಲಮು ಬಿಹೀ ಮಿನ್ನೀ. ಅಲ್ಲಾಹುಮ್ಮಗ್‌ಫಿರ್ಲೀ ಜಿದ್ದೀ ವಹಝ್‌ಲೀ ವಖತಈ ವಅಮದೀ ವಕುಲ್ಲು ದಾಲಿಕ ಇಂದೀ. ಅಲ್ಲಾಹುಮ್ಮಗ್‌ಫಿರ್ಲೀ ಮಾ ಕದ್ದಮ್ತು ವಮಾ ಅಖ್ಖರ್ತು ವಮಾ ಅಸ್‌ರರ್ತು ವಮಾ ಅಅ್‌ಲನ್ತು ಅನ್ತ ಇಲಾಹೀ ಲಾ ಇಲಾಹ ಇಲ್ಲಾ ಅನ್ತ."

ಅರ್ಥ: ಓ ಅಲ್ಲಾಹ್! ನನ್ನ ತಪ್ಪುಗಳನ್ನು ಮತ್ತು ಅಜ್ಞಾನವನ್ನು ಕ್ಷಮಿಸಿಬಿಡು. ನನ್ನಿಂದ ಆದ ಅತಿರೇಕವನ್ನು ಕ್ಷಮಿಸಿಬಿಡು, ನನ್ನಲ್ಲಿರುವ ಮತ್ತು ನನಗಿಂತ ಹೆಚ್ಚು ನೀನು ತಿಳಿದಿರುವ ಪಾಪಗಳನ್ನು ಕ್ಷಮಿಸಿಬಿಡು. ಗಂಭೀರ ಮತ್ತು ಗಂಭೀರವಲ್ಲದ ನನ್ನ ತಪ್ಪುಗಳನ್ನು ಅಥವಾ ಉದ್ದೇಶಪೂರ್ವಕ ಮಾಡಿದ ಪಾಪಗಳನ್ನು ಕ್ಷಮಿಸಿಬಿಡು. ಇವೆಲ್ಲವೂ ನನ್ನಲ್ಲಿವೆ. ನಾನು ಹಿಂದೆ ಮಾಡಿದ ಪಾಪಗಳನ್ನು ಮತ್ತು ಅನಂತರ ಮಾಡಿದ ಪಾಪಗಳನ್ನು ರಹಸ್ಯವಾಗಿ ಮಾಡಿದ ಪಾಪಗಳನ್ನು ಬಹಿರಂಗವಾಗಿ ಮಾಡಿದ ಪಾಪಗಳನ್ನು ಎಲ್ಲವನ್ನೂ ಕ್ಷಮಿಸಿಬಿಡು. ನೀನೇ ನನ್ನ ಆರಾಧ್ಯ. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ.

ಸುಜೂದ್‌ನಲ್ಲಿ ದುಆ ಬಹಳ ಬೇಗ ಸ್ವೀಕೃತವಾಗುತ್ತದೆ. ಪ್ರವಾದಿ(ಸ) ಹೇಳಿರುವರು: "ನಿಮ್ಮ ಪೈಕಿ ಯಾರಾದರೂ ಸುಜೂದ್‌ನ ಸ್ಥಿತಿಯಲ್ಲಿರುವಾಗ ಅಲ್ಲಾಹನಿಗೆ ಅತ್ಯಂತ ನಿಕಟನಾಗಿರುತ್ತಾನೆ. ಆದ್ದರಿಂದ ನೀವು ಅದರಲ್ಲಿ ಹೆಚ್ಚು ದುಆ ಮಾಡಿರಿ."

ಸುಜೂದ್ ಮತ್ತು ರುಕೂಅ್‌ನಲ್ಲಿ ಕುರ್‌ಆನ್ ಓದುವುದು ಧರ್ಮಸಮ್ಮತವಲ್ಲ. ಪ್ರವಾದಿ(ಸ) ಹೀಗೆ ಹೇಳಿರುವರು:

"ರುಕೂಅ್ ಮತ್ತು ಸುಜೂದ್‌ನಲ್ಲಿ ಕುರ್‌ಆನ್ ಓದುವುದರಿಂದ ನನ್ನನ್ನು ತಡೆಯಲಾಗಿದೆ." (ಅಹ್ಮದ್, ಮುಸ್ಲಿಮ್)

## 14. ಎರಡು ಸುಜೂದ್‌ಗಳ ಮಧ್ಯೆ ಕುಳಿತುಕೊಳ್ಳುವ ಕ್ರಮ ಮತ್ತು ದುಆ:

ಎರಡು ಸುಜೂದ್‌ಗಳ ಮಧ್ಯೆ ಕುಳಿತುಕೊಳ್ಳುವ ಅತ್ಯುತ್ತಮ ಕ್ರಮವೇನೆಂದರೆ ಎಡಕಾಲನ್ನು ಹರಡಿ ಅದರ ಮೇಲೆ ಕುಳಿತುಕೊಳ್ಳುವುದು ಮತ್ತು ಬಲಕಾಲನ್ನು ನೇರವಾಗಿ ನಿಲ್ಲಿಸುವುದಾಗಿದೆ. ಅದರ ಬೆರಳುಗಳು ಕಿಬ್ಲಾಭಿಮುಖವಾಗಿರಬೇಕು.

"ಪ್ರವಾದಿ(ಸ) ಎಡಕಾಲನ್ನು ಹರಡಿ ಬಲಕಾಲನ್ನು ನೇರವಾಗಿ ನಿಲ್ಲಿಸುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

"ಬಲಕಾಲನ್ನು ನೇರವಾಗಿ ನಿಲ್ಲಿಸಿ ಅದರ ಬೆರಳುಗಳನ್ನು ಕಿಬ್ಲಾಭಿಮುಖವಾಗಿಟ್ಟು ಎಡಕಾಲಿನ ಮೇಲೆ ಕುಳಿತುಕೊಳ್ಳುವುದಾಗಿದೆ." (ವರದಿ: ಹ. ಇಬ್ನು ಉಮರ್(ರ)- ನಸಾಈ)

ಹನಫೀ ಕ್ರಮದಂತೆ ಮಹಿಳೆಯರು ನೆಲದಲ್ಲಿ ಕುಳಿತು ತಮ್ಮ ಎರಡೂ ತೊಡೆಗಳನ್ನು ಸೇರಿಸಿಟ್ಟು ಎಡಕಾಲನ್ನು ಬಲ ತೊಡೆಯ ಅಡಿಯಲ್ಲಿಡಬೇಕು.

ಎರಡೂ ಕಾಲುಗಳನ್ನು ನೇರವಾಗಿ ನಿಲ್ಲಿಸಿ ನೆಲದ ಮೇಲೆ ಕುಳಿತುಕೊಳ್ಳುವುದು, ಕಾಲಿನ ಹಿಂಭಾಗದ ಮೇಲೆ ಕುಳಿತುಕೊಳ್ಳುವುದು ಅಥವಾ ಎರಡೂ ಕಾಲುಗಳನ್ನು ಹರಡಿಟ್ಟು ಅವುಗಳ ಮೇಲೆ ಕುಳಿತುಕೊಳ್ಳುವುದು ಎಲ್ಲ ಕರ್ಮಶಾಸ್ತ್ರಜ್ಞರ ಪ್ರಕಾರ ಅನಪೇಕ್ಷಿತವಾಗಿದೆ.

ಪ್ರವಾದಿ(ಸ) ನನ್ನನ್ನು (ನಮಾಝ್‌ನ ವೇಳೆ) ಮೂರು ವಿಷಯಗಳಿಂದ ತಡೆದಿರುವರು- 1) ಕೋಳಿಯಂತೆ ಕುಕ್ಕುವುದರಿಂದ. (ಅಂದರೆ ಬೇಗ ಬೇಗ ಸುಜೂದ್ ಮಾಡುವುದರಿಂದ) 2) ನಾಯಿಯಂತೆ ಕುಳಿತುಕೊಳ್ಳುವುದರಿಂದ. (ಎರಡು ಸುಜೂದ್‌ಗಳ ಮಧ್ಯೆ ಎರಡೂ ಕಾಲುಗಳನ್ನು ಹರಡಿ ಅವುಗಳ ಮೇಲೆ ಕುಳಿತುಕೊಳ್ಳುವುದರಿಂದ) ಮತ್ತು 3) ನರಿಯಂತೆ ಅತ್ತಿತ್ತ ನೋಡುವುದರಿಂದ. (ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಬೈಹಕಿ, ತಬ್ರಾನಿ)

ಎರಡೂ ಸುಜೂದ್‌ಗಳ ಮಧ್ಯೆ ಈ ಕೆಳಗಿನ ಎರಡು ದುಆಗಳನ್ನು ಮಾಡಬಹುದೆಂದು ಹದೀಸ್‌ಗಳಲ್ಲಿ ವರದಿಯಾಗಿವೆ:

1) رَبِّ اغْفِرْ لِي، رَبِّ اغْفِرْ لِي (نسائی، ابن ماجة)

"ರಬ್ಬಿಗ್‌ಫಿರ್ಲೀ, ರಬ್ಬಿಗ್‌ಫಿರ್ಲೀ."

ಅರ್ಥ: ಓ ಅಲ್ಲಾಹ್! ನನ್ನನ್ನು ಕ್ಷಮಿಸಿಬಿಡು, ಓ ಅಲ್ಲಾಹ್! ನನ್ನನ್ನು ಕ್ಷಮಿಸಿಬಿಡು. (ನಸಾಈ, ಇಬ್ನು ಮಾಜಃ)

ಪ್ರವಾದಿ(ಸ) ಎರಡು ಸುಜೂದ್‌ಗಳ ಮಧ್ಯೆ ಈ ದುಆ ಪಠಿಸುತ್ತಿದ್ದರು.

2) اَللّٰهُمَّ اغْفِرْ لِي وَارْحَمْنِي وَعَافِنِي وَاهْدِنِي وَارْزُقْنِي-

(ابو داؤد، ابن ماجة، حاکم، ترمذی)

"ಅಲ್ಲಾಹುಮ್ಮಗ್‌ಫಿರ್ಲೀ ವರ್ಹಮ್‌ನೀ ವಆಫಿನೀ ವಹ್‌ದಿನೀ ವರ್ಝುಕ್‌ನೀ."

ಅರ್ಥ: ಓ ಅಲ್ಲಾಹ್! ನನ್ನನ್ನು ಕ್ಷಮಿಸಿ ಬಿಡು, ನನ್ನ ಮೇಲೆ ಕರುಣೆತೋರು, ನನಗೆ ಕ್ಷೇಮ, ಸನ್ಮಾರ್ಗದರ್ಶನ ಮತ್ತು ಜೀವನಾಧಾರ ದಯಪಾಲಿಸು.

(ವರದಿ: ಇಬ್ನು ಅಬ್ಬಾಸ್(ರ)- ಅಬೂ ದಾವೂದ್, ಇಬ್ನು ಮಾಜಃ, ಹಾಕಿಮ್, ತಿರ್ಮಿದಿ)

ಈ ಎರಡೂ ಹದೀಸ್‌ಗಳು ವರದಿಯ ದೃಷ್ಟಿಯಿಂದ ದ್ವಿತೀಯ ದರ್ಜೆಯದ್ದಾಗಿವೆ. (ಹಸನ್) ಆದ್ದರಿಂದ ಹನಫೀ ಕ್ರಮದಂತೆ ಎರಡು ಸುಜೂದ್‌ಗಳ ಮಧ್ಯೆ ದುಆದ ಪ್ರಸ್ತಾಪವಿಲ್ಲ. ಇಮಾಮ್ ಶಾಫಿಈಯವರ(ರ) ಪ್ರಕಾರ ಅದು ಸುನ್ನತ್ ಆಗಿದೆ.

**15. ಸುಜೂದ್ ಮತ್ತು ನಿಲ್ಲುವಿಕೆಯ ಮಧ್ಯೆ ಕುಳಿತುಕೊಳ್ಳುವುದು:**

ಪ್ರಥಮ ಮತ್ತು ತೃತೀಯ ರಕಅತ್‌ಗಳಲ್ಲಿ ಎರಡೂ ಸುಜೂದ್‌ಗಳನ್ನು ಪೂರ್ಣಗೊಳಿಸಿದ ಬಳಿಕ ದ್ವಿತೀಯ ಮತ್ತು ಚತುರ್ಥ ರಕಅತ್‌ಗಾಗಿ ಸ್ವಲ್ಪ ಸಮಯ ಕುಳಿತುಕೊಂಡು ಏಳುವುದು.

"ಪ್ರವಾದಿವರ್ಯರು(ಸ) ನಮಾಝ್ ಮಾಡುವುದನ್ನು ನಾನು ನೋಡುತ್ತಿದ್ದೆ. ಅವರು ಬೆಸಸಂಖ್ಯೆಯ ರಕಅತ್‌ನಲ್ಲಿರುವಾಗ (ಮುಂದಿನ ರಕಅತ್‌ಗಾಗಿ) ಏಳುವುದಕ್ಕೆ ಮೊದಲು ನೇರವಾಗಿ ಕುಳಿತುಕೊಳ್ಳುತ್ತಿದ್ದರು."

(ವರದಿ: ಮಾಲಿಕ್ ಬಿನ್ ಹುವೈರಿಸ್(ರ)- ಬುಖಾರಿ, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ)

ಶಾಫಿಈ ಕ್ರಮದಂತೆ ಇದು ಸುನ್ನತ್ ಆದರೂ ಹನಫೀ ಕ್ರಮದಂತೆ ಸುನ್ನತ್ ಅಲ್ಲ. ಅವರ ಅಭಿಪ್ರಾಯದಂತೆ ಪ್ರವಾದಿವರ್ಯರು(ಸ) ಯಾವುದಾದರೂ ಕಾರಣದಿಂದಾಗಿ ಹಾಗೆ ಕುಳಿತಿರಬಹುದು; ಅನ್ಯಥಾ ಅವರ ನಮಾಝ್‌ನ ಕ್ರಮವನ್ನು ವಿವರಿಸುವ ಹದೀಸ್‌ಗಳಲ್ಲಿ ಅದರ ಪ್ರಸ್ತಾಪ ಬರುತ್ತಿತ್ತು. (ನೈಲುಲ್ ಔತಾರ್- ಭಾಗ- 2, ಪುಟ: 226)

## 16. ಅತ್ತಹಿಯ್ಯಾತ್‌ಗೆ ಕುಳಿತುಕೊಳ್ಳುವ ಕ್ರಮ:

ಅತ್ತಹಿಯ್ಯಾತ್‌ಗಾಗಿ ಕುಳಿತುಕೊಳ್ಳುವುದು ಮತ್ತು 'ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್' ಪಠಿಸುವಾಗ ತೋರ್ಬೆರಳನ್ನು ಚಾಚಿ ಸುಜೂದ್‌ನ ಸ್ಥಳದ ಕಡೆಗೆ ಸಂಜ್ಞೆ ಮಾಡುವುದು ಸುನ್ನತ್ ಆಗಿದೆ.

"ಪ್ರವಾದಿ(ಸ) ಅತ್ತಹಿಯ್ಯಾತ್‌ಗಾಗಿ ಕುಳಿತುಕೊಳ್ಳುವಾಗ ಬಲಕೈಯನ್ನು ಬಲತೊಡೆಯ ಮೇಲೆ ಮತ್ತು ಎಡಕೈಯನ್ನು ಎಡತೊಡೆಯ ಮೇಲೆ ಇರಿಸುತ್ತಿದ್ದರು. (ಬಲಕೈಯ) ಎಲ್ಲ ಬೆರಳುಗಳನ್ನು ಮಡಚಿಟ್ಟು ತೋರ್ಬೆರಳಿನಿಂದ ಸಂಜ್ಞೆ ಮಾಡುತ್ತಿದ್ದರು."

(ವರದಿ: ಹ. ಇಬ್ನು ಉಮರ್(ರ)- ಮುಸ್ಲಿಮ್)

"...ಮತ್ತು ಪ್ರವಾದಿ(ಸ) ತಮ್ಮ ಬೆರಳನ್ನು ಎತ್ತಿದರು. ಅವರು ಅದನ್ನು ಅಲ್ಲಾಡಿಸುವುದನ್ನು ಮತ್ತು ದುಆ ಪಠಿಸುವುದನ್ನು ನಾನು ನೋಡಿದೆ."

(ವರದಿ: ಹ. ವಾಇಲ್ ಬಿನ್ ಹಜರ್(ರ)- ಅಬೂ ದಾವೂದ್)

ಹನಫೀ ಕ್ರಮದಂತೆ 'ಲಾ ಇಲಾಹ' ಎನ್ನುವಾಗ ಮತ್ತು ಶಾಫಿಈ ಕ್ರಮದಂತೆ 'ಇಲ್ಲಲ್ಲಾಹ್' ಎನ್ನುವಾಗ ಬೆರಳೆತ್ತಬೇಕು.

ಪ್ರಥಮ ಅತ್ತಹಿಯ್ಯಾತ್‌ಗೆ ಕುಳಿತುಕೊಳ್ಳುವ ಭಂಗಿಯು ಎರಡು ಸುಜೂದ್‌ಗಳ ಮಧ್ಯೆ ಕುಳಿತುಕೊಳ್ಳುವ ಭಂಗಿಯೇ ಆಗಿದೆ. ಆದರೆ ಎರಡನೆಯ ಅತ್ತಹಿಯ್ಯಾತ್‌ಗೆ ಕುಳಿತುಕೊಳ್ಳುವಾಗ ಬಲಕಾಲನ್ನು ನೇರವಾಗಿ ನಿಲ್ಲಿಸಬೇಕು. ಎಡಕಾಲನ್ನು ಹರಡಿ ಬಲಕಾಲಿನ ಕೆಳಗಿಟ್ಟು ನೆಲದಲ್ಲಿ ಕುಳಿತುಕೊಳ್ಳಬೇಕು.

"ಪ್ರವಾದಿ(ಸ) ಎರಡನೆಯ ರಕಅತ್‌ನ ನಂತರ ಕುಳಿತಾಗ ತಮ್ಮ ಎಡಕಾಲನ್ನು ಹರಡಿ ಅದರ ಮೇಲೆ ಕುಳಿತರು ಮತ್ತು ಬಲಗಾಲನ್ನು ನೇರವಾಗಿ ನಿಲ್ಲಿಸಿದರು. ಕೊನೆಯ ರಕಅತ್‌ನಲ್ಲಿ ತಮ್ಮ ಎಡಕಾಲನ್ನು ಎಳೆದು ಬಲಕಾಲನ್ನು ನಿಲ್ಲಿಸಿ ನೆಲದ ಮೇಲೆ ಕುಳಿತರು."

(ವರದಿ: ಅಬೂ ಹುಮೈದ್(ರ)- ಬುಖಾರಿ)

ಹನಫೀ ಕ್ರಮದಂತೆ ಎಲ್ಲ ಸಂದರ್ಭದಲ್ಲೂ ಒಂದೇ ಭಂಗಿಯಲ್ಲಿ ಕುಳಿತುಕೊಳ್ಳಬೇಕು. ಎಡಕಾಲನ್ನು ಹರಡಿ ಅದರ ಮೇಲೆ ಕುಳಿತು ಬಲಕಾಲನ್ನು ನಿಲ್ಲಿಸಿಡಬೇಕು. ಶಾಫಿಈ ಕ್ರಮದಂತೆ ಕೊನೆಯ ಅತ್ತಹಿಯ್ಯಾತ್‌ನಲ್ಲಿ ಮೇಲಿನ ಭಂಗಿಯಲ್ಲಿ ಸರಿಯಾಗಿ ಕುಳಿತುಕೊಳ್ಳಬೇಕು.

**17. ಸಲಾತ್:** ನಮಾಝ್‌ನ ಕೊನೆಯ ರಕಅತ್‌ನಲ್ಲಿ ಅತ್ತಹಿಯ್ಯಾತ್‌ನ ನಂತರ ಪ್ರವಾದಿವರ್ಯರ(ಸ) ಮೇಲೆ ಸಲಾತ್ ಪಠಿಸುವುದು ಸುನ್ನತ್ ಆಗಿದೆ.

ಇಮಾಮ್ ಶಾಫಿಈಯವರ(ರ) ಪ್ರಕಾರ ಕೊನೆಯ ರಕಅತ್‌ನಲ್ಲಿ ಅತ್ತಹಿಯ್ಯಾತ್‌ನ ನಂತರ ಸಲಾತ್ ಪಠಿಸುವುದು ಫರ್ಝ್(ಕಡ್ಡಾಯ) ಆಗಿದೆ. ಆದರೆ ಇತರ ಕರ್ಮಶಾಸ್ತ್ರ ವಿದ್ವಾಂಸರ ಪ್ರಕಾರ ಅದು ಸುನ್ನತ್ ಆಗಿದೆ.

ಅನೇಕ ಹದೀಸ್‌ಗಳಲ್ಲಿ ಸಲಾತ್‌ನ ವಿಭಿನ್ನ ರೂಪಗಳು ವರದಿಯಾಗಿವೆ. ಅವುಗಳ ಪೈಕಿ ಇಮಾಮ್ ಅಬೂ ಹನೀಫಾ(ರ) ಅಳವಡಿಸಿದ ಸಲಾತ್ ಹೀಗಿದೆ:

اَللّٰهُمَّ صَلِّ عَلٰى مُحَمَّدٍ وَ عَلٰى اٰلِ مُحَمَّدٍ كَمَا صَلَّيْتَ عَلٰى اِبْرَاهِيمَ وَعَلٰى اٰلِ اِبْرَاهِيمَ اِنَّكَ حَمِيدٌ مَّجِيدٌ۔ اَللّٰهُمَّ بَارِكْ عَلٰى مُحَمَّدٍ وَ عَلٰى اٰلِ مُحَمَّدٍ كَمَا بَارَكْتَ عَلٰى اِبْرَاهِيمَ وَ عَلٰى اٰلِ اِبْرَاهِيمَ اِنَّكَ حَمِيدٌ مَّجِيدٌ۔

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ವ ಅಲಾ ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್. ಅಲ್ಲಾಹುಮ್ಮ ಬಾರಿಕ್ ಅಲಾ ಮುಹಮ್ಮದಿನ್ ವ ಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್ತ ಅಲಾ ಇಬ್ರಾಹೀಮ ವ ಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್."

ಅರ್ಥ: ಓ ಅಲ್ಲಾಹ್! ಮುಹಮ್ಮದ್ ಮತ್ತು ಅವರ ಅನುಯಾಯಿಗಳ ಮೇಲೆ ಅನುಗ್ರಹ ತೋರು, ಇಬ್ರಾಹೀಮ್ ಮತ್ತು ಅವರ ಅನುಯಾಯಿಗಳ ಮೇಲೆ ನೀನು ಅನುಗ್ರಹ ತೋರಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯನೂ ಮಹಿಮಾವಂತನೂ ಆಗಿರುವೆ. ಓ ಅಲ್ಲಾಹ್! ಮುಹಮ್ಮದರಿಗೆ ಮತ್ತು ಅವರ ಅನುಯಾಯಿಗಳಿಗೆ ಸಮೃದ್ಧಿ ನೀಡು, ಇಬ್ರಾಹೀಮ್ ಮತ್ತು ಅವರ ಅನುಯಾಯಿಗಳಿಗೆ ನೀನು ಸಮೃದ್ಧಿ ನೀಡಿದಂತೆ. ಖಂಡಿತ ವಾಗಿಯೂ ನೀನು ಸ್ತುತ್ಯರ್ಹನೂ ಮಹಾಮಹಿಮನೂ ಆಗಿರುವೆ.

ಶಾಫಿಈ ಕ್ರಮದಂತೆ ಪಠಿಸಲಾಗುವ ಸಲಾತ್ ಈ ರೀತಿ ಇದೆ:

اَللّٰهُمَّ صَلِّ عَلٰى مُحَمَّدٍ وَ عَلٰى اٰلِ مُحَمَّدٍ كَمَا صَلَّيْتَ عَلٰى اِبْرَاهِيمَ وَعَلٰى اٰلِ اِبْرَاهِيمَ وَبَارِكْ عَلٰى مُحَمَّدٍ وَ عَلٰى اٰلِ مُحَمَّدٍ كَمَا بَارَكْتَ عَلٰى اِبْرَاهِيمَ وَ عَلٰى اٰلِ اِبْرَاهِيمَ فِي الْعَالَمِينَ اِنَّكَ حَمِيدٌ مَّجِيدٌ۔

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಇಬ್ರಾಹೀಮ ವ ಅಲಾ ಆಲಿ ಇಬ್ರಾಹೀಮ ವಬಾರಿಕ್ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್ತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಫಿಲ್ ಆಲಮೀನ ಇನ್ನಕ ಹಮೀದುಮ್ಮಜೀದ್."

ಅರ್ಥ: ಓ ಅಲ್ಲಾಹ್! ಮುಹಮ್ಮದ್ ಮತ್ತು ಅವರ ಅನುಯಾಯಿಗಳ ಮೇಲೆ ಅನುಗ್ರಹ ತೋರು. ಇಬ್ರಾಹೀಮ್ ಮತ್ತು ಅವರ ಅನುಯಾಯಿಗಳ ಮೇಲೆ ನೀನು ಅನುಗ್ರಹ ತೋರಿದಂತೆ ಮತ್ತು ಮುಹಮ್ಮದ್ ಮತ್ತು ಅವರ ಅನುಯಾಯಿಗಳಿಗೆ ಸಮೃದ್ಧಿ ನೀಡು. ಇಬ್ರಾಹೀಮ್ ಮತ್ತು ಅವರ ಅನುಯಾಯಿಗಳಿಗೆ ನೀನು ಸಮೃದ್ಧಿ ನೀಡಿದಂತೆ. ಇಡೀ ವಿಶ್ವದಲ್ಲಿ ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವೆ.

ನಂತರದ ಶಾಫಿಈ ಕರ್ಮಶಾಸ್ತ್ರ ಪಂಡಿತರು ಸಲಾತ್‌ನಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಹೆಸರಿನೊಂದಿಗೆ 'ಸಯ್ಯಿದಿನಾ' ಎಂದು ಸೇರಿಸಿದ್ದಾರೆ.

ಇನ್ನೊಂದು ಸಮಗ್ರ ಸಲಾತ್ ಹೀಗಿದೆ;

اَللّٰهُمَّ صَلِّ عَلٰى مُحَمَّدٍ عَبْدِكَ وَرَسُولِكَ النَّبِيِّ الْاُمِّيِّ وَعَلٰى اٰلِ مُحَمَّدٍ وَاَزْوَاجِهِ اُمَّهَاتِ الْمُؤْمِنِينَ وَذُرِّيَّتِهِ وَاَهْلِ بَيْتِهِ كَمَا صَلَّيْتَ عَلٰى اِبْرَاهِيمَ وَ عَلٰى اٰلِ اِبْرَاهِيمَ اِنَّكَ حَمِيدٌ مَّجِيدٌ۔ اَللّٰهُمَّ بَارِكْ عَلٰى مُحَمَّدِ النَّبِيِّ الْاُمِّيِّ وَعَلٰى اٰلِ مُحَمَّدٍ وَاَزْوَاجِهِ وَذُرِّيَّتِهِ كَمَا بَارَكْتَ عَلٰى اِبْرَاهِيمَ وَ عَلٰى اٰلِ اِبْرَاهِيمَ فِي الْعَالَمِينَ اِنَّكَ حَمِيدٌ مَّجِيدٌ

(بخاري، مسلم، احمد، ابوداؤد، ترمذي، ابن ماجه، نسائی)

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ಅಬ್‌ದಿಕ ವರಸೂಲಿಕನ್ನಬಿಯ್ಯಿಲ್ ಉಮಿಯ್ಯಿ ವ ಅಲಾ ಆಲಿ ಮುಹಮ್ಮದಿನ್ ವ ಅಝ್‌ವಾಜಿಹೀ ಉಮ್ಮಹಾತಿಲ್ ಮೂಮಿನೀನ ವ ದುರ್‍ರಿಯ್ಯತಿಹೀ ವ ಅಹ್ಲಿ ಬೈತಿಹೀ ಕಮಾ ಸಲ್ಲೈತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್. ಅಲ್ಲಾಹುಮ್ಮ ಬಾರಿಕ್ ಅಲಾ ಮುಹಮ್ಮದಿನಿನ್ ನಬಿಯ್ಯಿಲ್ ಉಮ್ಮಿಯ್ಯಿ ವ ಅಲಾ ಆಲಿ ಮುಹಮ್ಮದಿನ್ ವ ಅಝ್‌ವಾಜಿಹೀ ವ ದುರ್‍ರಿಯ್ಯತಿಹೀ ಕಮಾಬಾರಕ್ತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಫಿಲ್ ಆಲಮೀನ ಇನ್ನಕ ಹಮೀದುಮ್ಮಜೀದ್."

ಅರ್ಥ: ಓ ಅಲ್ಲಾಹ್! ನಿನ್ನ ದಾಸರೂ ಸಂದೇಶವಾಹಕರೂ ನಿರಕ್ಷರಿ ಪ್ರವಾದಿಯೂ ಆದ ಮುಹಮ್ಮದರ ಮತ್ತು ಅವರ ಅನುಯಾಯಿಗಳ, ಸತ್ಯವಿಶ್ವಾಸಿಗಳ ಮಾತೆಯರಾದ ಅವರ ಪತ್ನಿಯರ, ಅವರ ಸಂತತಿಗಳ ಮತ್ತು ಅವರ ಮನೆಯವರ ಮೇಲೆ ಅನುಗ್ರಹ ತೋರು. ನೀನು ಇಬ್ರಾಹೀಮ್ ಮತ್ತು ಅವರ ಅನುಯಾಯಿಗಳ ಮೇಲೆ ಅನುಗ್ರಹ ತೋರಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವೆ. ಓ ಅಲ್ಲಾಹ್! ನಿರಕ್ಷರಿ ಪ್ರವಾದಿಯಾದ ಮುಹಮ್ಮದರು, ಅವರ ಪತ್ನಿಯರು ಮತ್ತು ಅವರ ಸಂತತಿಗಳಿಗೆ ಸಮೃದ್ಧಿ ನೀಡು. ನೀನು ಇಬ್ರಾಹೀಮ್ ಮತ್ತು ಅವರ ಅನುಯಾಯಿಗಳಿಗೆ ಸಮೃದ್ಧಿ ನೀಡಿದಂತೆ. ಇಡೀ ವಿಶ್ವದಲ್ಲಿ ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವೆ.

(ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

**18. ಸಲಾಮ್‌ಗಿಂತ ಮೊದಲು ಮಾಡುವ ದುಆಗಳು:** ಸಲಾತ್‌ನ ನಂತರ ಹಾಗೂ ಸಲಾಮ್‌ಗಿಂತ ಮೊದಲು ದುಆ ಮಾಡುವುದು ಸುನ್ನತ್ ಆಗಿದೆ. ಈ ಸಂದರ್ಭಕ್ಕೆ ಪಠಿಸಲು ಹದೀಸ್‌ಗಳಲ್ಲಿ ಅನೇಕ ದುಆಗಳು ವರದಿಯಾಗಿವೆ. ಅವುಗಳ ಪೈಕಿ ಕೆಲವನ್ನು ಇಲ್ಲಿ ಕೊಡಲಾಗಿದೆ-

1) ಪ್ರವಾದಿವರ್ಯರು(ಸ) ನಮಾಝ್‌ನಲ್ಲಿ ಪಠಿಸಲು ಈ ದುಆ ಕಲಿಸಿದರು:

اَللّٰهُمَّ اِنِّى ظَلَمْتُ نَفْسِى ظُلْماً كَثِيرًا وَلَا يَغْفِرُ الذُّنُوبَ اِلَّا اَنْتَ
فَاغْفِرْلِى مَغْفِرَةً مِّنْ عِنْدِكَ وَارْحَمْنِى اِنَّكَ اَنْتَ الْغَفُورُ الرَّحِيمُ

(بخاري، مسلم)

"ಅಲ್ಲಾಹುಮ್ಮ ಇನ್ನೀ ಳಲಮ್ತು ನಫ್‌ಸೀ ಳುಲ್ಮನ್ ಕಸೀರನ್ ವಲಾ ಯಗ್ಫಿರು ದ್ದುನೂಬ ಇಲ್ಲಾ ಅನ್ತ ಫಗ್‌ಫಿರ್ಲೀ ಮಗ್ಫಿರತನ್ ಮಿನ್ ಇಂದಿಕ ವರ್ಹಮ್ನೀ ಇನ್ನಕ ಅಂತಲ್ ಗಫೂರು ರ್‍ರಹೀಮ್."

ಅರ್ಥ: ಓ ಅಲ್ಲಾಹ್! ನಾನು ನನ್ನ ಮೇಲೆಯೇ ಬಹಳ ಅಕ್ರಮವೆಸಗಿದ್ದೇನೆ. ನಿನ್ನ ಹೊರತು ಬೇರಾರೂ ಪಾಪಗಳನ್ನು ಕ್ಷಮಿಸುವವರಿಲ್ಲ. ಆದ್ದರಿಂದ ನೀನು ನಿನ್ನ ವತಿಯಿಂದ ನನ್ನನ್ನು ಕ್ಷಮಿಸಿಬಿಡು, ನನ್ನ ಮೇಲೆ ದಯೆತೋರು. ಖಂಡಿತವಾಗಿಯೂ ನೀನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುವೆ.

(ವರದಿ: ಹ. ಅಬೂಬಕರ್ ಸಿದ್ದೀಕ್(ರ)- ಬುಖಾರಿ, ಮುಸ್ಲಿಮ್)

2) ಪ್ರವಾದಿ(ಸ) ಹೇಳಿದರು: ನಿಮ್ಮ ಪೈಕಿ ಯಾರಾದರೂ ಅತ್ತಹಿಯ್ಯಾತ್ ಪಠಿಸಿದರೆ ಅವನು ನಾಲ್ಕು ವಿಷಯಗಳಿಂದ ಅಲ್ಲಾಹನ ಅಭಯ ಯಾಚಿಸಲಿ ಹಾಗೂ ಈ ದುಆ ಮಾಡಲಿ:

اَللّٰهُمَّ اِنِّى اَعُوذُ بِكَ مِنْ عَذَابِ جَهَنَّمَ وَمِنْ عَذَابِ الْقَبْرِ وَمِنْ فِتْنَةِ الْمَحْيَا وَالْمَمَاتِ وَمِنْ فِتْنَةِ الْمَسِيحِ الدَّجَّالِ

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ಅದಾಬಿ ಜಹನ್ನಮ ವಮಿನ್ ಅದಾಬಿಲ್ ಕಬ್ರಿ ವಮಿನ್ ಫಿತ್‌ನತಿಲ್ ಮುಹ್ಯಾ ವಲ್ ಮಮಾತಿ ವಮಿನ್ ಫಿತ್‌ನತಿಲ್ ಮಸೀಹಿದ್ದಜ್ಜಾಲ್."

ಅರ್ಥ: ಓ ಅಲ್ಲಾಹ್! ನಾನು ನರಕದ ಯಾತನೆಯಿಂದ, ಗೋರಿಯ ಯಾತನೆಯಿಂದ, ಜೀವನ ಮತ್ತು ಮರಣದ ಪರೀಕ್ಷೆಯಿಂದ ಮತ್ತು ದಜ್ಜಾಲನ ಪರೀಕ್ಷೆಯಿಂದ ನಿನ್ನ ಅಭಯ ಯಾಚಿಸುತ್ತೇನೆ. [ವರದಿ: ಹ. ಅಬೂ ಹುರೈರಾ(ರ)]

3) ಅತ್ತಹಿಯ್ಯಾತ್ ಮತ್ತು ಸಲಾಮ್‌ಗಳ ಮಧ್ಯೆ ಪ್ರವಾದಿ(ಸ) ಈ ದುಆ ಪಠಿಸುತ್ತಿದ್ದರು:

اَللّٰهُمَّ اغْفِرْلِى مَا قَدَّمْتُ وَمَآ اَخَّرْتُ وَمَآ اَسْرَرْتُ وَمَآ اَعْلَنْتُ وَمَآ اَنْتَ اَعْلَمُ بِهِ مِنِّى۔ اَنْتَ الْمُقَدِّمُ اَنْتَ الْمُؤَخِّرُلَآاِلٰهَ اِلَّا اَنْتَ۔

(مسلم)

"ಅಲ್ಲಾಹುಮ್ಮಗ್‌ಫಿರ್ಲೀ ಮಾ ಕದ್ದಮ್ತು ವಮಾ ಅಖ್ಖರ್ತು ವಮಾ ಅಸ್ರರ್ತು ವಮಾ ಅಅ್‌ಲನ್ತು ವಮಾ ಅಂತ ಅಅ್‌ಲಮು ಬಿಹೀ ಮಿನ್ನೀ. ಅಂತಲ್ ಮುಕದ್ದಿಮು ಅಂತಲ್ ಮುಅಖ್ಖಿರು ಲಾ ಇಲಾಹ ಇಲ್ಲಾ ಅಂತ."

ಅರ್ಥ: ಓ ಅಲ್ಲಾಹ್! ನನ್ನ ಹಿಂದಿನ ಪಾಪಗಳನ್ನು, ಅನಂತರದ ಪಾಪಗಳನ್ನು, ರಹಸ್ಯವಾಗಿ ಮಾಡಿದ ಪಾಪಗಳನ್ನು, ಬಹಿರಂಗವಾಗಿ ಮಾಡಿದ ಪಾಪಗಳನ್ನು ಕ್ಷಮಿಸಿಬಿಡು. ನನ್ನ ಅತಿರೇಕಗಳನ್ನು ಕ್ಷಮಿಸು. ನನಗಿಂತಲೂ ಹೆಚ್ಚಾಗಿ ನಿನಗೇ ತಿಳಿದಿರುವ ನನ್ನ ಪಾಪಗಳನ್ನು ಕ್ಷಮಿಸು. ನೀನೇ ಮುಂದುವರಿಸುವವನು. ನೀನೇ ಹಿಂದೂಡುವವನು. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. (ವರದಿ: ಹ. ಅಲೀ(ರ)- ಮುಸ್ಲಿಮ್)

4) ಪ್ರವಾದಿ(ಸ) ತಮ್ಮ ನಮಾಝ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ اِنِّى اَسْئَلُكَ الثَّبَاتَ فِى الْاَمْرِ وَالْعَزِيمَةَ عَلَى الرُّشْدِ وَاَسْئَلُكَ شُكْرَ نِعْمَتِكَ وَحُسْنَ عِبَادَتِكَ وَ اَسْئَلُكَ قَلْباً سَلِيماً وَ لِسَاناً صَادِقًا وَّ اَسْئَلُكَ مِنْ خَيْرِ مَا تَعْلَمُ وَ اَعُوذُبِكَ مِنْ شَرِّ مَا تَعْلَمُ وَاَسْتَغْفِرُكَ لِمَا تَعْلَمُ۔ (نسائی)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಸ್ಸಬಾತ ಫಿಲ್ ಅಮ್ರಿ ವಲ್ ಅಝೀಮತ ಅಲರ್ರುಶ್‌ದಿ ವ ಅಸ್‌ಅಲುಕ ಶುಕ್ರ ನಿಅ್‌ಮತಿಕ ವ ಹುಸ್ನ ಇಬಾದತಿಕ ವ ಅಸ್‌ಅಲುಕ ಕಲ್ಬನ್ ಸಲೀಮನ್ ವಲಿಸಾನನ್ ಸಾದಿಕನ್ ವಅಸ್‌ಅಲುಕ ಮಿನ್ ಖೈರಿ ಮಾ ತಅ್‌ಲಮು ವ ಅಊದುಬಿಕ ಮಿನ್ ಶರ್ರಿ ಮಾ ತಅ್‌ಲಮು ವಸ್‌ತಗ್‌ಫಿರುಕ ಲಿಮಾ ತಅ್‌ಲಮ್."

ಅರ್ಥ: ಓ ಅಲ್ಲಾಹ್! ನಾನು ನಿನ್ನಿಂದ ದೃಢಚಿತ್ತತೆ ಮತ್ತು ಒಳಿತಿನ ಕಾರ್ಯದಲ್ಲಿ ದೃಢಸಂಕಲ್ಪವನ್ನು ಯಾಚಿಸುತ್ತೇನೆ. ನಾನು ನಿನ್ನಿಂದ ನಿನ್ನ ಅನುಗ್ರಹಗಳ ಕೃತಜ್ಞತೆಯನ್ನರ್ಪಿಸುವ ಮತ್ತು ನಿನ್ನ ಆರಾಧನೆಯನ್ನು ಚೆನ್ನಾಗಿ ಮಾಡುವ ಸೌಭಾಗ್ಯವನ್ನು ಬೇಡುತ್ತೇನೆ. ನಾನು ನಿನ್ನಿಂದ ಆರೋಗ್ಯಪೂರ್ಣ ಮನಸ್ಸು ಮತ್ತು ಸತ್ಯಸಂಧವಾದ ನಾಲಗೆಯನ್ನು ಬೇಡುತ್ತೇನೆ. ನಿನ್ನ ಜ್ಞಾನದಲ್ಲಿರುವ ಎಲ್ಲ ಒಳಿತುಗಳನ್ನು ನಾನು ಬೇಡುತ್ತೇನೆ. ನಿನ್ನ ಜ್ಞಾನದಲ್ಲಿರುವ ಎಲ್ಲ ಕೆಡುಕುಗಳಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ. ನಿನಗೆ ತಿಳಿದಿರುವ ನನ್ನೆಲ್ಲ ಪಾಪಗಳಿಗೆ ನಿನ್ನ ಕ್ಷಮೆಯನ್ನು ಯಾಚಿಸುತ್ತೇನೆ. (ವರದಿ: ಹ. ಶದ್ದಾದ್ ಬಿನ್ ಔಸ್(ರ)- ನಸಾಈ)

5) ಪ್ರವಾದಿವರ್ಯರು(ಸ) ನನಗೆ ಈ ದುಆ ಪಠಿಸಲು ಕಲಿಸಿದರು:

اَللّٰهُمَّ اَلِّفْ بَيْنَ قُلُوبِنَا وَاَصْلِحْ ذَاتَ بَيْنِنَا وَاهْدِنَا سُبُلَ السَّلَامِ وَ نَجِّنَا مِنَ الظُّلُمَاتِ اِلَى النُّورِ وَجَنِّبْنَا الْفَوَاحِشَ مَا ظَهَرَ مِنْهَا وَمَا بَطَنَ، وَبَارِكْ لَنَا فِى اَسْمَاعِنَا وَاَبْصَارِنَا وَقُلُوبِنَا وَاَزْوَاجِنَا وَذُرِّيَّاتِنَا وَتُبْ عَلَيْنَا اِنَّكَ اَنْتَ التَّوَّابُ الرَّحِيمُ، وَاجْعَلْنَا شَاكِرِينَ لِنِعْمَتِكَ، مُثْنِينَ بِهَا قَابِلِيهَا وَاَتِمَّهَا عَلَيْنَا۔ (ابوداؤد)

"ಅಲ್ಲಾಹುಮ್ಮ ಅಲ್ಲಿಫ್ ಬೈನ ಕುಲೂಬಿನಾ ವ ಅಸ್‌ಲಿಹ್ ದಾತ ಬೈನಿನಾ ವಹ್‌ದಿನಾ ಸುಬುಲಸ್ಸಲಾಮಿ ವನಜ್ಜಿನಾ ಮಿನಳ್ಳುಲುಮಾತಿ ಇಲನ್ನೂರಿ ವಜನ್ನಿಬ್‌ನಾ ಫವಾಹಿಶ ಮಾ ಳಹರ ಮಿನ್‌ಹಾ ವಮಾ ಬತನ್. ವಬಾರಿಕ್ ಲನಾ ಫೀ ಅಸ್‌ಮಾಇನಾ ವ ಅಬ್‌ಸಾರಿನಾ ವ ಕುಲೂಬಿನಾ ವ ಅಝ್‌ವಾಜಿನಾ ವ ದುರ್ರಿಯ್ಯಾತಿನಾ ವತುಬ್ ಅಲೈನಾ ಇನ್ನಕ ಅನ್ತತ್ತವ್ವಾಬುರ್ರಹೀಮ್. ವಜಅಲ್ನಾ ಶಾಕಿರೀನ ಲಿನಿಅ್‌ಮತಿಕ ಮುಸ್ನೀನ ಬಿಹಾ ಕಾಬಿಲೀಹಾ ವ ಅತಿಮ್ಮಹಾ ಅಲೈನಾ."

ಅರ್ಥ: ಓ ಅಲ್ಲಾಹ್! ನಮ್ಮ ಹೃದಯಗಳಲ್ಲಿ ಪ್ರೇಮವನ್ನು ಅಂಕುರಿಸು. ನಮ್ಮ ನಡುವೆ ಸುಧಾರಣೆ ಮಾಡು. ನಮ್ಮನ್ನು ಸುರಕ್ಷಿತ ಮಾರ್ಗಗಳಲ್ಲಿ ಮುನ್ನಡೆಸು. ನಮ್ಮನ್ನು ಅಂಧಕಾರದಿಂದ ಹೊರತೆಗೆದು ಬೆಳಕಿನತ್ತ ಕೊಂಡು ಹೋಗು. ನಮ್ಮನ್ನು ಎಲ್ಲ ಬಹಿರಂಗ ಮತ್ತು ಗುಪ್ತ ಅಶ್ಲೀಲತೆಗಳಿಂದ ದೂರವಿರಿಸು. ನಮಗಾಗಿ ನಮ್ಮ ಕಿವಿಗಳು, ಕಣ್ಣುಗಳು, ಮನಸ್ಸುಗಳು, ಪತ್ನಿಯರು ಮತ್ತು ಮಕ್ಕಳಲ್ಲಿ ಸಮೃದ್ಧಿಯನ್ನುಂಟು ಮಾಡು. ನಮ್ಮ ಮೇಲೆ ಕೃಪಾಕಟಾಕ್ಷ ಬೀರು. ಖಂಡಿತವಾಗಿಯೂ ನೀನು ಪಶ್ಚಾತ್ತಾಪ ಸ್ವೀಕರಿಸುವವನೂ ದಯೆ ತೋರುವವನೂ ಆಗಿರುವೆ. ನಮ್ಮನ್ನು ನಿನ್ನ ಅನುಗ್ರಹಗಳ ಕೃತಜ್ಞತೆ ಸಲ್ಲಿಸುವವರಾಗಿ ಮಾಡು. ಆ ಅನುಗ್ರಹಗಳ ಗುಣಗಾನ ಮಾಡುವ ಮತ್ತು ಅವುಗಳನ್ನು ಸ್ವೀಕರಿಸುವವರಾಗಿ ಮಾಡು. ನಮ್ಮ ಮೇಲೆ ನಿನ್ನ ಅನುಗ್ರಹವನ್ನು ಪರಿಪೂರ್ಣಗೊಳಿಸು.

(ವರದಿ: ಹ. ಇಬ್ನು ಮಸ್‌ಊದ್(ರ)- ಅಬೂ ದಾವೂದ್)

6) ಪ್ರವಾದಿ(ಸ) ನಮಾಝ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

اَللّٰهُمَّ بِعِلْمِكَ الْغَيْبَ وَقُدْرَتِكَ عَلَى الْخَلْقِ اَحْيِنِى مَا عَلِمْتَ الْحَيَاةَ خَيْرًا لِّى وَتَوَفَّنِى اِذَا كَانَتِ الْوَفَاةُ خَيْرًا لِّى اَسْئَلُكَ خَشْيَتَكَ فِى الْغَيْبِ وَالشَّهَادَةِ وَ كَلِمَةَ الْحَقِّ فِى الْغَضَبِ وَالرِّضَا، وَالْقَصْدَ فِى الْفَقْرِ وَالْغِنٰى وَ لَذَّةَ النَّظَرِ اِلٰى وَجْهِكَ، وَالشَّوْقَ اِلٰى لِقَائِكَ وَاَعُوذُ بِكَ مِنْ ضَرَّاءٍ مُضِرَّةٍ وَمِنْ فِتْنَةٍ مُّضِلَّةٍ، اَللّٰهُمَّ زَيِّنَّا بِزِينَةِ الْاِيمَانِ، وَاجْعَلْنَا هُدَاةً مَّهْدِيِّينَ۔ (احمد، نسائی)

"ಅಲ್ಲಾಹುಮ್ಮ ಬಿ ಇಲ್ಮಿಕಲ್ ಗೈಬ ವ ಕುದ್ರತಿಕ ಅಲಲ್ ಖಲ್ಕಿ ಅಹ್ಯಿನೀ ಮಾ ಅಲಿಮ್ತಲ್ ಹಯಾತ ಖೈರಲ್ಲೀ ವತವಫ್ಫನೀ ಇದಾ ಕಾನತಿಲ್ ವಫಾತು ಖೈರಲ್ಲೀ. ಅಸ್‌ಅಲುಕ ಖಶ್‌ಯತಕ ಫಿಲ್‌ಗೈಬಿ ವಶ್ಶಹಾದತಿ ವಕಲಿಮತಲ್ ಹಕ್ಕಿ ಫಿಲ್ ಗದಬಿ ವರ್ರಿದಾ ವಲ್ ಕಸ್‌ದ ಫಿಲ್ ಫಕ್ರಿ ವಲ್ ಗಿನಾ ವಲದ್ದತನ್ನಳ್‌ರಿ ಇಲಾ ವಜ್‌ಹಿಕ. ವಶ್ಶೌಕ ಇಲಾ ಲಿಕಾಇಕ

**ವಲಊದುಬಿಕ ಮಿನ್ ದರ್‍ರಾಇ ಮುದಿರ್‍ರತಿನ್ ವಮಿನ್ ಫಿತ್‌ನತಿನ್ ಮುದಿಲ್ಲತಿನ್. ಅಲ್ಲಾಹುಮ್ಮ ಝಯ್ಯಿನ್ನಾ ಬಿಝೀನತಿಲ್ ಈಮಾನ್ ವಜಅಲ್ನಾ ಹುದಾತನ್ ಮಹ್‌ದಿಯ್ಯೀನ್."**

ಅರ್ಥ: ಓ ಅಲ್ಲಾಹ್! ನಿನ್ನ ಅದೃಶ್ಯ ಜ್ಞಾನ ಮತ್ತು ಸೃಷ್ಟಿಗಳ ಮೇಲೆ ನಿನ್ನ ಸಾಮರ್ಥ್ಯದ ಮೂಲಕ ನನ್ನ ಪಾಲಿಗೆ ಜೀವನವು ಉತ್ತಮವೆಂದು ನೀನು ಪರಿಗಣಿಸುವ ತನಕ ನನ್ನನ್ನು ಬದುಕಿಸು ಮತ್ತು ಮರಣವನ್ನು ನನ್ನ ಪಾಲಿಗೆ ಉತ್ತಮವೆಂದು ಕಂಡುಬಂದಾಗ ನನ್ನನ್ನು ಈ ಲೋಕದಿಂದ ಎತ್ತಿಕೊ. ನಾನು ನಿನ್ನಿಂದ ವ್ಯಕ್ತವಾಗಿಯೂ ಗುಪ್ತವಾಗಿಯೂ ನಿನ್ನನ್ನು ಭಯ ಪಡುವ, ಪ್ರಸನ್ನತೆ ಮತ್ತು ಕೋಪದ ಸ್ಥಿತಿಗಳಲ್ಲಿ ಸತ್ಯವಚನವನ್ನೇ ಹೇಳುವ, ಸುಸ್ಥಿತಿ ಮತ್ತು ದುಸ್ಥಿತಿಗಳೆರಡರಲ್ಲೂ ಸಂತುಲಿತವಾಗಿರುವ, ನಿನ್ನ ಕಡೆಗೆ ನೋಡುವ, ಸವಿಯನ್ನು ಅನುಭವಿಸುವ ಮತ್ತು ನಿನ್ನನ್ನು ಭೇಟಿಯಾಗುವ ಹಂಬಲ ಇಟ್ಟುಕೊಳ್ಳುವ ಸೌಭಾಗ್ಯವನ್ನು ಬೇಡುತ್ತೇನೆ. ನಾನು ಹಾನಿಕರವಾದ ವಸ್ತುಗಳ ಹಾನಿಯಿಂದ ಮತ್ತು ಪಥಭ್ರಷ್ಟಗೊಳಿಸುವ ಪರೀಕ್ಷೆಯಿಂದ ನಿನ್ನ ಅಭಯ ಯಾಚಿಸುತ್ತೇನೆ. ಓ ಅಲ್ಲಾಹ್! ನಮ್ಮನ್ನು ಸತ್ಯವಿಶ್ವಾಸದ ಶೋಭೆಯಿಂದ ಅಲಂಕರಿಸು. ನಮ್ಮನ್ನು ಸನ್ಮಾರ್ಗದರ್ಶನ ಮಾಡುವವರಾಗಿ ಮತ್ತು ಸನ್ಮಾರ್ಗದಲ್ಲಿರುವವರಾಗಿ ಮಾಡು (ವರದಿ: ಹ. ಅಮ್ಮಾರ್ ಬಿನ್ ಯಾಸಿರ್(ರ)- ಅಹ್ಮದ್, ನಸಾಈ)

7) ನಾನು ಪ್ರವಾದಿವರ್ಯರ(ಸ) ಜೊತೆ ನಿಂತಿದ್ದೆ. ಒಬ್ಬ ವ್ಯಕ್ತಿ ನಮಾಝ್ ಮಾಡುತ್ತಿದ್ದ. ಆತ ರುಕೂಅ್ ಮಾಡಿದ. ಕೊನೆಯಲ್ಲಿ ಅತ್ತಹಿಯ್ಯಾತ್‌ಗೆ ಕುಳಿತಾಗ ಈ ದುಆ ಪಠಿಸಿದನು:

اَللّٰهُمَّ اِنِّى اَسْئَلُكَ بِاَنَّ لَكَ الْحَمْدَ لَآ اِلٰهَ اِلَّآ اَنْتَ الْمَنَّانُ بَدِيعُ
السَّمٰوَاتِ وَالْاَرْضِ يَاذَالْجَلَالِ وَالْاِكْرَامِ يَا حَىُّ يَاقَيُّومُ اِنِّىٓ اَسْئَلُكَ۔

**"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಬಿ ಅನ್ನ ಲಕಲ್ ಹಮ್‌ದ ಲಾ ಇಲಾಹ ಇಲ್ಲಾ ಅನ್ತಲ್ ಮನ್ನಾನು. ಬದೀಉಸ್ಸಮಾವಾತಿ ವಲ್ ಅರ್ದಿ ಯಾದಲ್ ಜಲಾಲಿ ವಲ್ ಇಕ್ರಾಮಿ ಯಾ ಹಯ್ಯು ಯಾ ಕಯ್ಯೂಮು ಇನ್ನೀ ಅಸ್‌ಅಲುಕ."**

ಅರ್ಥ: ಓ ಅಲ್ಲಾಹ್! ಸರ್ವಸ್ತುತಿಯೂ ನಿನಗೆ ಇದೆ ಎನ್ನುವ ಮೂಲಕ ನಾನು ನಿನ್ನಿಂದ ಬೇಡುತ್ತೇನೆ. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನೇ ದಯಪಾಲಿಸುವವನು ಮತ್ತು ಭೂಮಿ-ಆಕಾಶಗಳನ್ನು ಸೃಷ್ಟಿಸಿದವನು. ಓ ಮಹಿಮೆ ಮತ್ತು ಉನ್ನತಿಯ ಒಡೆಯನೇ! ಓ ಚಿರಂತನನೇ, ಓ ಸರ್ವಾಧಿಕಾರವುಳ್ಳವನೇ! ನಾನು ನಿನ್ನಲ್ಲಿಯೇ ಬೇಡುತ್ತೇನೆ.

"ಪ್ರವಾದಿ(ಸ) ಸಹಾಬಿಗಳನ್ನುದ್ದೇಶಿಸಿ- ಈ ವ್ಯಕ್ತಿ ಯಾವುದರ ಮೂಲಕ ಪ್ರಾರ್ಥಿಸಿದ ನೆಂದು ನಿಮಗೆ ಗೊತ್ತೇ? ಎಂದು ವಿಚಾರಿಸಿದರು. ಆಗ ಸಹಾಬಿಗಳು- ಅಲ್ಲಾಹ್ ಮತ್ತು

ಅವನ ಪ್ರವಾದಿಯೇ ಚೆನ್ನಾಗಿ ಬಲ್ಲರು ಎಂದರು. ಆಗ ಪ್ರವಾದಿ(ಸ)- "ಮುಹಮ್ಮದನ ಪ್ರಾಣವು ಯಾರ ಕೈಯಲ್ಲಿದೆಯೋ ಅವನ ಆಣೆ! ಈ ವ್ಯಕ್ತಿಯು ಅಲ್ಲಾಹನಲ್ಲಿ ಅವನ 'ದೊಡ್ಡ ಹೆಸರು' (ಇಸ್ಮುಲ್ ಅಲ್‌ಝುಮ್) ಹಿಡಿದು ಪ್ರಾರ್ಥಿಸಿರುವನು. ಅದರ ಮೂಲಕ ಅವನಲ್ಲಿ ಪ್ರಾರ್ಥಿಸಿದರೆ ಅವನು ಖಂಡಿತ ಅದನ್ನು ಸ್ವೀಕರಿಸುತ್ತಾನೆ. ಅವನಲ್ಲಿ ಬೇಡಿದರೆ ಅವನು ನೀಡುತ್ತಾನೆ." (ವರದಿ: ಹ. ಅನಸ್(ರ)- ನಸಾಈ)

8) ಹ. ಇಬ್ನು ಮಸ್‌ಊದ್(ರ) ನಮಗೆ ಅತ್ತಹಿಯ್ಯಾತ್ ಕಲಿಸುತ್ತಿದ್ದರು. ನೀವು 'ಅತ್ತಹಿಯ್ಯಾತ್' ಪಠಿಸಿಯಾದ ಬಳಿಕ ಈ ದುಆ ಪಠಿಸಿರಿ ಎಂದು ಆದೇಶಿಸುತ್ತಿದ್ದರು:

اَللّٰهُمَّ اِنِّىٓ اَسْئَلُكَ مِنَ الْخَيْرِ كُلِّهِ مَا عَلِمْتُ مِنْهُ وَمَا لَمْ اَعْلَمْ، اَللّٰهُمَّ اِنِّىٓ اَسْأَلُكَ مِنْ خَيْرِ مَا سَئَلَكَ مَنْهُ عِبَادُكَ الصَّالِحُونَ وَ اَعُوذُبِكَ مِنْ شَرِّ مَا اسْتَعَاذَكَ مِنْهُ عِبَادُكَ الصَّالِحُونَ، رَبَّنَا اٰتِنَا فِى الدُّنْيَا حَسَنَةً وَفِى الْاٰخِرَةِ حَسَنَةً وَقِنَا عَذَابَ النَّارِ۔

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನಲ್ ಖೈರಿ ಕುಲ್ಲಿಹೀ ಮಾ ಅಲಿಮ್ತು ಮಿನ್‌ಹು ವಮಾ ಲಮ್ ಅಅ್‌ಲಮ್. ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನ್ ಖೈರಿ ಮಾ ಸಅಲಕ ಮಿನ್‌ಹು ಇಬಾದುಕಸ್ಸಾಲಿಹೂನ ವ ಅಊದುಬಿಕ ಮಿನ್ ಶರ್ರಿ ಮಸ್‌ತಆದಕ ಮಿನ್‌ಹು ಇಬಾದುಕಸ್ಸಾಲಿಹೂನ್. ರಬ್ಬನಾ ಆತಿನಾ ಫಿದ್ದುನ್ಯಾ ಹಸನತನ್ ವಫಿಲ್ ಆಖಿರತಿ ಹಸನತನ್ ವಕಿನಾ ಅದಾಬನ್ನಾರ್."

ಅರ್ಥ: ಓ ಅಲ್ಲಾಹ್! ನಾನು ನಿನ್ನಿಂದ ನನಗೆ ತಿಳಿದಿರುವ ಮತ್ತು ತಿಳಿಯದಿರುವ ಎಲ್ಲ ಒಳಿತುಗಳನ್ನೂ ಬೇಡುತ್ತೇನೆ. ಓ ಅಲ್ಲಾಹ್! ನಾನು ನಿನ್ನಿಂದ ನಿನ್ನ ಸಜ್ಜನ ದಾಸರು ಯಾಚಿಸಿದಂತಹ ಎಲ್ಲ ಒಳಿತುಗಳನ್ನು ಯಾಚಿಸುತ್ತೇನೆ. ನಾನು ನಿನ್ನಿಂದ ನಿನ್ನ ಸಜ್ಜನ ದಾಸರು ಅಭಯ ಯಾಚಿಸಿದಂತಹ ಎಲ್ಲ ಕೆಡುಕುಗಳಿಂದ ಅಭಯ ಯಾಚಿಸುತ್ತೇನೆ. ಓ ನಮ್ಮ ಪ್ರಭೂ! ನಮಗೆ ಇಹಲೋಕದಲ್ಲೂ ಒಳಿತನ್ನು ದಯಪಾಲಿಸು ಮತ್ತು ಪರಲೋಕದಲ್ಲೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ನರಕದ ಯಾತನೆಯಿಂದ ರಕ್ಷಿಸು.

ಅದರ ನಂತರ ಇಬ್ನು ಮಸ್‌ಊದ್(ರ) ಈ ರೀತಿ ಹೇಳಿದರು: "ಯಾವ ಪ್ರವಾದಿಯಾಗಲಿ, ಸಜ್ಜನ ದಾಸರಾಗಲಿ ಮಾಡಿದ ಯಾವ ಪ್ರಾರ್ಥನೆಯೂ ಈ ದುಆದಲ್ಲಿ ಬಿಟ್ಟು ಹೋಗಿಲ್ಲ."

(ವರದಿ: ಹ. ಉಮೈರ್ ಬಿನ್ ಸಅದ್(ರ)- ಇಬ್ನು ಅಬೀ ಶೈಬಾ)

**19. ಸಲಾಮ್‌ನ ನಂತರದ ದಿಕ್ರ್ ಮತ್ತು ದುಆಗಳು:** ಸಲಾಮ್‌ನ ನಂತರ ದಿಕ್ರ್ ಮತ್ತು ದುಆ ಮಾಡುವುದು ಸುನ್ನತ್ ಆಗಿದೆ. ಈ ಸಂದರ್ಭಕ್ಕಾಗಿ ಅನೇಕ ದಿಕ್ರ್‌ಗಳು ಹದೀಸ್ ಗ್ರಂಥಗಳಲ್ಲಿ ಬಂದಿವೆ. ಅವುಗಳ ಪೈಕಿ ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸುತ್ತಿದ್ದೇವೆ:

1) ಗಟ್ಟಿ ಸ್ವರದಲ್ಲಿ 'ಅಲ್ಲಾಹು ಅಕ್ಬರ್' ಎನ್ನುವುದು.

"ನಾನು ಪ್ರವಾದಿವರ್ಯರ(ಸ) ನಮಾಝ್ ಮುಕ್ತಾಯವಾಗಿದೆಯೆಂದು ಅವರ ತಕ್ಬೀರ್ (ಅಲ್ಲಾಹು ಅಕ್ಬರ್)ನಿಂದ ತಿಳಿಯುತ್ತಿದ್ದೆ."

(ವರದಿ: ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್)

2) ಪ್ರವಾದಿ(ಸ) ತಮ್ಮ ನಮಾಝನ್ನು ಮುಗಿಸಿದ ಬಳಿಕ ಮೂರು ಸಲ 'ಅಸ್ತಗ್‌ಫಿರುಲ್ಲಾಹ್' ಎನ್ನುತ್ತಿದ್ದರು. ಅನಂತರ ಹೀಗೆ ಹೇಳುತ್ತಿದ್ದರು:

اَللّٰهُمَّ اَنْتَ السَّلَامُ وَمِنْكَ السَّلَامُ تَبَارَكْتَ يَاذَاالْجَلَالِ وَالْاِكْرَامِ۔

(مسلم، احمد، ابوداؤد، ترمذی، نسائی، ابن ماجه)

"ಅಲ್ಲಾಹುಮ್ಮ ಅನ್ತಸ್ಸಲಾಮು ವ ಮಿನ್‌ಕಸ್ಸಲಾಮು ತಬಾರಕ್ತ ಯಾದಲ್ ಜಲಾಲಿ ವಲ್ ಇಕ್ರಾಮ್."

ಅರ್ಥ: ಓ ಅಲ್ಲಾಹ್! ನೀನು ಶಾಂತ ಸ್ವರೂಪಿ ಮತ್ತು ಶಾಂತಿ ದಯಪಾಲಿಸುವವ ನಾಗಿರುವೆ. ಓ ಮಹಿಮೆ ಮತ್ತು ಗರಿಮೆಯವನೇ!

(ವರದಿ: ಹ. ಸೌಬಾನ್(ರ)- ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

3) "ಒಂದು ದಿನ ಪ್ರವಾದಿವರ್ಯರು(ಸ) ನನ್ನ ಕೈ ಹಿಡಿದು ಹೀಗೆ ಹೇಳಿದರು- "ಓ ಮುಆದ್! ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಅನಂತರ ಪ್ರವಾದಿ(ಸ) ಹೇಳಿದರು- ಓ ಮುಆದ್! ನೀವು ಯಾವುದೇ ನಮಾಝ್‌ನ ನಂತರ ಈ ದಿಕ್ರನ್ನು ಬಿಡಬೇಡಿರಿ ಎಂದು ನಾನು ನಿಮಗೆ ಉಪದೇಶಿಸುತ್ತೇನೆ."

اَللّٰهُمَّ اَعِنِّى عَلٰى ذِكْرِكَ وَشُكْرِكَ وَحُسْنِ عِبَادَتِكَ۔

(ابوداؤد، احمد، نسائی، ابن خذیمه، ابن ماجه)

"ಅಲ್ಲಾಹುಮ್ಮ ಅಇನ್ನೀ ಅಲಾ ದಿಕ್ರಿಕ, ವ ಶುಕ್ರಿಕ, ವಹುಸ್ನಿ ಇಬಾದತಿಕ."

ಅರ್ಥ: ಓ ಅಲ್ಲಾಹ್! ನಾನು ನಿನ್ನನ್ನು ಸ್ಮರಿಸುವಂತೆ, ನಿನಗೆ ಕೃತಜ್ಞನಾಗಿರುವಂತೆ ಮತ್ತು ನಿನ್ನನ್ನು ಅತ್ಯುತ್ತಮ ರೀತಿಯಲ್ಲಿ ಅನುಸರಿಸುವಂತೆ - ಆರಾಧಿಸುವಂತೆ ನನಗೆ ನೆರವಾಗು.

(ವರದಿ: ಹ. ಮುಆದ್ ಬಿನ್ ಜಬಲ್(ರ)- ಅಬೂ ದಾವೂದ್, ಅಹ್ಮದ್, ನಸಾಈ, ಇಬ್ನು ಖುಝೈಮಃ, ಇಬ್ನುಮಾಜಃ)

4) ಪ್ರವಾದಿ(ಸ) ನಮಾಝ್‌ನ ನಂತರ ಈ ರೀತಿ ಹೇಳುತ್ತಿದ್ದರು:

لَآاِلٰـهَ اِلَّااللّٰهُ وَحْدَهٗ لَا شَرِيكَ لَهٗ لَهُ الْمُلْكُ وَلَهُ الْحَمْدُ وَهُوَ عَلٰى كُلِّ شَـىْءٍ قَـدِيـرٌ لَا حَوْلَ وَلَا قُوَّةَ اِلَّا بِاللّٰهِ، وَلَا نَعْبُدُ اِلَّا اِيَّاهُ، اَهْلُ النِّعْمَةِ وَالْـفَـضْـلِ وَالثَّـنَـاءِ الْحَسَنِ، لَآاِلٰهَ اِلَّااللّٰهُ مُخْلِصِينَ لَهُ الدِّينَ وَلَوْ كَرِهَ الْكَافِرُونَ

(احمد، مسلم، ابوداؤد،نسائی)

"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ಲಹುಲ್ ಮುಲ್ಕು ವಲಹುಲ್ ಹಮ್‌ದು ವಹುವ ಅಲಾ ಕುಲ್ಲಿ ಶೈಇನ್ ಕದೀರ್. ಲಾ ಹೌಲ ವಲಾ ಕುವ್ವತ ಇಲ್ಲಾ ಬಿಲ್ಲಾಹಿ ವಲಾ ನಅ್‌ಬುದು ಇಲ್ಲಾ ಇಯ್ಯಾಹು ಅಹ್ಲುನ್ನಿಅ್‌ಮತಿ ವಲ್ ಫದ್‌ಲಿ ವಸ್ಸನಾಇಲ್ ಹಸನಿ ಲಾ ಇಲಾಹ ಇಲ್ಲಲ್ಲಾಹು ಮುಖ್ಲಿಸೀನ ಲಹುದ್ದೀನ ವಲೌ ಕರಿಹಲ್ ಕಾಫಿರೂನ್."

ಅರ್ಥ: ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಆಧಿಪತ್ಯ ಮತ್ತು ಸ್ತುತಿಸ್ತೋತ್ರಗಳು ಅವನಿಗೇ ಮೀಸಲು ಮತ್ತು ಅವನು ಎಲ್ಲ ವಿಷಯಗಳ ಸಾಮರ್ಥ್ಯ ಉಳ್ಳವನು. ಶಕ್ತಿ ಸಾಮರ್ಥ್ಯಗಳೆಲ್ಲವೂ ಅಲ್ಲಾಹನ ನೆರವಿನಿಂದಲೇ ಇವೆ. ನಾವು ಅವನ ಹೊರತು ಅನ್ಯರನ್ನು ಆರಾಧಿಸುವುದಿಲ್ಲ. ಅವನು ಅನುಗ್ರಹ, ಸೌಭಾಗ್ಯ ಮತ್ತು ಅತ್ಯುತ್ತಮ ಸ್ತುತಿಯವನಾಗಿರುವನು. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ನಾವು ಅನುಸರಣೆ-ವಿಧೇಯತೆಗಳನ್ನು ಅವನಿಗೇ ಮೀಸಲಿಡುತ್ತೇವೆ. ಸತ್ಯನಿಷೇಧಿಗಳಿಗೆ ಅದೆಷ್ಟು ಅಪ್ರಿಯವಾದರೂ ಸರಿಯೇ.

(ವರದಿ: ಹ. ಅಬ್ದುಲ್ಲಾ ಬಿನ್ ಝುಬೈರ್(ರ)- ಅಹ್ಮದ್, ಮುಸ್ಲಿಮ್ ಅಬೂ ದಾವೂದ್,ನಸಾಈ)

5) ಪ್ರವಾದಿ(ಸ) ಎಲ್ಲ ಫರ್ಝ್ ನಮಾಝ್‌ಗಳ ನಂತರ ಹೀಗೆ ಹೇಳುತ್ತಿದ್ದರು:

لَآ اِلٰهَ اِلَّااللّٰهُ وَحْدَهٗ لَا شَرِيكَ لَهٗ، لَهُ الْمُلْكُ وَلَهُ الْحَمْدُ وَهُوَ عَلٰى كُلِّ شَـىْءٍ قَـدِيـرٌ۔ اَللّٰهُمَّ لَا مَانِعَ لِمَآ اَعْطَيْتَ وَلَا مُعْطِيَ لِمَا مَنَعْتَ وَلَا يَنْفَعُ ذَالْجَدِّ مِنْكَ الْجَدُّ

(احمد، بخاری، مسلم)

"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾ ಕುಲ್ಲಿ ಶೈಇನ್ ಕದೀರ್. ಅಲ್ಲಾಹುಮ್ಮ ಲಾ ಮಾನಿಅ ಲಿಮಾ ಅಅ್‌ತೈತ ವಲಾ ಮುಅ್‌ತಿಯ ಲಿಮಾ ಮನಅ್‌ತ ವಲಾ ಯನ್‌ಫಉ ದಲ್‌ಜದ್ದಿ ಮಿನ್ಕಲ್ ಜದ್ದ್."

ಅರ್ಥ- ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಆಧಿಪತ್ಯ ಮತ್ತು ಸ್ತುತಿಸ್ತೋತ್ರಗಳು ಅವನಿಗೇ ಮೀಸಲು. ಅವನು ಎಲ್ಲ ವಿಷಯಗಳ ಸಾಮರ್ಥ್ಯ ಉಳ್ಳವನು. ಓ ಅಲ್ಲಾಹ್! ನೀನು ನೀಡಿದುದನ್ನು ಯಾರೂ ತಡೆಯುವವರಿಲ್ಲ. ನೀನು ತಡೆದುದನ್ನು ಯಾರೂ ಕೊಡಿಸುವವರಿಲ್ಲ. ನಿನಗೆ ಎದುರಾಗಿ ಯಾವ ದೊಡ್ಡಸ್ತಿಕೆಯವನ ದೊಡ್ಡಸ್ತಿಕೆಯೂ ಅವನಿಗೇನೂ ಪ್ರಯೋಜನಕಾರಿಯಾಗದು.

(ವರದಿ: ಹ. ಮುಗೀರಾ ಬಿನ್ ಶುಅ್‌ಬಾ(ರ)- ಅಹ್ಮದ್, ಬುಖಾರಿ, ಮುಸ್ಲಿಮ್)

6) "ನಾನು ಪ್ರತಿಯೊಂದು ನಮಾಝ್‌ನ ನಂತರವೂ 'ಕುಲ್ ಹುವಲ್ಲಾಹು ಅಹದ್', 'ಕುಲ್ ಅಊದು ಬಿರಬ್ಬಿಲ್ ಫಲಕ್' ಮತ್ತು 'ಕುಲ್ ಅಊದು ಬಿರಬ್ಬಿನ್ನಾಸ್' ಎಂಬ ಸೂರಃಗಳನ್ನು ಪಠಿಸಬೇಕೆಂದು ಪ್ರವಾದಿ(ಸ) ನನಗೆ ಆಜ್ಞಾಪಿಸಿದರು."

(ವರದಿ: ಹ. ಉಕ್ಬಾ ಬಿನ್ ಆಮಿರ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ)

7) ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾರು ಫರ್ಝ್ ನಮಾಝ್‌ನ ನಂತರ 'ಆಯತುಲ್ ಕುರ್ಸಿ' ಪಠಿಸುತ್ತಾನೋ ಅವನು ಮುಂದಿನ ನಮಾಝ್‌ನ ತನಕ ಅಲ್ಲಾಹನ ಸಂರಕ್ಷಣೆಯಲ್ಲಿರುವನು."

(ವರದಿ: ಹ. ಅಲೀ(ರ)- ತಬ್ರಾನಿ)

8) ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾರು ನಮಾಝ್‌ನ ನಂತರ 33 ಸಲ 'ಸುಬ್‌ಹಾನಲ್ಲಾಹ್' (ಅಲ್ಲಾಹ್ ಪರಮ ಪಾವನನು), 33 ಸಲ 'ಅಲ್‌ಹಮ್ದುಲಿಲ್ಲಾಹ್' (ಸರ್ವಸ್ತುತಿಯೂ ಅಲ್ಲಾಹನಿಗೆ), 33 ಸಲ 'ಅಲ್ಲಾಹು ಅಕ್ಬರ್' (ಅಲ್ಲಾಹನು ಸರ್ವಶ್ರೇಷ್ಠನು) ಎಂದು ಹೇಳಿ ಒಟ್ಟು 99 ಸಲ ಆದ ನಂತರ ಕೊನೆಯಲ್ಲಿ ಒಂದು ಸಲ:

لَاإلٰهَ إِلَّااللّٰهُ وَحْدَهُ لَا شَرِيكَ لَهُ، لَهُ الْمُلْكُ وَلَهُ الْحَمْدُ وَهُوَ عَلٰى كُلِّ شَيْءٍ قَدِيرٌ۔

**"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾ ಕುಲ್ಲಿ ಶೈಇನ್ ಕದೀರ್."**

ಅರ್ಥ: ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಆಧಿಪತ್ಯ ಮತ್ತು ಸ್ತುತಿ ಸ್ತೋತ್ರಗಳು ಅವನಿಗೇ ಮೀಸಲು ಮತ್ತು ಅವನು ಎಲ್ಲ ವಿಷಯಗಳ ಸಾಮರ್ಥ್ಯ ಉಳ್ಳವನು.

ಎಂದು ಹೇಳಿದನೋ ಅವನ ಎಲ್ಲ ಪಾಪಗಳು - ಅವು ಸಮುದ್ರದ ನೊರೆಯಷ್ಟಿದ್ದರೂ ಸರಿಯೇ - ಕ್ಷಮಿಸಲ್ಪಟ್ಟುವು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್)

9) ಪ್ರವಾದಿ(ಸ) ಹೀಗೆ ಹೇಳಿರುವರು;

"ನಮಾಝ್‌ನ ನಂತರ ಕೆಲವು ದಿಕ್ರ್‌ಗಳಿವೆ. ಅವುಗಳನ್ನು ಪಠಿಸುವವನು ಎಂದೂ ವಿಫಲನಾಗುವುದಿಲ್ಲ. 33 ಸಲ ಸುಬ್‌ಹಾನಲ್ಲಾಹ್, 33 ಸಲ ಅಲ್ ಹಮ್ದುಲಿಲ್ಲಾಹ್ ಮತ್ತು 34 ಸಲ ಅಲ್ಲಾಹು ಅಕ್ಬರ್."

(ವರದಿ: ಹ. ಕಅಬ್ ಬಿನ್ ಉಜ್ರಃ(ರ)- ಮುಸ್ಲಿಮ್)

10) "ಒಮ್ಮೆ ನಾನು ಮತ್ತು ಫಾತಿಮಾ(ರ) ಪ್ರವಾದಿವರ್ಯರ(ಸ) ಸನ್ನಿಧಿಗೆ ಹೋದೆವು. ನಮ್ಮ ಮನೆ ಕೆಲಸದಲ್ಲಿ ನಮಗೆ ನೆರವಾಗಲು ಓರ್ವ ಸೇವಕಿಯನ್ನು ನಾವು ಕೇಳಿದ್ದೆವು. ಪ್ರವಾದಿ(ಸ) ಅದನ್ನು ನಿರಾಕರಿಸುತ್ತಾ ಹೀಗೆ ಹೇಳಿದರು- ನೀವು ನನ್ನಲ್ಲಿ ಕೇಳಲಿಕ್ಕೆ ಬಂದಿರುವ ವಸ್ತುವಿಗಿಂತ ಉತ್ತಮವಾದ ವಸ್ತುವನ್ನು ತಿಳಿಸಲೇ? ಆಗ ನಾವು- 'ಖಂಡಿತ ತಿಳಿಸಿ' ಎಂದೆವು. ಆಗ ಪ್ರವಾದಿ(ಸ) ಹೇಳಿದರು- ನನಗೆ ಜಿಬ್ರೀಲ್(ಅ) ಕಲಿಸಿಕೊಟ್ಟ ಕೆಲವು ವಚನಗಳಿವೆ. ನೀವಿಬ್ಬರೂ ಪ್ರತಿಯೊಂದು ನಮಾಝ್‌ನ ನಂತರ 10 ಸಲ 'ಸುಬ್‌ಹಾನಲ್ಲಾಹ್' 10 ಸಲ 'ಅಲ್ ಹಮ್ದುಲಿಲ್ಲಾಹ್' ಮತ್ತು 10 ಸಲ 'ಅಲ್ಲಾಹು ಅಕ್ಬರ್' ಎಂದು ಹೇಳಿರಿ. ಮಲಗುವಾಗ 33 ಸಲ 'ಸುಬ್‌ಹಾನಲ್ಲಾಹ್', 33 ಸಲ 'ಅಲ್‌ಹಮ್ದುಲಿಲ್ಲಾಹ್', ಮತ್ತು 34 ಸಲ 'ಅಲ್ಲಾಹು ಅಕ್ಬರ್' ಹೇಳಿರಿ." [ವರದಿ: ಹ. ಅಲೀ(ರ)]

11) ಹ. ಸಅದ್ ಬಿನ್ ಅಬೀ ವಕ್ಕಾಸ್(ರ) ತಮ್ಮ ಮಕ್ಕಳಿಗೆ ಈ ವಚನಗಳನ್ನು ಗುರುಗಳು ಮಕ್ಕಳಿಗೆ ಬರೆಯಲು ಕಲಿಸುವಂತೆ ಕಲಿಸುತ್ತಿದ್ದರು. ಅನಂತರ ಪ್ರವಾದಿ(ಸ) ನಮಾಝ್‌ನ ಬಳಿಕ ಈ ವಚನಗಳ ಮೂಲಕ ಅಲ್ಲಾಹನ ಅಭಯ ಯಾಚಿಸುತ್ತಿದ್ದರೆಂದು ಹೇಳುತ್ತಿದ್ದರು:

اَللّٰهُمَّ اِنِّيْ اَعُوذُبِكَ مِنَ الْبُخْلِ، وَاَعُوذُبِكَ مِنَ الْجُبْنِ وَاَعُوذُبِكَ مِنْ اَنْ اُرَدَّ اِلَى اَرْذَلِ الْعُمُرِ وَاَعُوذُبِكَ مِنْ فِتْنَةِ الدُّنْيَا وَاَعُوذُبِكَ مِنْ عَذَابِ الْقَبْرِ

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಬುಖ್ಲಿ, ವ ಅಊದುಬಿಕ ಮಿನಲ್ ಜುಬುನಿ, ವ ಅಊದುಬಿಕ ಮಿನ್ ಅನ್ ಉರದ್ದ ಇಲಾ ಅರ್ದಲಿಲ್ ಉಮುರಿ, ವ ಅಊದುಬಿಕ ಮಿನ್ ಫಿತ್ನತಿದ್ದುನ್ಯಾ, ವ ಅಊದುಬಿಕ ಮಿನ್ ಅದಾಬಿಲ್ ಕಬ್ರಿ."

ಅರ್ಥ: ಓ ಅಲ್ಲಾಹ್! ನಾನು ಜಿಪುಣತೆಯಿಂದ ನಿನ್ನ ಅಭಯ ಯಾಚಿಸುತ್ತೇನೆ ಮತ್ತು ಹೇಡಿತನದಿಂದ ನಿನ್ನ ಅಭಯ ಯಾಚಿಸುತ್ತೇನೆ ಮತ್ತು ನಾನು ಅತಿ ವೃದ್ಧಾಪ್ಯಕ್ಕೆ ತಲಪುವ ಬಗ್ಗೆ ನಿನ್ನ ಅಭಯ ಯಾಚಿಸುತ್ತೇನೆ. ಲೋಕದ ಪರೀಕ್ಷೆಯಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ ಹಾಗೂ ಗೋರಿಯ ಯಾತನೆಯಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.

(ಬುಖಾರಿ, ತಿರ್ಮಿದಿ)

# ನಮಾಝ್‌ನಲ್ಲಿ ಧರ್ಮಸಮ್ಮತವಾದ ವಿಷಯಗಳು

ನಮಾಝ್‌ನಲ್ಲಿ ಈ ಕೆಳಗಿನ ವಿಷಯಗಳು ಜಾಇಝ್(ಧರ್ಮಸಮ್ಮತ) ಆಗಿವೆ:

**1. ಅಳುವುದು:**

ಅಲ್ಲಾಹನು ಈ ರೀತಿ ಹೇಳಿರುವನು- "ಅವರಿಗೆ ಅಲ್ಲಾಹನ ಸೂಕ್ತಗಳನ್ನು ಓದಿ ಕೇಳಿಸಿದಾಗ ಅವರು ಅಳುತ್ತಾ ಸಾಷ್ಟಾಂಗವೆರಗುತ್ತಾರೆ." (ಮರ್ಯಮ್:58)

"ಪ್ರವಾದಿವರ್ಯರು(ಸ) ನಮಾಝ್ ಮಾಡುತ್ತಿರುವುದನ್ನು ನಾನು ನೋಡಿದೆ. ಅವರ ಎದೆಯಿಂದ- ಬೇಯುವ ಪಾತ್ರೆಯಿಂದ ಬರುವಂತಹ ಶಬ್ದ ಬರುತ್ತಿತ್ತು."

(ವರದಿ: ಹ. ಅಬ್ದುಲ್ಲಾ ಬಿನ್ ಶಿಖ್ಖೀರ್(ರ)- ಅಹ್ಮದ್, ಅಬೂ ದಾವೂದ್, ನಸಾಈ, ತಿರ್ಮಿದಿ)

"ಬದ್ರ್ ಯುದ್ಧದ ದಿನ ನಮ್ಮ ಪೈಕಿ ಮಿಕ್ದಾದ್ ಬಿನ್ ಅಸ್ವದ್‌ರ(ರ) ಹೊರತು ಯಾರಿಗೂ ಸವಾರಿಯ ಜಾನುವಾರು ಇರಲಿಲ್ಲ. ರಾತ್ರಿ ಪ್ರವಾದಿ(ಸ) ಅವರಲ್ಲದೆ ಬೇರೆ ಯಾರೂ ತಂಗುವವರಿರಲಿಲ್ಲ. ಪ್ರವಾದಿ(ಸ) ಒಂದು ಮರದ ಕೆಳಗೆ ನಮಾಝ್ ಮಾಡುತ್ತಿದ್ದರು ಮತ್ತು ಅಳುತ್ತಿದ್ದರು. ಇದೇ ಸ್ಥಿತಿಯಲ್ಲಿ ಬೆಳಗಾಯಿತು." (ವರದಿ: ಹ. ಅಲೀ(ರ)- ಇಬ್ನು ಹಿಬ್ಬಾನ್)

"ಪ್ರವಾದಿವರ್ಯರಿಗೆ(ಸ) ಕಾಯಿಲೆ ಜೋರಾದಾಗ ಹಾಗೂ ನಮಾಝ್‌ನ ಸಮಯ ಆಯಿತೆಂದು ಅವರಿಗೆ ತಿಳಿಸಿದಾಗ ಅವರು(ಸ)- 'ನಮಾಝ್ ಮಾಡಿಸುವಂತೆ ಅಬೂಬಕರ್(ರ) ಅವರಿಗೆ ಹೇಳಿರಿ' ಎಂದರು. ಹ. ಆಯಿಶಾ(ರ) ಹೇಳಿದರು- 'ಅಬೂಬಕರ್(ರ) ಕೋಮಲ ಹೃದಯದವರು. ಕುರ್‌ಆನ್ ಪಠಿಸುವಾಗ ಅಳುವನ್ನು ತಡೆಯಲು ಅವರಿಂದಾಗದು.' ಆಗ ಪ್ರವಾದಿ(ಸ) ಹೇಳಿದರು- 'ಅವರಿಗೆ ನಮಾಝ್ ಮಾಡಿಸಲು ಹೇಳಿ.' ಹ. ಆಯಿಶಾ(ರ) ಮತ್ತೆ ಅದೇ ಮಾತು ಹೇಳಿದರು. ಆಗ ಪ್ರವಾದಿ(ಸ)- ಅವರಿಗೆ ನಮಾಝ್ ಮಾಡಿಸಲು ಹೇಳಿ. ನೀವು ಯೂಸುಫ್‌ರ(ಅ) ಕಾಲದ ಮಹಿಳೆಯರಂತಿರುವಿರಿ ಎಂದು ಹೇಳಿದರು."

(ವರದಿ: ಹ. ಇಬ್ನು ಉಮರ್(ರ)- ಬುಖಾರಿ)

ಶಾಫಿಈ ಮತ್ತು ಹನಫೀ ಕರ್ಮಶಾಸ್ತ್ರಗಳ ಪ್ರಕಾರ ಅಳು ಅಲ್ಲಾಹನ ಭಯದಿಂದಾಗಿದ್ದರೆ ಅಥವಾ ಯಾವುದಾದರೂ ಕಾಯಿಲೆಯಿಂದಾಗಿದ್ದರೆ ಜಾಇಝ್ ಆಗಿದೆ. ಅಲ್ಲವಾದರೆ ಅದು ಎರಡು ಅಕ್ಷರಗಳು ಅಥವಾ ಅದಕ್ಕಿಂತ ಹೆಚ್ಚಿನ ಶಬ್ದವನ್ನು ಒಳಗೊಂಡಿದ್ದರೆ ನಮಾಝ್ ಭಂಗವಾಗುವುದು.

**2. ಕಂಠಶುದ್ಧಿ ಮಾಡುವುದು:**

"ನಾನು ಒಂದು ನಿರ್ದಿಷ್ಟ ಸಮಯದಲ್ಲಿ ಪ್ರವಾದಿವರ್ಯರ(ಸ) ಬಳಿ ಹೋಗುತ್ತಿದ್ದೆ. ನಾನು ಹೋಗಿ ಅನುಮತಿ ಕೋರುತ್ತಿದ್ದೆ. ಪ್ರವಾದಿ(ಸ) ನಮಾಝ್‌ನಲ್ಲಿದ್ದರೆ ಕಂಠಶುದ್ಧಿ ಮಾಡುತ್ತಿದ್ದರು. ನಾನು ಆಗ ಒಳಗೆ ಪ್ರವೇಶಿಸುತ್ತಿದ್ದೆ. ಪ್ರವಾದಿವರ್ಯರು(ಸ) ನಮಾಝ್ ಮುಗಿಸಿದ ಬಳಿಕ ನನಗೆ ಅನುಮತಿ ನೀಡುತ್ತಿದ್ದರು." (ವರದಿ: ಹ. ಅಲೀ(ರ)- ಅಹ್ಮದ್, ನಸಾಈ)

ಹನಫೀ, ಶಾಫಿಈ ಕರ್ಮಶಾಸ್ತ್ರಗಳ ಪ್ರಕಾರ ಕಂಠಶುದ್ಧಿ ಮಾಡುವುದು ಅಗತ್ಯಕ್ಕಾಗಿದ್ದರೆ ಮತ್ತು ಅದು ಎರಡು ಅಕ್ಷರಗಳಿಗಿಂತ ಕಡಿಮೆಯಿದ್ದರೆ ಅದರಿಂದ ನಮಾಝ್ ಭಂಗವಾಗದು. ಆದರೆ ಅದು ಅನಗತ್ಯವಾಗಿದ್ದು ಅಥವಾ ಅಗತ್ಯವಾಗಿದ್ದರೂ ಎರಡು ಅಕ್ಷರಗಳು ಅಥವಾ ಅದಕ್ಕಿಂತ ಹೆಚ್ಚಿನ ಶಬ್ದ ಹೊರಟರೆ ನಮಾಝ್ ಭಂಗವಾಗುತ್ತದೆ.

### 3. ಗಮನ:

ಫರ್ಝ್ ನಮಾಝ್‌ನಲ್ಲಿ ಇತರೆಡೆಗೆ ಗಮನ ಹರಿಸುವುದು ಜಾಇಝ್ ಅಲ್ಲ. ಫರ್ಝ್ ಅಲ್ಲದ ನಮಾಝ್‌ಗಳಲ್ಲಿ ಅತ್ಯಗತ್ಯದ ಸಂದರ್ಭದಲ್ಲಿ ಜಾಇಝ್ ಆಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು-

"ಜನರೇ! ನಮಾಝ್‌ನಲ್ಲಿ ಇತರೆಡೆಗೆ ಗಮನ ಹರಿಸುವುದರಿಂದ ದೂರವಿರಿ. ಏಕೆಂದರೆ ಬೇರೆಡೆಗೆ ಗಮನ ಹರಿಸುವ ವ್ಯಕ್ತಿಯ ನಮಾಝ್ ಆಗುವುದಿಲ್ಲ. ಒಂದು ವೇಳೆ ಐಚ್ಛಿಕ (ಫರ್ಝ್ ಅಲ್ಲದ) ನಮಾಝ್‌ಗಳಲ್ಲಿ ನೀವು ಅದಕ್ಕೆ ನಿರ್ಬಂಧಿತರಾದರೂ ಫರ್ಝ್ ನಮಾಝ್‌ನಲ್ಲಿ ನಿರ್ಬಂಧಿತರಾಗದಿರಿ." **(ವರದಿ: ಹ. ಅಬ್ದುದ್ದರ್ದಾ(ರ)- ಅಹ್ಮದ್)**

"ನಮಾಝ್‌ನಲ್ಲಿ ಇತರೆಡೆಗೆ ಗಮನ ಹರಿಸುವುದರಿಂದ ದೂರವಿರಿ. ಏಕೆಂದರೆ ನಮಾಝ್‌ನಲ್ಲಿ ಇತರೆಡೆಗೆ ಗಮನ ಹರಿಸುವುದು ವಿನಾಶಕಾರಿಯಾಗಿದೆ. ಅತ್ಯಗತ್ಯವೆನಿಸಿದರೆ ಐಚ್ಛಿಕ ನಮಾಝ್‌ನಲ್ಲಿ ಇತರೆಡೆಗೆ ಗಮನ ಹರಿಸಿ. ಫರ್ಝ್‌ನಲ್ಲಿ ಸಲ್ಲದು."

**(ವರದಿ: ಹ. ಅನಸ್(ರ)- ತಿರ್ಮಿದಿ)**

"ಪ್ರವಾದಿ(ಸ) ಬಲಕ್ಕೆ ಮತ್ತು ಎಡಕ್ಕೆ ಗಮನ ಹರಿಸುತ್ತಾ ನಮಾಝ್ ಮಾಡುತ್ತಿದ್ದರು. ಆದರೆ ಹಿಂದಕ್ಕೆ ತಮ್ಮ ಕತ್ತನ್ನು ತಿರುಗಿಸುತ್ತಿರಲಿಲ್ಲ."

**(ವರದಿ: ಹ. ಇಬ್ನು ಅಬ್ಬಾಸ್(ರ)- ಅಹ್ಮದ್)**

### 4. ಹಾವು, ಚೇಳು ಇತ್ಯಾದಿ ವಿಷಕಾರಿ ಅಥವಾ ಹಾನಿಕರ ಪ್ರಾಣಿಗಳನ್ನು ಕೊಲ್ಲುವುದು:

ಪ್ರವಾದಿ(ಸ) ಈ ರೀತಿ ಹೇಳಿರುವರು-

"ನಮಾಝ್‌ನಲ್ಲಿರುವಾಗ ಎರಡು ಕಪ್ಪು ಪ್ರಾಣಿಗಳಾದ ಹಾವು ಮತ್ತು ಚೇಳನ್ನು ಕೊಲ್ಲಿರಿ."

**(ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)**

ಹನಫೀ ಕರ್ಮಶಾಸ್ತ್ರದಲ್ಲಿ ಹಾವು ಚೇಳುಗಳನ್ನು ನಮಾಝ್‌ನಲ್ಲಿ ಕೊಲ್ಲುವುದು ಜಾಯಿಝ್ ಆಗಿದೆ. ಅದರಿಂದ 'ಅಮಲ್ ಕಸೀರ್' ಆದರೂ ಸರಿಯೆ. ಆದರೆ ಇನ್ನೊಂದು ಅಭಿಪ್ರಾಯ ಪ್ರಕಾರ 'ಅಮಲ್ ಕಸೀರ್' ಆದರೆ ನಮಾಝ್ ಭಂಗವಾಗುತ್ತದೆ.

### 5. ತುರ್ತು ಅಗತ್ಯದ ಸಂದರ್ಭದಲ್ಲಿ ಸ್ವಲ್ಪ ನಡೆಯುವುದು:

"ಪ್ರವಾದಿ(ಸ) ಮನೆಯಲ್ಲಿ ನಮಾಝ್ ಮಾಡುತ್ತಿದ್ದರು. ಒಳಗಿನಿಂದ ಬಾಗಿಲು ಹಾಕಿದ್ದರು. ನಾನು ಬಂದು ಬಾಗಿಲು ತೆರೆಯಲು ಹೇಳಿದೆ. ಪ್ರವಾದಿ(ಸ) ಸ್ವಲ್ಪ ನಡೆದು ಬಾಗಿಲು ತೆರೆದು ತಮ್ಮ ನಮಾಝ್‌ನ ಸ್ಥಾನದಲ್ಲಿ ಹೋಗಿ ನಿಂತರು. ಬಾಗಿಲು ಅವರ(ಸ) ಮುಂಭಾಗದಲ್ಲಿತ್ತು." (ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ನಸಾಈ, ತಿರ್ಮಿದಿ)

"ಪ್ರವಾದಿ(ಸ) ನಮಾಝ್ ಮಾಡುತ್ತಿದ್ದರು. ಯಾರಾದರೂ ಬಾಗಿಲು ತೆರೆಯಲು ಹೇಳಿದರೆ ಹಾಗೂ ಬಾಗಿಲು ಬಲ ಅಥವಾ ಎಡ ಬದಿಯಲ್ಲಿದ್ದರೆ ಅವರು(ಸ) ಬಾಗಿಲು ತೆರೆಯುತ್ತಿದ್ದರು. ಆದರೆ ಅವರು ಕಿಬ್ಲಾಕ್ಕೆ ಬೆನ್ನು ಮಾಡುತ್ತಿರಲಿಲ್ಲ(ಅರ್ಥಾತ್ ಬಾಗಿಲು ಅವರ(ಸ) ಹಿಂದೆ ಇದ್ದರೆ ಅವರು ಬಾಗಿಲು ತೆರೆಯುತ್ತಿರಲಿಲ್ಲ)."

(ವರದಿ: ಹ. ಆಯಿಶಾ(ರ)- ದಾರಕುತ್ನಿ)

ಯಾವುದೇ ನಮಾಝ್‌ನಲ್ಲಿ ಅತೀ ಅಗತ್ಯದ ವೇಳೆ ಸ್ವಲ್ಪ ನಡೆಯುವುದು ಎಲ್ಲಾ ಕರ್ಮಶಾಸ್ತ್ರಗಳ ಪ್ರಕಾರ ಜಾಇಝ್ ಆಗಿದೆ. ಆದರೆ ಹೆಚ್ಚು ನಡೆದರೆ ನಮಾಝ್ ಭಂಗವಾಗುತ್ತದೆ.

### 6. ಮಗುವನ್ನು ಎತ್ತುವುದು:

"ಪ್ರವಾದಿ(ಸ) ನಮಾಝ್ ಮಾಡುತ್ತಿದ್ದರು. ಅವರ(ಸ) ಮೊಮ್ಮಗಳಾದ ಉಮಾಮ ಬಿಂತು ಝೈನಬ್(ರ) ಅವರ ಹೆಗಲ ಮೇಲೆ ಕುಳಿತಿದ್ದರು. ಪ್ರವಾದಿ(ಸ) ರುಕೂಅ್ ಮಾಡುವಾಗ ಮಗುವನ್ನು ಕೆಳಗಿಳಿಸಿದರು. ಸುಜೂದ್‌ಗಳ ನಂತರ ನಿಂತುಕೊಂಡಾಗ ಮಗುವನ್ನು ಮತ್ತೆ ಹೆಗಲ ಮೇಲಿರಿಸಿದರು. ಹ. ಅಮ್ರ್ ಬಿನ್ ಸಲೀಮ್‌ರವರ(ರ) ಪ್ರಕಾರ ಈ ಘಟನೆ ಫಜ್ರ್ ನಮಾಝ್‌ನ ವೇಳೆ ನಡೆದಿತ್ತು." (ವರದಿ: ಹ. ಅಬೂ ಕತಾದಃ(ರ)- ಮುಸ್ಲಿಮ್, ಅಹ್ಮದ್, ನಸಾಈ)

"ಒಂದು ದಿನ ಝುಹರ್ ಅಥವಾ ಅಸರ್ ನಮಾಝ್‌ನ ವೇಳೆ ಪ್ರವಾದಿ(ಸ), ಹ. ಹಸನ್(ರ) ಅಥವಾ ಹ. ಹುಸೈನ್(ರ) ಅವರನ್ನೆತ್ತಿ ಮನೆಯಿಂದ ಹೊರ ಬಂದರು. ಪ್ರವಾದಿ(ಸ) ಮುಂದೆ ಬಂದು ನಮಾಝ್‌ಗೆ 'ಅಲ್ಲಾಹು ಅಕ್ಬರ್' ಹೇಳಿದರು. ನಮಾಝ್‌ನಲ್ಲಿ ಒಂದು ಸುಜೂದ್‌ನ ವೇಳೆ ಬಹಳ ಹೊತ್ತಿನ ತನಕ ಅವರು(ಸ) ಶಿರವನ್ನು ನೆಲದ ಮೇಲೆ ಇಟ್ಟಿದ್ದರು. ನಾನು ನನ್ನ ತಲೆಯೆತ್ತಿ ನೋಡಿದಾಗ ಪ್ರವಾದಿ(ಸ) ಸುಜೂದ್‌ನಲ್ಲೇ ಇದ್ದರು. ಮಗು ಅವರ ಬೆನ್ನ ಮೇಲೆ ಕುಳಿತಿತ್ತು. ನಾನು ಮತ್ತೆ ಸುಜೂದ್‌ಗೆ ಹೋದೆ. ನಮಾಝ್ ಮುಗಿದ ನಂತರ ಜನರು- 'ಓ ಪ್ರವಾದಿವರ್ಯರೇ! ಈ ದಿನವಂತೂ ತಾವು ನಮಾಝ್‌ನಲ್ಲಿ ಒಂದು ದೀರ್ಘ ಸುಜೂದ್ ಮಾಡಿದಿರಿ. ತಮಗೆ ಏನಾದರೂ ಅವಗಢ ಆಗಿರಬೇಕು ಅಥವಾ ತಮಗೆ ವಹೀ ಅವತೀರ್ಣಗೊಳ್ಳುತ್ತಿದೆ ಎಂದು ನಾವು ಭಾವಿಸಿದೆವು' ಎಂದರು. ಆಗ ಪ್ರವಾದಿ(ಸ)- 'ಅವೆರಡರ ಪೈಕಿ ಯಾವುದೂ ಸಂಭವಿಸಿರಲಿಲ್ಲ. ನನ್ನ ಮೊಮ್ಮಗನು ನನ್ನ ಮೇಲೆ ಏರಿದ್ದನು. ಅವನಿಗೆ ಸಾಕೆನಿಸುವ ಮೊದಲು ಅವನನ್ನು ಇಳಿಸಿ ಬಿಡುವುದು ನನಗೆ ಇಷ್ಟವಾಗಲಿಲ್ಲ' ಎಂದರು."

(ವರದಿ: ಹ. ಶದ್ದಾದ್(ರ)- ಅಹ್ಮದ್, ನಸಾಈ, ಹಾಕಿಮ್)

# ನಮಾಝ್‌ನ ಅನಪೇಕ್ಷಿತ ವಿಷಯಗಳು

ನಮಾಝ್‌ನ ಯಾವುದಾದರೂ ಸುನ್ನತನ್ನು ತೊರೆಯುವುದು ಅನಪೇಕ್ಷಿತ (ಮಕ್ರೂಹ್) ಕಾರ್ಯವಾಗಿದೆ. ಮಕ್ರೂಹ್‌ನಿಂದ ನಮಾಝ್ ಅಸಿಂಧುವಾಗುವುದಿಲ್ಲ. ಆದರೆ ಅವುಗಳನ್ನು ಮಾಡುವುದು ಅಪೇಕ್ಷಣೀಯವಲ್ಲ. ಇದಲ್ಲದೆ ನಮಾಝ್‌ನಲ್ಲಿ ಈ ಕೆಳಗಿನ ವಿಷಯಗಳೂ ಮಕ್ರೂಹ್ ಆಗಿವೆ-

**1. ಬಟ್ಟೆ, ಶರೀರ ಅಥವಾ ನೆಲವನ್ನು ಸರಿಪಡಿಸುತ್ತಿರುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಮಾಝ್ ಮಾಡುತ್ತಿರುವಾಗ ಹರಳುಗಳ ಮೇಲೆ ಕೈಯಾಡಿಸಬೇಡಿ. (ಪ್ರವಾದಿ ವರ್ಯರ(ಸ) ಕಾಲದಲ್ಲಿ ಮಸೀದಿಯ ನೆಲವು ಮಣ್ಣಿನದ್ದಾಗಿತ್ತು ಮತ್ತು ಅದರ ಮೇಲೆ ಮರಳುಗಳನ್ನು ಹಾಕಲಾಗುತ್ತಿತ್ತು) ಹಾಗೆ ಮಾಡುವುದು ಅನಿವಾರ್ಯವಾದರೆ ಒಂದು ಸಲ ಹರಳುಗಳನ್ನು ಸರಿಪಡಿಸಿರಿ."

(ವರದಿ: ಹ. ಮಈಕಬ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

"ನಿಮ್ಮ ಪೈಕಿ ಯಾರಾದರೂ ನಮಾಝ್‌ಗೆ ನಿಂತಾಗ ಅಲ್ಲಾಹನ ಕರುಣೆಯು ಅವನ ಮುಂದಿರುತ್ತದೆ. ಆದ್ದರಿಂದ ಅವನು ಮರಳುಗಳ ಮೇಲೆ ಕೈಯಾಡಿಸಬಾರದು (ಅರ್ಥಾತ್ ಸುಜೂದ್ ಮಾಡಲಿಕ್ಕಾಗಿ ಅವುಗಳನ್ನು ಸಮತಟ್ಟು ಗೊಳಿಸಬಾರದು)."

(ವರದಿ: ಅಬೂದರ್ರ್(ರ)- ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

**2. ಸೊಂಟದ ಮೇಲೆ ಕೈಯಿಡುವುದು:**

"ಪ್ರವಾದಿವರ್ಯರು(ಸ) ನಮಾಝ್‌ನ ವೇಳೆ ಸೊಂಟದ ಮೇಲೆ ಕೈಯಿಡುವುದರಿಂದ ತಡೆದಿರುವರು." (ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)

**3. ಆಕಾಶದತ್ತ ನೋಡುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ಕೆಲವರು ನಮಾಝ್‌ನಲ್ಲಿ ತಮ್ಮ ದೃಷ್ಟಿಯನ್ನು ಆಕಾಶದ ಕಡೆಗೆ ಎತ್ತುತ್ತಾರೆ. ಅವರು ಅದನ್ನು ತೊರೆಯಬೇಕು. ಅನ್ಯಥಾ ಅವರ ದೃಷ್ಟಿಗಳು ಕೀಳಲ್ಪಡಬಹುದು."

(ಹ. ಅಬೂ ಹುರೈರಾ(ರ)- ಅಹ್ಮದ್, ನಸಾಈ, ಮುಸ್ಲಿಮ್)

**4. ನಮಾಝ್‌ನಲ್ಲಿ ಗಮನ ಹರಿಸುವಂತಹ ಯಾವುದಾದರೂ ವಸ್ತು ಮುಂದೆ ಇರುವುದು:**

"ಹ. ಆಯಿಶಾರ(ರ) ಬಳಿ ಒಂದು ತೆಳುವಾದ ಪರದೆಯಿತ್ತು. ಅದನ್ನವರು ತಮ್ಮ ಮನೆಯ ಒಂದು ಭಾಗದಲ್ಲಿ ತೂಗು ಹಾಕುತ್ತಿದ್ದರು. ಅವರಲ್ಲಿ ಪ್ರವಾದಿ(ಸ) ಹೇಳಿದರು- ಈ ಪರದೆಯನ್ನು ತೆಗೆದು ಹಾಕು. ಏಕೆಂದರೆ ಅದರ ಚಿತ್ರಗಳು ನಮಾಝ್‌ನಲ್ಲಿ ನನ್ನ ಮುಂದೆ ಬರುತ್ತವೆ." (ವರದಿ: ಹ. ಅನಸ್(ರ)- ಬುಖಾರಿ)

"ಪ್ರವಾದಿವರ್ಯರು(ಸ) ನನ್ನ ಒಂದು ಉಣ್ಣೆಯ ಚದ್ದರದ ಮೇಲೆ ನಮಾಝ್ ಮಾಡಿದರು. ಅದರಲ್ಲಿ ಪಟ್ಟೆಗಳಿದ್ದುವು. ಈ ಪಟ್ಟೆಗಳು ನನ್ನ ಗಮನವನ್ನು ಸೆಳೆದುವು. ಇದನ್ನು ಅಬೂ ಜಹಮ್(ರ) (ಆ ಚದ್ದರವನ್ನು ಪ್ರವಾದಿವರ್ಯರಿಗೆ(ಸ) ಉಡುಗೊರೆಯಾಗಿ ಕೊಟ್ಟವರು)ರಿಗೆ ಕೊಟ್ಟು ಅವರ ಬಳಿಯಿರುವ (ಪಟ್ಟೆಯಿಲ್ಲದ) ದಪ್ಪದ ಚದ್ದರವನ್ನು ತನ್ನಿರಿ ಎಂದು ಪ್ರವಾದಿ(ಸ) ಆದೇಶಿಸಿದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

**5. ಸಲಾಮ್ ಹೇಳುವಾಗ ಕೈಯಿಂದ ಸನ್ನೆ ಮಾಡುವುದು:**

"ನಾವು ಪ್ರವಾದಿವರ್ಯರ(ಸ) ಹಿಂದೆ ನಮಾಝ್ ಮಾಡುತ್ತಿದ್ದೆವು. ಅವರು(ಸ) ಹೇಳಿದರು: ಈ ಜನರು ಬೆಚ್ಚಿ ಬಿದ್ದ ಕುದುರೆಯ ಬಾಲದಂತೆ ಕೈಯಿಂದ ಏಕೆ ಸಲಾಮ್ ಹೇಳುತ್ತಾರೆ? ನೀವು ಕೇವಲ ತೊಡೆಯ ಮೇಲೆ ಕೈಯಿಟ್ಟುಕೊಂಡೇ ಅಸ್ಸಲಾಮು ಅಲೈಕುಮ್, ಅಸ್ಸಲಾಮು ಅಲೈಕುಮ್ ಎಂದರೆ ಸಾಕಾಗುವುದು."

(ವರದಿ: ಹ. ಜಾಬಿರ್ ಬಿನ್ ಸಮುರಃ(ರ)- ನಸಾಈ)

**6. ಬಟ್ಟೆಗಳನ್ನು ಇಳಿಬಿಡುವುದು ಮತ್ತು ಮುಖವನ್ನು ಮರೆಸುವುದು:**

"ಪ್ರವಾದಿವರ್ಯರು(ಸ) ನಮಾಝ್‌ನಲ್ಲಿ ಬಟ್ಟೆಯನ್ನು ನೇತಾಡಿಸುವುದರಿಂದ ಮತ್ತು ಮುಖವನ್ನು ಮರೆಸುವುದರಿಂದ ತಡೆದಿರುವರು."

(ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ, ಹಾಕಿಮ್)

**7. ಊಟ ತಯಾರಿರುವಾಗ ನಮಾಝ್ ಮಾಡುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು: "ಊಟ ಬಡಿಸಿರುವಾಗ ಮತ್ತು ನಮಾಝ್‌ಗೆ ನಿಂತಿರುವಾಗ ಮೊದಲು ಊಟ ಮಾಡಿರಿ." (ವರದಿ: ಹ. ಆಯಿಶಾ(ರ)- ಅಹ್ಮದ್, ಮುಸ್ಲಿಮ್)

**8. ಮಲ-ಮೂತ್ರಗಳನ್ನು ತಡೆಹಿಡಿದು ನಮಾಝ್ ಮಾಡುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರೂ ಊಟ ತಯಾರಿರುವಾಗ ಮತ್ತು ಮಲ-ಮೂತ್ರಗಳನ್ನು ತಡೆಹಿಡಿದು ನಮಾಝ್ ಮಾಡದಿರಲಿ."

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ಮುಸ್ಲಿಮ್)

**9. ನಿದ್ರೆ ಬರುತ್ತಿರುವಾಗ ನಫಿಲ್ ನಮಾಝ್ ಮಾಡುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಿಗಾದರೂ ತೂಕಡಿಕೆ ಬಂದರೆ ಅವನು ತನ್ನ ನಿದ್ರೆ ಮುಗಿಯುವ

ತನಕ ಮಲಗಲಿ. ಏಕೆಂದರೆ ಅವನು ತೂಕಡಿಸುತ್ತಾ ನಮಾಝ್ ಮಾಡಿದರೆ ಕ್ಷಮೆ ಯಾಚಿಸುತ್ತಾ ತನ್ನನ್ನು ತಾನೇ ಬೈದುಕೊಳ್ಳುವ ಸಾಧ್ಯತೆಯಿದೆ."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜ:)

### 10. ಮಸೀದಿಯಲ್ಲಿ ನಮಾಝ್‌ಗಾಗಿ ಒಂದು ಸ್ಥಳವನ್ನು ಕಾದಿರಿಸುವುದು:

"ಪ್ರವಾದಿವರ್ಯರು(ಸ) ಕಾಗೆಯಂತೆ ಕುಕ್ಕುವುದರಿಂದ ವನ್ಯ ಪ್ರಾಣಿಯಂತೆ ಕೈಗಳನ್ನು ಚಾಚುವುದರಿಂದ ಮತ್ತು ಮಸೀದಿಯಲ್ಲಿ ಒಂಟೆಯಂತೆ (ನಮಾಝ್‌ಗಾಗಿ) ಒಂದು ಸ್ಥಳವನ್ನು ಕಾದಿರಿಸುವುದರಿಂದ ತಡೆದಿರುವರು."

(ವರದಿ: ಹ. ಅಬ್ದುರ್ರಹ್ಮಾನ್ ಬಿನ್ ಶುಬುಲ್(ರ)- ಅಹ್ಮದ್, ಇಬ್ನು ಖುಝೈಮ, ಇಬ್ನು ಹಿಬ್ಬಾನ್, ಹಾಕಿಮ್)

### 11. ಎರಡೂ ಕೈಗಳ ಬೆರಳುಗಳನ್ನು ಪರಸ್ಪರ ಪೋಣಿಸುವುದು:

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ಮಸೀದಿಯೊಳಗಿರುವಾಗ ಅವನು ತನ್ನ ಕೈಗಳ ಬೆರಳುಗಳನ್ನು ಪರಸ್ಪರ ಪೋಣಿಸಬಾರದು. ನಿಮ್ಮ ಪೈಕಿ ಒಬ್ಬನು ಮಸೀದಿಯಲ್ಲಿರುವಾಗ ಅವನು ಅಲ್ಲಿಂದ ಹೊರಡುವ ತನಕ ಅವನು ನಮಾಝ್‌ನಲ್ಲಿದ್ದಂತೆಯೇ ಸರಿ."

(ವರದಿ: ಹ. ಅಬೂ ಸಈದ್(ರ)- ಅಹ್ಮದ್)

### 12. ಏಳುವಾಗ ಅಥವಾ ಕೂರುವಾಗ ಕೈಯ ಆಸರೆ ಪಡೆಯುವುದು

"ಪ್ರವಾದಿವರ್ಯರು(ಸ) ವ್ಯಕ್ತಿಯೊಬ್ಬನು ನಮಾಝ್‌ನಲ್ಲಿ ಕೈಯ ಆಸರೆ ಪಡೆದು ಕುಳಿತುಕೊಳ್ಳುವುದರಿಂದ ತಡೆದಿರುವರು."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಅಹ್ಮದ್, ಅಬೂ ದಾವೂದ್)

ಆದರೆ ಮುದಿತನ ಅಥವಾ ಯಾವುದಾದರೂ ರೋಗದಿಂದಾಗಿ ಕೈ ಅಥವಾ ಕಂಬದ ಆಸರೆ ಪಡೆಯುವ ಅನುಮತಿಯಿದೆ.

"ಪ್ರವಾದಿವರ್ಯರು(ಸ) ವೃದ್ಧರಾದಾಗ ಮತ್ತು ಅವರ ಭಾರ ಹೆಚ್ಚಾದಾಗ ಅವರು ನಮಾಝ್‌ನಲ್ಲಿ ಒಂದು ಕಂಬದ ಆಸರೆಯನ್ನು ಪಡೆಯತೊಡಗಿದರು."

(ವರದಿ: ಹ. ಉಮ್ಮು ಕೈಸ್(ರ)- ಅಬೂ ದಾವೂದ್)

### 13. ಕೂದಲನ್ನು ಹಿಂದಿನಿಂದ ಕಟ್ಟುವುದು:

"ಒಬ್ಬನು ಕೂದಲನ್ನು ಹಿಂದಿನಿಂದ ಕಟ್ಟಿಕೊಂಡು ನಮಾಝ್ ಮಾಡುತ್ತಿರುವುದನ್ನು ಕಂಡು ಹ. ಇಬ್ನು ಅಬ್ಬಾಸ್(ರ) ಅದನ್ನು ಬಿಚ್ಚ ತೊಡಗಿದರು. ನಂತರ ಅವರು ವಿಚಾರಿಸಿದರು: ನನ್ನ ತಲೆಕೂದಲನ್ನು ನೀವು ಯಾಕೆ ಬಿಚ್ಚಿದಿರಿ. ಆಗ ಅವರು ಹೇಳಿದರು: ನಾನು ಪ್ರವಾದಿ(ಸ)

ಹೀಗೆ ಹೇಳಿರುವುದನ್ನು ಕೇಳಿರುವೆನು- ಕೂದಲನ್ನು ಹಿಂದಿನಿಂದ ಕಟ್ಟಿ ನಮಾಝ್ ಮಾಡುವುದು ತನ್ನ ತೋಳುಗಳನ್ನು ಬಿಗಿದು ನಮಾಝ್ ಮಾಡಿದಂತೆಯೇ ಆಗಿದೆ."

(ಅಹ್ಮದ್, ಅಬೂ ದಾವೂದ್, ಮುಸ್ಲಿಮ್, ನಸಾಈ)

**14. ಮುಂದೆ ಅಥವಾ ಬಲಭಾಗಕ್ಕೆ ಉಗುಳುವುದು ಅಥವಾ ಮೂಗಿನ ಕೊಳೆ ತೆಗೆಯುವುದು:**

"ಪ್ರವಾದಿವರ್ಯರು(ಸ) ಮಸೀದಿಯ ಗೋಡೆಯಲ್ಲಿ ಉಗುಳು ಇರುವುದನ್ನು ಕಂಡು ಒಂದು ಹರಳನ್ನೆತ್ತಿ ಅದನ್ನು ಒರೆಸಿದರು. ಅನಂತರ ಹೀಗೆ ಹೇಳಿದರು: ನಿಮ್ಮ ಪೈಕಿ ಯಾರಾದರೂ ತನ್ನ ಮೂಗು ಶುಚಿಗೊಳಿಸುವುದಿದ್ದರೆ ಅವನು ತನ್ನ ಮುಂದೆ ಅಥವಾ ಬಲಭಾಗಕ್ಕೆ ಮೂಗನ್ನು ಶುಚಿಗೊಳಿಸದಿರಲಿ. ಅವನು ತನ್ನ ಎಡಭಾಗಕ್ಕೆ ಅಥವಾ ಕಾಲಿನ ಕೆಳಗೆ ಉಗುಳಲಿ." (ವರದಿ: ಹ. ಅಬೂ ಹುರೈರಾ(ರ), ಅಬೂ ಸಈದ್(ರ)- ಬುಖಾರಿ, ಮುಸ್ಲಿಮ್)

ಇದು ಮಸೀದಿಯ ನೆಲ ಮಣ್ಣಿನದ್ದಾಗಿರುವಾಗಿನ ಮತ್ತು ಉಗುಳುವುದರಿಂದ ಇತರರಿಗೆ ತೊಂದರೆಯಾಗುವ ಸಾಧ್ಯತೆಯಿಲ್ಲದಾಗಿನ ವಿಷಯ. ಮಸೀದಿಯ ನೆಲವು ಗಟ್ಟಿಯಾಗಿದ್ದರೆ ಅಥವಾ ಉಗುಳುವುದರಿಂದ ಇತರರಿಗೆ ತೊಂದರೆಯಾಗುವ ಸಾಧ್ಯತೆಯಿದ್ದರೆ ಉಗುಳುವುದು ಅಥವಾ ಮೂಗು ಶುಚಿಗೊಳಿಸುವುದು ಧರ್ಮಸಮ್ಮತವಲ್ಲ. ಏಕೆಂದರೆ ಇತರ ಅನೇಕ ವಚನಗಳಲ್ಲಿ ಪ್ರವಾದಿವರ್ಯರು(ಸ) ಮಸೀದಿಯಲ್ಲಿ ಉಗುಳುವುದನ್ನು ನಿಷೇಧಿಸಿರುವರು.

**ಇವುಗಳಲ್ಲದೆ ಹನಫೀ ಕರ್ಮಶಾಸ್ತ್ರದಂತೆ ಈ ಕೆಳಗಿನ ವಿಷಯಗಳೂ ನಮಾಝ್‌ನಲ್ಲಿ ಮಕ್ರೂಹ್ ಆಗಿವೆ-**

1) ಎರಡು ಪಾದಗಳನ್ನು ನೇರವಾಗಿಟ್ಟು ಅದರ ಮೇಲೆ ಅಥವಾ ನೆಲದ ಮೇಲೆ ಕುಳಿತಿರುವುದು ಅಥವಾ ಎರಡು ಕಾಲುಗಳನ್ನು ಹರಡಿ ಅವುಗಳ ಮೇಲೆ ಕುಳಿತಿರುವುದು. 2) ಸನ್ನೆಯಿಂದ ಸಲಾಮ್‌ಗೆ ಉತ್ತರಿಸುವುದು. 3) ಕೈಯಿಂದ ಆಯತ್ ಅಥವಾ ತಸ್ಬೀಹ್‌ಗಳನ್ನು ಎಣಿಸುವುದು. 4) ನಿಂತು ಕೊಂಡಲ್ಲದೆ ಬೇರಾವುದೇ ಸ್ಥಿತಿಯಲ್ಲಿ ಕಿರಾಅತ್ ಪಠಿಸುವುದು. 5) ನಂತರದ ಸೂರಃಗಳನ್ನು ಮೊದಲು ಮತ್ತು ಮೊದಲ ಸೂರಃಗಳನ್ನು ನಂತರ ಪಠಿಸುವುದು. 6) ಅನಿವಾರ್ಯವಲ್ಲದೆ ಆಕಳಿಸುವುದು. 7) ದಾರಿಯಲ್ಲಿ ಅಥವಾ ಸ್ನಾನಗೃಹದಲ್ಲಿ ನಮಾಝ್ ಮಾಡುವುದು. 8) ಮಾಲಿನ್ಯ ಹತ್ತಿರ ಇರುವಲ್ಲಿ ನಮಾಝ್ ಮಾಡುವುದು. 9) ಇಮಾಮ್ ಪೂರ್ಣವಾಗಿ ಮಿಹ್ರಾಬ್‌ನೊಳಗೆ ನಿಂತು ನಮಾಝ್ ಮಾಡುವುದು. 10) ಮಲಗಿರುವವರ ಹತ್ತಿರ ನಮಾಝ್ ಮಾಡುವುದು. 11) ಎಲ್ಲ ನಮಾಝ್‌ಗಳಲ್ಲಿ ಒಂದೇ ಸೂರಃವನ್ನು ಪಠಿಸುವುದು. 12) ನಮಾಝ್‌ನ ಮಧ್ಯೆ ಮುಖದಿಂದ ಮಣ್ಣನ್ನು ಒರೆಸುವುದು. 13) ಕಾರಣವಿಲ್ಲದೆ ಕಣ್ಣುಗಳನ್ನು ಮುಚ್ಚುವುದು. 14) ಆಲಸ್ಯದಿಂದ ಶಿರವಸ್ತ್ರ ಧರಿಸದೆ ನಮಾಝ್ ಮಾಡುವುದು.

# ನಮಾಝ್ ಭಂಗವಾಗುವ ವಿಷಯಗಳು

**1. ಅಮಲ್ ಕಸೀರ್:**

ನಮಾಝ್‌ಗೆ ಸಂಬಂಧವಿಲ್ಲದ ಯಾವುದೇ ಕಾರ್ಯವು ಹೆಚ್ಚಾದರೆ ಅದರಿಂದ ನಮಾಝ್ ಅಸಿಂಧುವಾಗುತ್ತದೆ. ಅದು ಕಡಿಮೆ ಪ್ರಮಾಣದಲ್ಲಿದ್ದರೆ ಅದರಿಂದ ನಮಾಝ್ ಅಸಿಂಧುವಾಗುವುದಿಲ್ಲ. ಒಬ್ಬ ವ್ಯಕ್ತಿಯು ಅವನನ್ನು ನೋಡಿದಾಗ ಅವನು ನಮಾಝ್ ಮಾಡುತ್ತಿಲ್ಲವೆಂದು ಭಾಸವಾಗುವ ಯಾವುದೇ ಕಾರ್ಯವು 'ಅಮಲ್ ಕಸೀರ್' ಎನಿಸಿಕೊಳ್ಳುತ್ತದೆ.

**2. ನಮಾಝ್‌ನ ಯಾವುದೇ ಫರ್ಝ್ ಅಥವಾ ನಿಬಂಧನೆಯನ್ನು ತೊರೆಯುವುದು:**

ತಪ್ಪು ತಪ್ಪಾಗಿ ನಮಾಝ್ ಮಾಡುತ್ತಿದ್ದವನೊಂದಿಗೆ ಪ್ರವಾದಿವರ್ಯರು(ಸ) ನಮಾಝ್ ಪುನರಾವರ್ತಿಸುವಂತೆ ಆದೇಶಿಸಿದರು. ಏಕೆಂದರೆ ಅವನು ನಮಾಝನ್ನು ನೆಮ್ಮದಿಯಿಂದ ನಿರ್ವಹಿಸಿರಲಿಲ್ಲ.

ಅದೇ ರೀತಿ ವುಝೂ ಭಂಗವಾದರೆ ಅವನು ಪುನಃ ವುಝೂ ಮಾಡುವ ತನಕ ಅವನ ನಮಾಝನ್ನು ಅಲ್ಲಾಹನು ಸ್ವೀಕರಿಸುವುದಿಲ್ಲವೆಂದು ಪ್ರವಾದಿವರ್ಯರು(ಸ) ಹೇಳಿರುವರು. ಇದರಿಂದ ವುಝೂ ಇಲ್ಲದೆ ನಮಾಝ್ ಸಿಂಧುವಾಗುವುದಿಲ್ಲವೆಂದು ತಿಳಿದು ಬರುತ್ತದೆ.

**3. ಉದ್ದೇಶಪೂರ್ವಕ ಮಾತನಾಡುವುದು:**

"ಪ್ರವಾದಿವರ್ಯರು(ಸ) ನಮಾಝ್‌ನಲ್ಲಿರುವಾಗ ನಾವು ಅವರಿಗೆ ಸಲಾಮ್ ಹೇಳುತ್ತಿದ್ದೆವು. ಅವರು ಅದಕ್ಕೆ ಉತ್ತರಿಸುತ್ತಿದ್ದರು. ನಾವು ಇಥಿಯೋಪಿಯಾದಿಂದ ಮರಳಿ ಬಂದಾಗ ಪ್ರವಾದಿವರ್ಯರಿಗೆ(ಸ) ಸಲಾಮ್ ಹೇಳಿದೆವು. ಆದರೆ ಅವರು ಅದಕ್ಕೆ ಉತ್ತರಿಸಲಿಲ್ಲ. ಪ್ರವಾದಿವರ್ಯರೇ! ನಾವು ಈ ಮೊದಲು ತಮಗೆ ಸಲಾಮ್ ಹೇಳುತ್ತಿದ್ದೆವು. ತಾವು ಅದಕ್ಕೆ ಉತ್ತರಿಸುತ್ತಿದ್ದಿರಿ ಎಂದು ನಾವು ಹೇಳಿದೆವು. ಆಗ ಪ್ರವಾದಿವರ್ಯರು(ಸ)- ನಮಾಝ್‌ನಲ್ಲಿ ತಲ್ಲೀನತೆಯಿರುತ್ತದೆ (ಇದರಿಂದ ಸಲಾಮ್‌ಗೆ ಉತ್ತರ ಹೇಳಲಿಕ್ಕಾಗುವುದಿಲ್ಲ) ಎಂದರು."

(ವರದಿ: ಹ. ಇಬ್ನು ಮಸ್‌ಊದ್(ರ)- ಬುಖಾರಿ, ಮುಸ್ಲಿಮ್)

"ನಾವು ನಮಾಝ್‌ನಲ್ಲಿ ಮಾತುಕತೆ ನಡೆಸುತ್ತಿದ್ದೆವು. ನಮ್ಮ ಪೈಕಿ ಒಬ್ಬರು ನಮಾಝ್ ಮಾಡುತ್ತಿರುವಾಗ ಹತ್ತಿರ ನಿಂತವನೊಡನೆ ಮಾತನಾಡುತ್ತಿದ್ದರು. ಆದರೆ 'ವ ಕೂಮೂ ಲಿಲ್ಲಾಹಿ ಕಾನಿತೀನ್'(ಅಲ್ಲಾಹನಿಗಾಗಿ ಭಯ-ಭಕ್ತಿಯೊಂದಿಗೆ ನಿಲ್ಲಿರಿ) ಎಂಬ ಆಜ್ಞೆ ಅವತೀರ್ಣಗೊಂಡ ಬಳಿಕ (ನಮಾಝ್‌ನಲ್ಲಿ) ಮೌನವಾಗಿರುವಂತೆ ಹಾಗೂ ಮಾತುಕತೆ ನಡೆಸದಿರುವಂತೆ ನಮಗೆ ಆಜ್ಞಾಪಿಸಲಾಯಿತು."

(ವರದಿ: ಹ. ಝೈದ್ ಬಿನ್ ಅರ್ಕಮ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಆದರೆ ಯಾರಾದರೂ ಮರೆವಿನಿಂದ ಅಥವಾ ಅನುದ್ದೇಶಿತವಾಗಿ ನಮಾಝ್‌ನಲ್ಲಿ ಮಾತನಾಡಿದರೆ ಅವನ ನಮಾಝ್ ಭಂಗವಾಗುವುದಿಲ್ಲ.

"ನಾನು ಪ್ರವಾದಿವರ್ಯರ(ಸ) ಹಿಂದೆ ನಮಾಝ್ ಮಾಡುತ್ತಿದ್ದೆ. ಒಬ್ಬನು ಸೀನಿದನು. ನಾನು 'ಯರ್ಹಮುಕಲ್ಲಾಹ್' (ಅಲ್ಲಾಹನು ನಿನ್ನ ಮೇಲೆ ದಯೆ ತೋರಲಿ) ಎಂದು ಹೇಳಿದೆ. ಜನರು ನನ್ನ ಕಡೆಗೆ ಕುಡಿಗಣ್ಣಿನಿಂದ ನೋಡತೊಡಗಿದರು. ಆಗ ನಾನು- 'ನೀವು ನನ್ನನ್ನು ಏಕೆ ನೋಡುತ್ತಿರುವಿರಿ?' ಎಂದು ವಿಚಾರಿಸಿದೆ. ಆಗ ಅವರು ತಮ್ಮ ತೊಡೆಗಳ ಮೇಲೆ ಕೈ ಹೊಡೆಯ ತೊಡಗಿದರು. ಅವರು ನನ್ನನ್ನು ಮೌನವಾಗಿಸಲು ಬಯಸುತ್ತಿದ್ದರು. ನಾನು ಅವರಲ್ಲಿ ಮಾತನಾಡ ಬಯಸುತ್ತಿದ್ದೆ. ಆದರೆ ನಾನು ಸುಮ್ಮನಾದೆ. ಪ್ರವಾದಿವರ್ಯರಿಗಿಂತ(ಸ)- ನನ್ನ ತಂದೆ ತಾಯಿಗಳು ಪ್ರವಾದಿವರ್ಯರಿಗೆ(ಸ) ಅರ್ಪಿತ- ಮೊದಲಾಗಲಿ, ಅವರ ನಂತರವಾಗಲಿ ಅವರಿಗಿಂತ ಉತ್ತಮ ಶಿಕ್ಷಣ ನೀಡುವ ಗುರುವನ್ನು ನಾನು ಕಂಡಿಲ್ಲ. ಅಲ್ಲಾಹನಾಣೆ! ನಮಾಝ್‌ನ ನಂತರ ಅವರು ನನ್ನನ್ನು ಜರೆಯಲೂ ಇಲ್ಲ, ಹೊಡೆಯಲೂ ಇಲ್ಲ, ಶಪಿಸಲೂ ಇಲ್ಲ. ಅವರು ಕೇವಲ ಇಷ್ಟು ಹೇಳಿದರು: ನಮಾಝ್‌ನಲ್ಲಿ ಮಾತುಕತೆ ಸರಿಯಲ್ಲ. ಅದು ಕೇವಲ 'ಸುಬ್‌ಹಾನಲ್ಲಾಹ್', 'ಅಲ್ಲಾಹು ಅಕ್ಬರ್' ಹೇಳುವುದು ಮತ್ತು ಕುರ್‌ಆನ್ ಪಠಿಸುವುದಾಗಿದೆ."

(ವರದಿ: ಹ. ಮುಆವಿಯಾ ಬಿನ್ ಹಕಮ್ ಸುಲಮೀ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ನಸಾಈ)

ಇಮಾಮ್ ಶಾಫಿಈಯವರ(ರ) ಅಭಿಪ್ರಾಯ ಇದುವೇ ಆಗಿದೆ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಮರೆವಿನಿಂದ ಅಥವಾ ಅನುದ್ದೇಶಿತವಾಗಿ ನಮಾಝ್‌ನಲ್ಲಿ ಮಾತಾಡಿದರೂ ನಮಾಝ್ ಭಂಗವಾಗುತ್ತದೆ. ಏಕೆಂದರೆ ಅವರ ಅಭಿಪ್ರಾಯದಲ್ಲಿ ಮೇಲಿನ ಹದೀಸ್‌ನಿಂದ, ಪ್ರವಾದಿವರ್ಯರು(ಸ) ನಮಾಝ್‌ನಲ್ಲಿ ಮಾತಾಡಿದವನನ್ನು ನಮಾಝ್ ಪುನರಾವರ್ತಿಸುವಂತೆ ಆದೇಶಿಸಿರಲಿಲ್ಲವೆಂದು ವ್ಯಕ್ತವಾಗುವುದಿಲ್ಲ.

### 4. ತಿನ್ನುವುದು, ಕುಡಿಯುವುದು:

ನಮಾಝ್‌ನಲ್ಲಿ ಉದ್ದೇಶಪೂರ್ವಕವಾಗಿ ತಿಂದರೆ ಅಥವಾ ಕುಡಿದರೆ ನಮಾಝ್ ಅಸಿಂಧುವಾಗುತ್ತದೆ. ಇಮಾಮ್ ಅಬೂ ಹನೀಫಾ(ರ) ಮತ್ತು ಇಮಾಮ್ ಶಾಫಿಈಯವರ(ರ) ಪ್ರಕಾರ ಸುನ್ನತ್ ಮತ್ತು ನಫಿಲ್ ನಮಾಝ್‌ಗಳಿಗೂ ಇದೇ ವಿಧಿ ಅನ್ವಯವಾಗುತ್ತದೆ.

### 5. ನಗುವುದು:

ನಗುವುದರಿಂದ ನಮಾಝ್ ಅಸಿಂಧುವಾಗುತ್ತದೆ. ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಗಹಗಹಿಸಿ ನಗುವುದರಿಂದ ವುಝೂ ಕೂಡಾ ಭಂಗವಾಗುತ್ತದೆ. ಆದರೆ ಅವರ ಪ್ರಕಾರ ಕೊನೆಯ ರಕಅತ್‌ನ ಅತ್ತಹಿಯ್ಯಾತ್ ಪಠಿಸಿದ ನಂತರ ಗಹಗಹಿಸಿ ನಕ್ಕರೆ ನಮಾಝ್ ಅಸಿಂಧುವಾಗುವುದಿಲ್ಲ.

◊

# ಮಸೀದಿಯ ವಿಧಿಗಳು

**1. ಮುಸ್ಲಿಮ್ ಸಮಾಜದ ವೈಶಿಷ್ಟ್ಯ:**

"ನನ್ನ ಪಾಲಿಗೆ ಇಡೀ ಭೂಮಿಯನ್ನು ಪವಿತ್ರವೂ ಮಸೀದಿಯೂ ಆಗಿ ಮಾಡಲಾಗಿದೆ. ಆದ್ದರಿಂದ ಒಬ್ಬ ವ್ಯಕ್ತಿಗೆ ಎಲ್ಲಿ ನಮಾಝ್‌ನ ವೇಳೆಯಾಗುತ್ತದೋ ಆತನು ಅಲ್ಲೇ ನಮಾಝ್ ಮಾಡಲಿ." (ವರದಿ: ಹ. ಜಾಬಿರ್(ರ)- ಬುಖಾರಿ, ಮುಸ್ಲಿಮ್)

"ನಾನು ಪ್ರವಾದಿವರ್ಯರಲ್ಲಿ(ಸ) ಹೀಗೆ ಪ್ರಶ್ನಿಸಿದೆ: ಪ್ರವಾದಿವರ್ಯರೇ! ಭೂಮಿಯ ಮೇಲೆ ಮೊಟ್ಟ ಮೊದಲು ಯಾವ ಮಸೀದಿಯನ್ನು ನಿರ್ಮಿಸಲಾಯಿತು? ಪ್ರವಾದಿ(ಸ) ಹೇಳಿದರು: 'ಮಸ್ಜಿದುಲ್ ಹರಾಮ್.' ಆ ಬಳಿಕ? ಪ್ರವಾದಿ(ಸ) ಹೇಳಿದರು: 'ಮಸ್ಜಿದುಲ್ ಅಕ್ಸಾ.' ಈ ಎರಡು ಮಸೀದಿಗಳ ನಿರ್ಮಾಣದ ಮಧ್ಯೆ ಎಷ್ಟು ಕಾಲವಿತ್ತು? ಪ್ರವಾದಿ(ಸ) ಹೇಳಿದರು: 'ನಲ್ವತ್ತು ವರ್ಷಗಳು.' ಆ ಬಳಿಕ ಅವರು- ಎಲ್ಲಿ ನಮಾಝ್‌ನ ವೇಳೆಯಾಗುತ್ತದೋ ಅಲ್ಲೇ ನಮಾಝ್ ನಿರ್ವಹಿಸಿರಿ. ಅದುವೇ ಮಸೀದಿಯಾಗಿದೆ." (ವರದಿ: ಹ. ಅಬೂದರ್ರ್(ರ)- ಬುಖಾರಿ, ಮುಸ್ಲಿಮ್)

**2. ಮಸೀದಿ ನಿರ್ಮಾಣದ ಮಹತ್ವ:**

"ಯಾವ ವ್ಯಕ್ತಿಯು ಅಲ್ಲಾಹನ ಮೆಚ್ಚುಗೆಯನ್ನು ಬಯಸುತ್ತಾ ಮಸೀದಿಯನ್ನು ನಿರ್ಮಿಸುತ್ತಾನೋ ಅಲ್ಲಾಹನು ಅವನಿಗಾಗಿ ಸ್ವರ್ಗದಲ್ಲಿ ಒಂದು ಮನೆಯನ್ನು ನಿರ್ಮಿಸುತ್ತಾನೆ."

(ವರದಿ: ಹ. ಉಸ್ಮಾನ್(ರ)- ಬುಖಾರಿ, ಮುಸ್ಲಿಮ್)

**3. ಮಸೀದಿಯ ಕಡೆಗೆ ಹೋಗುವುದರ ಮತ್ತು ಅಲ್ಲಿ ಕುಳಿತಿರುವುದರ ಮಹತ್ವ:**

"ವ್ಯಕ್ತಿಯೊಬ್ಬನು ಮಸೀದಿಯ ಕಡೆಗೆ ಹೋಗುವಾಗ ಮತ್ತು ಬರುವಾಗ ಅಲ್ಲಾಹನು ಅವನ ಆತಿಥ್ಯಕ್ಕಾಗಿ ಒಂದು ತೋಟವನ್ನು ನಿರ್ಮಿಸುವನು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್)

"ನೀವು ಒಬ್ಬ ವ್ಯಕ್ತಿಯನ್ನು ಆಗಾಗ ಮಸೀದಿಗೆ ಹೋಗಿ ಬರುತ್ತಿರುವುದನ್ನು ಕಂಡರೆ ಅವನ ಸತ್ಯವಿಶ್ವಾಸದ ಕುರಿತು ಸಾಕ್ಷ್ಯ ಹೇಳಿರಿ. ಏಕೆಂದರೆ 'ಅಲ್ಲಾಹನ ಮಸೀದಿಗಳನ್ನು ಅಲ್ಲಾಹನ ಮೇಲೆ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿಡುವವರೇ ನೆಲೆಗೊಳಿಸುತ್ತಾರೆ' ಎಂದು ಅಲ್ಲಾಹನು ಹೇಳಿರುವನು."

(ವರದಿ: ಹ. ಅಬೂ ಸಈದ್(ರ)- ಅಹ್ಮದ್, ಇಬ್ನು ಮಾಜಃ, ಇಬ್ನು ಖುಝೈಮ, ತಿರ್ಮಿದಿ)

"ಒಬ್ಬ ವ್ಯಕ್ತಿಯು ತನ್ನ ಮನೆಯಲ್ಲಿ ಶುದ್ಧವಾಗಿ (ಅಂದರೆ ವುಝೂ ಮಾಡಿ) ಅಲ್ಲಾಹನ ಕರ್ತವ್ಯಗಳ ಪೈಕಿ ಯಾವುದನ್ನಾದರೂ (ನಮಾಝ್) ನಿರ್ವಹಿಸಲಿಕ್ಕಾಗಿ ಅವನ ಯಾವುದಾದರೂ ಭವನದ ಕಡೆಗೆ ನಡೆದರೆ ಅವನ ಹೆಜ್ಜೆಗಳ ಪೈಕಿ ಒಂದು ಹೆಜ್ಜೆಯು ಅವನ ಪಾಪವನ್ನು ಉದುರಿಸುತ್ತದೆ, ಮತ್ತೊಂದು ಅವನ ಸ್ಥಾನವನ್ನು ಉನ್ನತಗೊಳಿಸುತ್ತದೆ."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್)

**4. ಮಸೀದಿಗೆ ಪ್ರವೇಶಿಸುವಾಗ ಮತ್ತು ಮಸೀದಿಯಿಂದ ಹೊರಡುವಾಗಿನ ದುಆ:**

ನಿಮ್ಮ ಪೈಕಿ ಯಾರಾದರೂ ಮಸೀದಿಗೆ ಪ್ರವೇಶಿಸುವಾಗ ಈ ದುಆ ಪಠಿಸಲಿ:

اَللّٰهُمَّ افْتَحْ لِي اَبْوَابَ رَحْمَتِكَ

"ಅಲ್ಲಾಹುಮ್ಮಫ್ತಹ್‌ಲೀ ಅಬ್‌ವಾಬ ರಹ್ಮತಿಕ."

ಅರ್ಥ: ಓ ಅಲ್ಲಾಹ್! ನನಗಾಗಿ ನಿನ್ನ ಕರುಣೆಯ ಬಾಗಿಲುಗಳನ್ನು ತೆರೆ.

[ವರದಿ: ಹ. ಅಬೂ ಹುಮೈದ್(ರ) ಮತ್ತು ಹ. ಅಬೂ ಉಸೈದ್(ರ)]

ಮಸೀದಿಯಿಂದ ಹೊರಡುವಾಗ ಈ ದುಆ ಪಠಿಸಬೇಕು:

اَللّٰهُمَّ اِنِّي اَسْئَلُكَ مِنْ فَضْلِكَ

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನ್ ಫದ್‌ಲಿಕ."

ಅರ್ಥ: ಓ ಅಲ್ಲಾಹ್! ನನಗಾಗಿ ನಿನ್ನ ಅನುಗ್ರಹದ ಬಾಗಿಲುಗಳನ್ನು ತೆರೆ.

ಮಸೀದಿಗೆ ಪ್ರವೇಶಿಸುವಾಗ ಮೊದಲು ಬಲಕಾಲನ್ನು ಮತ್ತು ಮಸೀದಿಯಿಂದ ಹೊರಡುವಾಗ ಮೊದಲು ಎಡಕಾಲನ್ನು ಇಡಬೇಕು.

**5. ಮಸೀದಿಗೆ ಪ್ರವೇಶಿಸಿದಾಗ ಎರಡು ರಕಅತ್ ನಮಾಝ್ ಮಾಡುವುದು:**

"ನಿಮ್ಮ ಪೈಕಿ ಯಾರಾದರೂ ಮಸೀದಿಗೆ ಬಂದಾಗ ಕುಳಿತುಕೊಳ್ಳುವುದಕ್ಕಿಂತ ಮುಂಚೆ ಎರಡು ರಕಅತ್ ನಮಾಝ್ ಮಾಡಲಿ."

(ವರದಿ: ಹ. ಅಬೂ ಕತಾದಃ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

**6. ಮಸೀದಿಯನ್ನು ಸರಳವಾಗಿರಿಸುವುದು:**

"ನನಗೆ ಮಸೀದಿಗಳನ್ನು (ಅಗತ್ಯಕ್ಕಿಂತ ಹೆಚ್ಚು) ಬಲಿಷ್ಠಗೊಳಿಸಲು ಆಜ್ಞಾಪಿಸಲಾಗಿಲ್ಲ."

(ವರದಿ: ಹ. ಇಬ್ನು ಅಬ್ಬಾಸ್(ರ)- ಅಬೂ ದಾವೂದ್, ಇಬ್ನು ಹಿಬ್ಬಾನ್)

**7. ಮಸೀದಿಯನ್ನು ಶುದ್ಧವಾಗಿಡುವುದು:**

"ಪ್ರವಾದಿ(ಸ) ಊರುಗಳಲ್ಲಿ ಮಸೀದಿಗಳನ್ನು ನಿರ್ಮಿಸುವ, ಅವುಗಳನ್ನು ಶುದ್ಧವಾಗಿಡುವ ಮತ್ತು ಅವುಗಳಲ್ಲಿ ಸುಗಂಧ ಹಚ್ಚುವ ಆಜ್ಞೆ ನೀಡಿದರು."

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ಇಬ್ನು ಹಿಬ್ಬಾನ್)

**8. ಮಸೀದಿಯಲ್ಲಿ ನಿಷಿದ್ಧವಾದ ಕಾರ್ಯಗಳು:**

**i) ಹೊಲಸು ಮತ್ತು ದುರ್ವಾಸನೆ ಹರಡುವುದು**

ಪ್ರವಾದಿ(ಸ) ಹೇಳಿದರು: "ಈ ಮಸೀದಿಗಳಲ್ಲಿ ವಿಸರ್ಜಿಸುವುದು ಮತ್ತು ಹೊಲಸು ಹರಡುವುದು ಸರಿಯಲ್ಲ. ಇದು ಕೇವಲ ಅಲ್ಲಾಹನ ಸ್ಮರಣೆ ಮಾಡಲು ಮತ್ತು ಕುರ್‌ಆನ್ ಪಠಿಸಲು ಇರುವಂತಹದಾಗಿದೆ." (ವರದಿ: ಹ. ಅಬೂ ಹುರ್ರೈರಾ(ರ)- ಮುಸ್ಲಿಮ್)

"ಈರುಳ್ಳಿ, ಬೆಳ್ಳುಳ್ಳಿ ಅಥವಾ ಕುರ್ರಾಸ್* ತಿಂದವನು ನಮ್ಮ ಮಸೀದಿಯ ಹತ್ತಿರವೂ ಸುಳಿಯದಿರಲಿ. ಏಕೆಂದರೆ ಯಾವ ವಸ್ತುಗಳಿಂದ ಮನುಷ್ಯನಿಗೆ ತೊಂದರೆಯಾಗುತ್ತದೋ ಅದರಿಂದ ದೇವಚರರಿಗೂ ತೊಂದರೆಯಾಗುತ್ತದೆ."

(ವರದಿ: ಹ. ಜಾಬಿರ್(ರ)- ಬುಖಾರಿ, ಮುಸ್ಲಿಮ್)

**ii) ಕಾಣೆಯಾದ ವಸ್ತುವನ್ನು ಹುಡುಕುವುದು**

ಪ್ರವಾದಿ(ಸ) ಈ ರೀತಿ ಹೇಳಿರುವರು-

"ನಿಮ್ಮ ಪೈಕಿ ಯಾರಾದರೂ ಮಸೀದಿಯಲ್ಲಿ ಯಾವುದಾದರೂ ಕಾಣೆಯಾದ ವಸ್ತುವನ್ನು ಹುಡುಕುತ್ತಿರುವುದನ್ನು ಕಂಡರೆ 'ಅಲ್ಲಾಹನು ನಿನ್ನ ವಸ್ತು ಸಿಗದಂತೆ ಮಾಡಲಿ' ಎಂದು ಹೇಳಲಿ. ಏಕೆಂದರೆ ಮಸೀದಿಯು ಈ ಕೆಲಸಕ್ಕಿರುವುದಲ್ಲ." (ವರದಿ: ಹ. ಅಬೂ ಹುರ್ರೈರಾ(ರ)- ಮುಸ್ಲಿಮ್)

**iii) ವ್ಯಾಪಾರ ಮಾಡುವುದು**

"ನೀವು ಮಸೀದಿಯಲ್ಲಿ ಮಾರಾಟ ಮಾಡುತ್ತಿರುವುದಾಗಿ ಅಥವಾ ಖರೀದಿಸುತ್ತಿರುವುದಾಗಿ ಯಾರನ್ನಾದರೂ ಕಂಡರೆ ಅಲ್ಲಾಹನು ನಿನಗೆ ವ್ಯಾಪಾರದಲ್ಲಿ ಸಮೃದ್ಧಿ ನೀಡದಿರಲಿ ಎಂದು ಹೇಳಿರಿ." (ವರದಿ: ಹ. ಅಬೂ ಹುರ್ರೈರಾ(ರ)- ತಿರ್ಮಿದಿ, ನಸಾಈ)

**iv) ವ್ಯರ್ಥ ಕವನಗಳನ್ನು ಹೇಳುವುದು**

"ಮಸೀದಿಯಲ್ಲಿ ವ್ಯಾಪಾರ ಮಾಡುವುದು, ಪದ್ಯ ಹಾಡುವುದು, ಕಾಣೆಯಾದ ವಸ್ತುಗಳನ್ನು ಹುಡುಕುವುದು ಮತ್ತು ಜುಮಾ ದಿವಸ ನಮಾಝ್‌ಗಿಂತ ಮೊದಲು ಗುಂಪಾಗಿ ಕುಳಿತುಕೊಳ್ಳುವುದರಿಂದ ಪ್ರವಾದಿ(ಸ) ತಡೆದಿರುವರು."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಅಬೂ ದಾವೂದ್, ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಈ ಹದೀಸ್‌ನಲ್ಲಿ ಪದ್ಯವೆಂದಿರುವುದು ಕೇವಲ ಅಸಭ್ಯ ಮತ್ತು ನಿರರ್ಥಕ ಕವನಗಳನ್ನು. ಏಕೆಂದರೆ ಇಸ್ಲಾಮಿನ ಗುಣಗಾನ ಮಾಡುವ ಅಥವಾ ಜನರಿಗೆ ಸತ್ಕಾರ್ಯಗಳ ಪ್ರೇರಣೆ ನೀಡುವ ಕವನಗಳನ್ನು ಮಸೀದಿಯಲ್ಲಿ ಹಾಡುವುದು ಧರ್ಮಸಮ್ಮತವಾಗಿದೆ.

**v) ಜನರು ನಮಾಝ್ ಮಾಡುತ್ತಿರುವಾಗ ಉಚ್ಚ ಸ್ವರದಲ್ಲಿ ಮಾತಾಡುವುದು ಅಥವಾ ಕುರ್‌ಆನ್ ಪಠಿಸುವುದು**

---

* ಈರುಳ್ಳಿ ಮತ್ತು ಬೆಳ್ಳುಳ್ಳಿಯಂತಹ ಒಂದು ದುರ್ವಾಸನೆಯ ತರಕಾರಿ.

"ಒಮ್ಮೆ ಪ್ರವಾದಿ(ಸ) ಮಸೀದಿಗೆ ಬಂದರು. ಜನರು ಉಚ್ಚಸ್ವರದಲ್ಲಿ ನಮಾಝ್ ಮಾಡುತ್ತಿದ್ದರು. ನಮಾಝ್ ಮಾಡುವವನು ತನ್ನ ಪ್ರಭುವಿನೊಡನೆ ರಹಸ್ಯ ಮಾತುಕತೆ ನಡೆಸುತ್ತಾನೆ. ಆದ್ದರಿಂದ ಅವನು ತನ್ನ ಪ್ರಭುವಿನೊಡನೆ ಏನು ರಹಸ್ಯ ಮಾತುಕತೆ ನಡೆಸುತ್ತಿರುವ ನೆಂಬುದನ್ನು ನೋಡಿಕೊಳ್ಳಲಿ. ಇತರರಿಗೆ ತೊಂದರೆಯಾಗುವ ರೀತಿಯಲ್ಲಿ ನಿಮ್ಮ ಪೈಕಿ ಯಾರೂ ಕುರ್‌ಆನ್ ಪಠಿಸಬಾರದು." (ವರದಿ: ಹ. ಇಬ್ನು ಉಮರ್(ರ)- ಮುಸ್ನದ್ ಅಹ್ಮದ್)

**vi) ಶಿಕ್ಷೆ ಜಾರಿಗೊಳಿಸುವುದು**

"ಮಸೀದಿಯಲ್ಲಿ ಶಿಕ್ಷೆ ಜಾರಿಗೊಳಿಸಲಾಗದು. ಯಾವನೇ ಕೊಲೆಗಾರನಿಗೆ ಮರಣದಂಡನೆ ನೀಡುವಂತೆ ಅಮೀರ್‌ರಿಗೆ ಆಜ್ಞಾಪಿಸಲಾಗದು."

(ವರದಿ: ಹ. ಹಕೀಮ್ ಬಿನ್ ಹಿಝಾಮ್(ರ)- ಅಬೂ ದಾವೂದ್, ದಾರಕುತ್ನಿ)

**9. ಮಸೀದಿಯಲ್ಲಿ ಮಾಡಬಹುದಾದ ಕಾರ್ಯಗಳು:**

**i) ಲೌಕಿಕ ವಿಷಯಗಳಿಗೆ ಸಂಬಂಧ ಪಟ್ಟ ಧರ್ಮಸಮ್ಮತ ಮಾತುಕತೆ**

"ಫಜ್ರ್ ನಮಾಝ್ ಮಾಡಿದ ನಂತರ ಪ್ರವಾದಿವರ್ಯರು(ಸ) ಸೂರ್ಯೋದಯದ-ತನಕ ತಮ್ಮ ಸ್ಥಾನದಿಂದ ಏಳುತ್ತಿರಲಿಲ್ಲ. ಸೂರ್ಯೋದಯದ ಬಳಿಕ ಅವರು ಏಳುತ್ತಿದ್ದರು. ಈ ಮಧ್ಯೆ ಜನರು ಅವರಲ್ಲಿ ಅಜ್ಞಾನ ಕಾಲದ ವಿಷಯಗಳನ್ನು ಹೇಳುತ್ತಿದ್ದರು, ನಗುತ್ತಿದ್ದರು. ಪ್ರವಾದಿವರ್ಯರು(ಸ) ಕೂಡಾ ಮುಗುಳ್ನಗುತ್ತಿದ್ದರು." (ವರದಿ: ಹ. ಜಾಬಿರ್(ರ)- ಮುಸ್ಲಿಮ್)

**ii) ತಿನ್ನುವುದು ಕುಡಿಯುವುದು**

"ಪ್ರವಾದಿವರ್ಯರ(ಸ) ಕಾಲದಲ್ಲಿ ಮಸೀದಿಯೊಳಗೆ ರೊಟ್ಟಿ ಮತ್ತು ಮಾಂಸ ತಿನ್ನಲಾಗುತ್ತಿತ್ತು." (ವರದಿ: ಹ. ಅಬ್ದುಲ್ಲಾ ಬಿನ್ ಹಾರಿಸ್(ರ)- ಇಬ್ನು ಮಾಜಃ)

**iii) ನಿದ್ರಿಸುವುದು**

"ನನ್ನ ಪಿತೃ ಸೋದರರು ವರದಿ ಮಾಡಿರುತ್ತಾರೆ. ಅವರು ಪ್ರವಾದಿ(ಸ) ಅವರನ್ನು ಮಸೀದಿಯಲ್ಲಿ ಒಂದು ಕಾಲನ್ನು ಇನ್ನೊಂದರ ಮೇಲಿಟ್ಟು ಮಲಗಿದ್ದನ್ನು ಕಂಡರು."

(ವರದಿ: ಹ. ಉಬಾದಃ ಬಿನ್ ತಮೀಮ್(ರ)- ಬುಖಾರಿ, ಮುಸ್ಲಿಮ್)

ಹನಫೀ ಕರ್ಮಶಾಸ್ತ್ರ ಪ್ರಕಾರ ಮಸೀದಿಯಲ್ಲಿ ನಿದ್ರಿಸುವುದು ಪ್ರಯಾಣಿಕ ಮತ್ತು ಇಅ್‌ತಿಕಾಫ್‌ನಲ್ಲಿರುವವರಿಗೆ ಮಾತ್ರ ಧರ್ಮಸಮ್ಮತವಾಗಿದೆ. ಉಳಿದವರ ಪಾಲಿಗೆ ಅದು ಮಕ್ರೂಹ್(ಅನಪೇಕ್ಷಿತ) ಆಗಿದೆ.

**iv) ಮಸೀದಿಯಲ್ಲಿ ಅಗತ್ಯದ ವೇಳೆ ಯಾಚಿಸುವುದು**

"ಒಮ್ಮೆ ಪ್ರವಾದಿ(ಸ) ಸಂಗಾತಿಗಳೊಂದಿಗೆ ಕೇಳಿದರು- ನಿಮ್ಮ ಪೈಕಿ ಯಾರಾದರೂ ಇಂದು ದರಿದ್ರರಿಗೆ ಉಣಿಸಿರುವರೇ? ಆಗ ಹ. ಅಬೂಬಕರ್(ರ) ಹೇಳಿದರು- ನಾನು ಮಸೀದಿಯಲ್ಲಿ ಪ್ರವೇಶಿಸುವಾಗ ಓರ್ವ ಯಾಚಿಸುವುದನ್ನು ಕಂಡೆ. ನಾನು (ನನ್ನ ಮಗನಾದ) ಅಬ್ದುರ್ರಹ್ಮಾನ್‌ನ ಕೈಯಲ್ಲಿ ಒಂದು ರೊಟ್ಟಿಯ ತುಂಡನ್ನು ಕಂಡೆ. ಅದನ್ನು ನಾನು ಆ ಯಾಚಕನಿಗೆ ನೀಡಿದೆ." (ವರದಿ: ಹ. ಅಬ್ದುರ್ರಹ್ಮಾನ್ ಬಿನ್ ಅಬೂಬಕರ್(ರ)- ಅಬೂ ದಾವೂದ್)

# ನಮಾಝ್ ಮಾಡಬಾರದ ಸ್ಥಳಗಳು

**1. ಕಬರಸ್ಥಾನ:**

ಪ್ರವಾದಿ(ಸ) ಹೇಳಿದರು: "ಅಲ್ಲಾಹನು ಯಹೂದಿ ಮತ್ತು ಕ್ರೈಸ್ತರನ್ನು ಶಪಿಸಲಿ. ಅವರು ತಮ್ಮ ಪ್ರವಾದಿಗಳ ಕಬರಸ್ಥಾನವನ್ನು ಮಸೀದಿ ಮಾಡಿಕೊಂಡರು."

**(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್ ನಸಾಈ)**

ಹನಫೀ ಕರ್ಮಶಾಸ್ತ್ರದ ಪ್ರಕಾರ ಗೋರಿಯು ಮುಂದೆ ಮತ್ತು ಹತ್ತಿರ ಇದ್ದರೆ ಕಬರಸ್ಥಾನದಲ್ಲಿ ನಮಾಝ್ ಮಾಡುವುದು ಮಕ್ರೂಹ್ ಆಗಿದೆ. ಕಬರಸ್ಥಾನದಲ್ಲಿ ನಮಾಝ್‌ಗಾಗಿ ಯಾವುದಾದರೂ ಶುದ್ಧ ಸ್ಥಳವನ್ನು ಪ್ರತ್ಯೇಕಿಸಿದ್ದರೆ ಅಲ್ಲಿ ನಮಾಝ್ ಮಾಡಬಹುದಾಗಿದೆ.

ಶಾಫಿಈ ಕರ್ಮಶಾಸ್ತ್ರದಂತೆ ಕಬರಸ್ಥಾನದಲ್ಲಿ ನಮಾಝ್ ಮಕ್ರೂಹ್ ಆಗಿದೆ. ಅದು ಶುದ್ಧವಾಗಿದ್ದರೂ ಸರಿಯೇ. ಒಂದು ವೇಳೆ ಅದು ಶುದ್ಧವಲ್ಲದಿದ್ದರೆ ಅಲ್ಲಿ ನಮಾಝ್ ಮಾಡುವುದು ಸಿಂಧುವಲ್ಲ.

**2. ಪ್ರವಾದಿ(ಸ) ಏಳು ಕಡೆಗಳಲ್ಲಿ ನಮಾಝ್ ಮಾಡುವುದರಿಂದ ತಡೆದಿರುವರು:**

1) ಪ್ರಾಣಿಗಳು ಮಲ ವಿಸರ್ಜನೆ ಮಾಡುವ ಸ್ಥಳ.
2) ಪ್ರಾಣಿಗಳನ್ನು ದಿಬಹ್ ಮಾಡುವ ಸ್ಥಳ.
3) ನಡೆದಾಡುವ ಮಾರ್ಗ.
4) ಒಂಟೆಗಳನ್ನು ಕಟ್ಟುವ ಸ್ಥಳ.
5) ಸ್ನಾನಗೃಹ.
6) ಕಬರಸ್ಥಾನ ಮತ್ತು
7) ಕಅಬಾ ಭವನದ ಮಾಡು.

**(ವರದಿ: ಹ. ಇಬ್ನ್ ಉಮರ್(ರ)- ಇಬ್ನು ಮಾಜಃ, ಅಬ್ದ್ ಬಿನ್ ಹುಮೈದ್, ತಿರ್ಮಿದಿ)**

ಇಗರ್ಜಿ ಅಥವಾ ಮಂದಿರಗಳಲ್ಲಿ ಮೂರ್ತಿಗಳು ಅಥವಾ ಚಿತ್ರಗಳಿದ್ದರೆ ಅಲ್ಲಿ ನಮಾಝ್ ಮಾಡಬಾರದು. ಇಮಾಮ್ ಶಾಫಿಈಯವರ(ರ) ಪ್ರಕಾರ ಇಗರ್ಜಿ ಅಥವಾ ಮಂದಿರಗಳಲ್ಲಿ ಚಿತ್ರಗಳಿಲ್ಲದಿದ್ದರೂ ನಮಾಝ್ ಮಾಡುವುದು ಮಕ್ರೂಹ್ ಆಗಿದೆ.

◊

# ಸುತ್ರಃ

ಸುತ್ರಃ ಅಂದರೆ ಪರದೆ ಅಥವಾ ಅಡ್ಡ. ಧರ್ಮಶಾಸ್ತ್ರದ ಪರಿಭಾಷೆಯಲ್ಲಿ ವ್ಯಕ್ತಿಯೊಬ್ಬನು ನಮಾಝ್ ಮಾಡುವಾಗ ತನ್ನ ಮುಂದಿನಿಂದ ಯಾರೂ ಹಾದು ಹೋಗದಂತೆ ಇಡುವ ವಸ್ತುವಿಗೆ 'ಸುತ್ರಃ' ಎನ್ನುತ್ತಾರೆ.

**1. ನಮಾಝ್ ಮಾಡುವಾಗ ತನ್ನ ಮುಂದೆ ಸುತ್ರಃ ಮಾಡಿಕೊಳ್ಳುವುದು ಒಳ್ಳೆಯದು**

"ಪ್ರವಾದಿ(ಸ) ಈ ರೀತಿ ಹೇಳಿರುವರು: ನಿಮ್ಮ ಪೈಕಿ ಯಾರಾದರೂ ನಮಾಝ್ ಮಾಡುವಾಗ ಸುತ್ರಃದ ಕಡೆಗೆ ನಮಾಝ್ ಮಾಡಲಿ ಮತ್ತು ಅದಕ್ಕೆ ಸಮೀಪವಾಗಿರಲಿ."

**(ವರದಿ: ಹ. ಅಬೂ ಸಈದ್(ರ)- ಅಬೂ ದಾವೂದ್, ಇಬ್ನು ಮಾಜಃ)**

"ಪ್ರವಾದಿ(ಸ) ಈದ್‌ನ ದಿವಸ ಹೊರಡುವಾಗ ಒಂದು ಭರ್ಜಿಯನ್ನು ಜೊತೆಗೆ ಒಯ್ಯಲು ಆಜ್ಞಾಪಿಸುತ್ತಿದ್ದರು. ಅದನ್ನು ಪ್ರವಾದಿವರ್ಯರ(ಸ) ಮುಂದೆ ನಾಟಿ ಇಡಲಾಗುತ್ತಿತ್ತು. ಪ್ರವಾದಿ(ಸ) ಅದರ ಕಡೆಗೆ ನಮಾಝ್ ಮಾಡುತ್ತಿದ್ದರು. ಜನರು ಪ್ರವಾದಿವರ್ಯರ(ಸ) ಹಿಂದೆ ಇರುತ್ತಿದ್ದರು. ಪ್ರವಾದಿ(ಸ) ಪ್ರಯಾಣದ ವೇಳೆಯೂ ಹೀಗೆಯೇ ಮಾಡುತ್ತಿದ್ದರು."

**(ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಮುಸ್ಲಿಮ್)**

ಆದರೆ ಕೆಲವು ವೇಳೆ ಪ್ರವಾದಿ(ಸ) 'ಸುತ್ರಃ' ಇಲ್ಲದೆಯೇ ನಮಾಝ್ ಮಾಡುತ್ತಿದ್ದರು.

"ಪ್ರವಾದಿ(ಸ) ಮುಕ್ತ ವಾತಾವರಣದಲ್ಲಿ ನಮಾಝ್ ಮಾಡಿದರು. ಅವರ ಮುಂದೆ ಯಾವುದೇ ವಸ್ತು ಇರಲಿಲ್ಲ."

**(ವರದಿ: ಹ. ಇಬ್ನು ಅಬ್ಬಾಸ್(ರ)- ಅಹ್ಮದ್, ಅಬೂ ದಾವೂದ್, ಬೈಹಕಿ)**

**2. ಸುತ್ರಃ ಯಾವ ವಸ್ತುವಿನಿಂದ ಆಗುತ್ತದೆ**

ನಮಾಝ್ ಮಾಡುವಾತನು ತನ್ನ ಮುಂದೆ ಯಾವುದಾದರೂ ವಸ್ತುವನ್ನು ನಾಟಿ ಇಡುವುದು ಅಥವಾ ಹಾಗೆಯೇ ಇಟ್ಟು ಬಿಡುವುದರಿಂದ ಸುತ್ರಃದ ಉದ್ದೇಶ ಪೂರ್ತಿಯಾಗುತ್ತದೆ. ಯಾವುದೇ ವಸ್ತು ದೊರೆಯದಿದ್ದರೆ ನೆಲದ ಮೇಲೆ ಒಂದು ಗೆರೆ ಎಳೆದರೂ ಸಾಕು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ನಮಾಝ್ ಮಾಡುವಾಗ ತನ್ನ ಮುಂದೆ ಯಾವುದಾದರೂ ವಸ್ತುವನ್ನು ಇರಿಸಿಕೊಳ್ಳಲಿ. ಏನೂ ಸಿಗದಿದ್ದರೆ ಒಂದು ಬೆತ್ತವನ್ನು ನಾಟಿ ಬಿಡಲಿ. ಅವನ

ಬಳಿ ಬೆತ್ತವೂ ಇಲ್ಲದಿದ್ದರೆ ಒಂದು ಗೆರೆ ಎಳೆದುಕೊಳ್ಳಲಿ. ಆ ಬಳಿಕ ಅದರ ಮುಂದಿನಿಂದ ಏನಾದರೂ ಹಾದು ಹೋದರೆ ಆಕ್ಷೇಪವಿಲ್ಲ."

(ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಅಬೂ ದಾವೂದ್, ಇಬ್ನು ಮಾಜಃ)

## 3. ಸುತ್ರಃ ಹತ್ತಿರವಾಗಿದ್ದು ಎಡ ಅಥವಾ ಬಲಬದಿಗೆ ಇರುವುದು

ನಮಾಝ್ ಮಾಡುವವನ ಮತ್ತು ಸುತ್ರಃದ ಅಂತರವು ಕೇವಲ ಸುಜೂದ್ ಮಾಡುವಷ್ಟಿರಬೇಕು.

"ಪ್ರವಾದಿ(ಸ) ನಮಾಝ್ ಮಾಡಿದಾಗ ಅವರ ಮತ್ತು ಗೋಡೆಯ ಮಧ್ಯೆ ಸುಮಾರು ಮೂರು ಮೊಳದ ಅಂತರವಿತ್ತು." (ವರದಿ: ಹ. ಬಿಲಾಲ್(ರ)- ಬುಖಾರಿ, ಅಹ್ಮದ್, ನಸಾಈ)

"ಪ್ರವಾದಿ(ಸ) ಯಾವುದಾದರೂ ಗೆಲ್ಲು, ಕಂಬ ಅಥವಾ ಮರದ ಕಡೆಗೆ ನಮಾಝ್ ಮಾಡುವಾಗ ಅದನ್ನು ತಮಗೆ ನೇರವಾಗಿ ಇರಿಸದೆ ಸ್ವಲ್ಪ ಎಡ ಅಥವಾ ಬಲಬದಿಯಲ್ಲಿ ಇರಿಸುತ್ತಿದ್ದರು." (ವರದಿ: ಹ. ಮಿಖ್‌ದಾದ್ ಬಿನ್ ಅಸ್ವದ್(ರ)- ಅಹ್ಮದ್, ಅಬೂ ದಾವೂದ್)

## 4. ಇಮಾಮ್‌ನ ಸುತ್ರಃ ಎಲ್ಲ ನಮಾಝಿಗಳಿಗೆ ಸಾಕಾಗುತ್ತದೆ

"ನಾನು ಒಂದು ಕತ್ತೆಯ ಮೇಲೆ ಸವಾರಿ ಮಾಡಿಕೊಂಡು ಬಂದೆ. ನಾನಾಗ ಪ್ರೌಢಾವಸ್ಥೆಗೆ ಸಮೀಪವಿದ್ದೆ. ಪ್ರವಾದಿ(ಸ) ಮಿನಾದಲ್ಲಿ ನಮಾಝ್ ಮಾಡಿಸುತ್ತಿದ್ದರು. ನಾನು ಪಂಕ್ತಿಯ ಒಂದು ಭಾಗದ ಮುಂದಿನಿಂದ ಹಾದು ಹೋದೆ. ತರುವಾಯ ಕತ್ತೆಯನ್ನು ಮೇಯಲು ಬಿಟ್ಟು ಪಂಕ್ತಿಯಲ್ಲಿ ಶಾಮೀಲಾದೆ. ಇದನ್ನು ಯಾರೂ ಆಕ್ಷೇಪಿಸಲಿಲ್ಲ."

(ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

## 5. ನಮಾಝಿಯ ಮುಂದಿನಿಂದ ಹಾದು ಹೋಗಬಾರದು

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಮಾಝ್ ಮಾಡುವವನ ಮುಂದಿನಿಂದ ಹಾದು ಹೋಗುವ ಒಬ್ಬ ವ್ಯಕ್ತಿಗೆ ಅದು ಎಷ್ಟು ದೊಡ್ಡ ಅಪರಾಧ ಎಂದು ತಿಳಿದಿದ್ದರೆ ಅವನು ಹಾಗೆ ಹಾದು ಹೋಗುವುದಕ್ಕಿಂತ 40 ವರ್ಷ, 40 ತಿಂಗಳು ಅಥವಾ 40 ದಿನಗಳಷ್ಟು (ನಂತರದ ವರದಿಗಾರರಿಗೆ ಈ ಬಗ್ಗೆ ಸಂಶಯವಿದೆ) ಕಾಯುವುದನ್ನು ಉತ್ತಮವೆಂದು ಭಾವಿಸುತ್ತಿದ್ದನು."

(ವರದಿ: ಹ. ಅಬೂ ಜುಹೈಮ್ ಅಬ್ದುಲ್ಲಾ ಬಿನ್ ಹಾರಿಸ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಆದರೆ ಮಕ್ಕಾದ ಮಸ್ಜಿದುಲ್ ಹರಾಮ್‌ನಲ್ಲಿ ನಮಾಝ್ ಮಾಡುವವರ ಮುಂದೆ ಹಾದು ಹೋಗುವುದು ಆಕ್ಷೇಪಾರ್ಹವಲ್ಲ.

"ನಾನು ಬನೂ ಸುಹೈಮ್ ಬಾಗಿಲಿನ ಬಳಿ ಪ್ರವಾದಿ(ಸ) ನಮಾಝ್ ಮಾಡುತ್ತಿರುವುದನ್ನು ಕಂಡೆ. ಜನರು ಅವರ ಮುಂದಿನಿಂದ ಹಾದು ಹೋಗುತ್ತಿದ್ದರು. ಪ್ರವಾದಿವರ್ಯರು(ಸ) ಮತ್ತು ಜನರ ಮಧ್ಯೆ ಯಾವುದೇ ಸುತ್ರಃ ಇರಲಿಲ್ಲ."

(ವರದಿ: ಹ. ಮುತ್ತಲಿಬ್ ಬಿನ್ ಅಬೀ ವಿದಾಅ(ರ)- ಅಹ್ಮದ್, ಅಬೂ ದಾವೂದ್)

ಈ ಹದೀಸ್‌ನ ಆಧಾರದಲ್ಲಿ ಇಮಾಮ್ ಶಾಫಿಈಯವರ(ರ) ಪ್ರಕಾರ ಸುತ್ರಃ ಮಾಡಿಕೊಂಡ ನಮಾಝಿಯ ಮುಂದಿನಿಂದ ಹಾದು ಹೋಗುವುದು ಮಾತ್ರ ನಿಷಿದ್ಧವಾಗಿದೆ. ಒಬ್ಬನು ಸುತ್ರಃ ಇಲ್ಲದೆ ನಮಾಝ್ ಮಾಡುತ್ತಿದ್ದರೆ ಅವನ ಮುಂದಿನಿಂದ ಹಾದು ಹೋಗುವುದು ಆಕ್ಷೇಪಾರ್ಹವಲ್ಲ.

ಈ ಹದೀಸ್‌ನಲ್ಲಿರುವ ಎಚ್ಚರಿಕೆಯು ಎಷ್ಟು ದೂರದ ತನಕ ಹಾದು ಹೋಗುವುದಕ್ಕೆ ಅನ್ವಯವಾಗುತ್ತದೆ ಎಂಬುದು ವ್ಯಕ್ತವಲ್ಲ.

ಆದ್ದರಿಂದ ಹನಫೀ ಕರ್ಮಶಾಸ್ತ್ರದ ಪ್ರಕಾರ ದೊಡ್ಡ ಮಸೀದಿ ಅಥವಾ ಮೈದಾನದಲ್ಲಿ ನಮಾಝ್ ಮಾಡುತ್ತಿದ್ದರೆ ಅವನ ಕಾಲು ಮತ್ತು ಸುಜೂದ್ ಮಾಡುವ ಸ್ಥಳದ ಮಧ್ಯೆ ಹಾದು ಹೋಗುವುದು ನಿಷಿದ್ಧವಾಗಿದೆ. ಸಣ್ಣ ಮಸೀದಿಯಾಗಿದ್ದರೆ ಈ ಅಂತರವು ಅವನ ಕಾಲಿನಿಂದ ಗೋಡೆಯ ತನಕ ಇರುವುದು. ಇದು ಸುಮಾರು 40 ಅಡಿಯಷ್ಟಿರಬಹುದು.

## 6. ನಮಾಝ್ ಮಾಡುವವನು, ಯಾರಾದರೂ ತನ್ನ ಮುಂದಿನಿಂದ ಹಾದು ಹೋಗುವುದನ್ನು ತಡೆಯುವುದು

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ತನ್ನ ಮುಂದೆ ಒಂದು ವಸ್ತುವನ್ನು ಸುತ್ರಃ ಮಾಡಿಕೊಂಡು ನಮಾಝ್ ಮಾಡುವಾಗ ಯಾರಾದರೂ ಅವನ ಮುಂದಿನಿಂದ ಹಾದು ಹೋಗಬಯಸಿದರೆ ಅವನನ್ನು ತಡೆಯಲಿ. ಅವನು ಒಪ್ಪದಿದ್ದರೆ ಬಲಪ್ರಯೋಗಿಸಿ (ಕೈ ಮುಂದೆ ಮಾಡಿ) ತಡೆಯಲಿ. ಏಕೆಂದರೆ ಅವನು ಶೈತಾನ್ ಆಗಿರುತ್ತಾನೆ."

(ವರದಿ: ಹ. ಅಬೂ ಸಈದ್(ರ)- ಬುಖಾರಿ, ಮುಸ್ಲಿಮ್)

ತನ್ನ ಮುಂದೆ ಸುತ್ರಃ ಇರಿಸಿ ನಮಾಝ್ ಮಾಡುವವನು ಮತ್ತು ಜನರ ಓಡಾಟದ ಸ್ಥಳದಿಂದ ಸುರಕ್ಷಿತವಾಗಿರುವವನು ತನ್ನ ಮುಂದೆ ಯಾರಾದರೂ ಹಾದು ಹೋಗದಂತೆ ತಡೆಯಬಹುದೆಂಬುದು ಕರ್ಮಶಾಸ್ತ್ರದ ಒಂದು ಸರ್ವಸಮ್ಮತ ನಿಯಮ.

◈

# ಸಾಮೂಹಿಕ ನಮಾಝ್

## 1. ಆಜ್ಞೆ ಮತ್ತು ಮಹತ್ವ

ಹೆಚ್ಚಿನ ಕರ್ಮಶಾಸ್ತ್ರಜ್ಞರ ಪ್ರಕಾರ ಕಡ್ಡಾಯ ನಮಾಝ್‌ಗಳನ್ನು ಜಮಾಅತ್ ಸಹಿತ (ಸಾಮೂಹಿಕವಾಗಿ) ನಿರ್ವಹಿಸುವುದು. ಪ್ರಬಲ ಸುನ್ನತ್ ಆಗಿದೆ. ಸಾಮೂಹಿಕ ನಮಾಝ್‌ನ ಮಹತ್ವ ಮತ್ತು ಅದರ ತಾಕೀತು ಅನೇಕ ಪ್ರವಾದಿ ವಚನಗಳಲ್ಲಿ ವರದಿಯಾಗಿದೆ. ಆ ಪೈಕಿ ಕೆಲವನ್ನು ನಾವಿಲ್ಲಿ ಕೊಡುತ್ತಿದ್ದೇವೆ:

ಪ್ರವಾದಿ(ಸ) ಹೀಗೆ ಹೇಳಿರುವರು:

"ವ್ಯಕ್ತಿಯೊಬ್ಬನು ಸಾಮೂಹಿಕವಾಗಿ ಮಾಡುವ ನಮಾಝ್‌ನ ಪುಣ್ಯವು ಅವನು ತನ್ನ ಮನೆಯಲ್ಲಿ ಅಥವಾ ಪೇಟೆಯಲ್ಲಿ ಮಾಡುವ ನಮಾಝ್‌ಗಿಂತ 25 ಪಟ್ಟು ಅಧಿಕವಿದೆ. ಏಕೆಂದರೆ ಆತ ಚೆನ್ನಾಗಿ ವುಝೂ ಮಾಡಿ ಮಸೀದಿಯ ಕಡೆಗೆ ಹೊರಡುವಾಗ ಮತ್ತು ನಮಾಝ್‌ನ ಹೊರತು ಅಲ್ಲಿ ಹೋಗುವ ಬೇರಾವ ಉದ್ದೇಶವೂ ಅವನ ಮುಂದಿರುವುದಿಲ್ಲ. ಅವನ ಪ್ರತಿಯೊಂದು ಹೆಜ್ಜೆಯು ಅವನ ಸ್ಥಾನವನ್ನು ಉನ್ನತಗೊಳಿಸುತ್ತದೆ ಮತ್ತು ಅವನ ಒಂದು ಪಾಪವು ಅಳಿದು ಹೋಗುತ್ತದೆ. ಅನಂತರ ಅವನು ವುಝೂ ಉಳ್ಳವನಾಗಿ ನಮಾಝ್ ಮಾಡುತ್ತಿರುವ ತನಕ ದೇವಚರರು ಅವನಿಗಾಗಿ ಪ್ರಾರ್ಥಿಸುತ್ತಿರುತ್ತಾರೆ. ಓ ಅಲ್ಲಾಹ್! ಅವನನ್ನು ಸಂರಕ್ಷಿಸು, ಓ ಅಲ್ಲಾಹ್! ಅವನ ಮೇಲೆ ಕರುಣೆ ತೋರು. ಅವನು ನಮಾಝ್‌ನ ನಿರೀಕ್ಷೆಯಲ್ಲಿರುವ ವೇಳೆಯೂ ನಮಾಝ್‌ನಲ್ಲೇ ಇರುತ್ತಾನೆ."

(ವರದಿ: ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೆ ಹೇಳಿರುವರು:

"ನನ್ನ ಪ್ರಾಣವು ಯಾರ ಕೈಯಲ್ಲಿದೆಯೋ ಆತನಾಣೆ, ನಾನು ಬೆಂಕಿ ಉರಿಸುವ ಆಜ್ಞೆ ಮಾಡಬೇಕು. ಅನಂತರ ನಮಾಝ್‌ಗೆ ಆಜ್ಞಾಪಿಸಬೇಕು. ತರುವಾಯ ಅದಾನ್ ಆದ ಬಳಿಕ ನಮಾಝ್‌ನ ನೇತೃತ್ವವನ್ನು ಯಾರಿಗಾದರೂ ವಹಿಸಿಕೊಟ್ಟು ನಮಾಝ್‌ಗೆ ಬಾರದಿರುವವರ ಮನೆಗಳನ್ನು ಹೊತ್ತಿಸಿ ಬಿಡಬೇಕೆಂದು ಬಯಸಿದ್ದೆ."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್)

ಮುಸ್ನದ್ ಅಹ್ಮದ್ ಎಂಬ ಹದೀಸ್ ಗ್ರಂಥದಲ್ಲಿ ಈ ಕೆಳಗಿನ ಪದಗಳು ವರದಿಯಾಗಿವೆ-

"ಮನೆಗಳಲ್ಲಿ ಮಹಿಳೆಯರು ಮತ್ತು ಮಕ್ಕಳು ಇಲ್ಲದಿರುತ್ತಿದ್ದರೆ ನಾನು ಇಶಾ ನಮಾಝ್ ಆರಂಭಿಸಿ ನಮ್ಮ ಯುವಕರನ್ನು ಕಳುಹಿಸಿ, ಮನೆಯಲ್ಲೇ ಕುಳಿತಿದ್ದು ಸಾಮೂಹಿಕ ನಮಾಝ್ ನಲ್ಲಿ ಭಾಗವಹಿಸಲು ಬಾರದವರ ಮನೆಗಳನ್ನು ಹೊತ್ತಿಸಿ ಬಿಡುವಂತೆ ಆಜ್ಞಾಪಿಸುತ್ತಿದ್ದೆ."

"ಓರ್ವ ಅಂಧ ವ್ಯಕ್ತಿ ಪ್ರವಾದಿವರ್ಯರ(ಸ) ಬಳಿಗೆ ಬಂದು- ಓ ಪ್ರವಾದಿವರ್ಯರೇ! ನನ್ನನ್ನು ಮಸೀದಿಗೆ ಕರೆ ತರುವಂತಹ ವ್ಯಕ್ತಿ ಯಾರೂ ಇಲ್ಲ. ಆದ್ದರಿಂದ ತಾವು ಅನುಮತಿಸಿದರೆ ನಾನು ಮನೆಯಲ್ಲೇ ನಮಾಝ್ ನಿರ್ವಹಿಸುವೆನು ಎಂದು ಅರಿಕೆ ಮಾಡಿಕೊಂಡರು. ಮೊದಲು ಪ್ರವಾದಿ(ಸ) ಅದಕ್ಕೆ ಅನುಮತಿ ನೀಡಿದರು. ಆದರೆ ಅವರು ಮರಳಿ ಹೋಗತೊಡಗಿದಾಗ ಪ್ರವಾದಿ(ಸ) ಅವರನ್ನು ಕರೆದು- ನಿಮಗೆ ಅದಾನ್ ಕೇಳಿಸುತ್ತದೆಯೇ? ಎಂದು ವಿಚಾರಿಸಿದರು. ಅವರು ಹೌದೆಂದಾಗ- ಹಾಗಾದರೆ ನೀವು ಅದಾನ್ ಕರೆಗೆ ಓಗೊಡಲೇ ಬೇಕು" (ಅರ್ಥಾತ್ ಮಸೀದಿಗೆ ಹೋಗಿ ಸಾಮೂಹಿಕ ನಮಾಝ್‌ನಲ್ಲಿ ಭಾಗವಹಿಸಲೇ ಬೇಕು) ಎಂದರು.

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್)

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾವುದಾದರೂ ಊರಿನಲ್ಲಿ ಮೂರು ಮಂದಿ ವಾಸಿಸುತ್ತಿದ್ದು ಅವರು ಸಾಮೂಹಿಕವಾಗಿ ನಮಾಝ್ ಮಾಡದೆ ಇದ್ದರೆ ಅವರ ಮೇಲೆ ಶೈತಾನನು ಪ್ರಾಬಲ್ಯ ಗಳಿಸುತ್ತಾನೆ. ಆದ್ದರಿಂದ ನೀವು ತಪ್ಪದೆ ಜಮಾಅತ್ ಸಹಿತ ನಮಾಝ್ ಮಾಡಿರಿ. ಏಕೆಂದರೆ ತೋಳವು ಮಂದೆಯಿಂದ ಬೇರ್ಪಟ್ಟ ಆಡು ಅಥವಾ ಕುರಿಯನ್ನೇ ಸೀಳಿ ತಿನ್ನುತ್ತದೆ."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)

## 2. ಮಹಿಳೆಯರು ಮಸೀದಿಗೆ ಹೋಗುವುದು

ಮಹಿಳೆಯರು ಮನೆಯಲ್ಲಿ ಅದರಲ್ಲೂ ಒಳಗಿನ ಕೋಣೆಯಲ್ಲಿ ನಮಾಝ್ ಮಾಡುವುದು ಮಸೀದಿಗೆ ಹೋಗಿ ಸಾಮೂಹಿಕವಾಗಿ ನಮಾಝ್ ಮಾಡುವುದಕ್ಕಿಂತ ಉತ್ತಮವಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮಹಿಳೆಯರ ಅತ್ಯುತ್ತಮ ಮಸೀದಿ ಅವರ ಮನೆಯ ಒಳಕೋಣೆಯಾಗಿದೆ."

(ವರದಿ: ಹ. ಉಮ್ಮು ಸಲಮ(ರ)- ಅಹ್ಮದ್)

ಆದರೆ ಮಹಿಳೆಯರು ಮಸೀದಿಗೆ ಹೋಗಿ ಸಾಮೂಹಿಕ ನಮಾಝ್‌ನಲ್ಲಿ ಸೇರಿಕೊಳ್ಳಲು ಬಯಸಿದರೆ ಅವರಿಗೆ ಅದರ ಅನುಮತಿ ಇದೆ. ಆದರೆ ಯಾವುದೇ ರೀತಿಯ ಕ್ಷೋಭೆಯ ಭಯವಿರಬಾರದು. ಮಹಿಳೆಯರು ಶೃಂಗಾರ ಮಾಡಿಕೊಂಡು ಅಥವಾ ಸುಗಂಧ ಲೇಪಿಸಿ ಕೊಂಡು ಮಸೀದಿಗೆ ಹೋಗಬಾರದು. ಹನಫೀ ಕರ್ಮಶಾಸ್ತ್ರಜ್ಞರ ಪ್ರಕಾರ ಇದು ಕ್ಷೋಭೆಯ ಕಾಲವಾಗಿದ್ದು ಮಹಿಳೆಯರು ಮಸೀದಿಗೆ ಹೋಗಿ ನಮಾಝ್ ಮಾಡುವುದು ಮಕ್ರೂಹ್

(ಅನಪೇಕ್ಷಿತ) ಆಗಿದೆ. (ಫತಾವಾ ಆಲಮ್‌ಗೀರಿ)

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಮಹಿಳೆಯರು ರಾತ್ರಿ ಮಸೀದಿಗೆ ಹೋಗುವ ಅನುಮತಿ ಕೇಳಿದರೆ ನೀವು ಅವರಿಗೆ ಅನುಮತಿ ಕೊಟ್ಟು ಬಿಡಿರಿ."

(ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ)

ಇನ್ನೊಂದು ವರದಿಯಲ್ಲಿ ಹೀಗಿದೆ:

"ಮಹಿಳೆಯರಿಗೆ ಅವರ ಮನೆಯೇ ಉತ್ತಮವಾಗಿದ್ದರೂ ಅವರು ಮಸೀದಿಗಳಿಗೆ ಬರುವುದನ್ನು ತಡೆಯದಿರಿ." (ಅಹ್ಮದ್, ಅಬೂ ದಾವೂದ್)

ಪ್ರವಾದಿ(ಸ) ಹೀಗೂ ಹೇಳಿರುವರು:

"ಅಲ್ಲಾಹನ ದಾಸಿಯರನ್ನು ಅಲ್ಲಾಹನ ಮಸೀದಿಯಿಂದ ತಡೆಯಬೇಡಿರಿ. ಆದರೆ ಅವರು ಸರಳವಾದ ಉಡುಪಿನೊಂದಿಗೆ ಬರಬೇಕು." (ವರದಿ: ಹ. ಅಬೂ ಹುರೈರಾ(ರ)- ಅಹ್ಮದ್)

### 3. ಮಸೀದಿಗೆ ಕಾಲ್ನಡಿಗೆಯಲ್ಲಿ ಹೋಗುವುದರ ಪುಣ್ಯ

ಒಬ್ಬ ವ್ಯಕ್ತಿ ಮಸೀದಿಗೆ ಹೋಗಲು ಎಷ್ಟು ಹೆಚ್ಚು ನಡೆಯುತ್ತಾನೋ ಅವನಿಗೆ ಅಷ್ಟೇ ಅಧಿಕ ಪುಣ್ಯ ಲಭಿಸುವುದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಮಾಝ್‌ನ ಜಮಾಅತ್‌ಗಾಗಿ ಅತ್ಯಧಿಕ ನಡೆದು ಬಂದವನಿಗೆ ನಮಾಝ್‌ನಲ್ಲಿ ಅತ್ಯಧಿಕ ಪುಣ್ಯ ಲಭಿಸುವುದು." (ವರದಿ: ಹ. ಅಬೂ ಮೂಸಾ(ರ)- ಮುಸ್ಲಿಮ್)

### 4. ಸಾಮೂಹಿಕ ನಮಾಝ್‌ಗೆ ಗಾಂಭೀರ್ಯದೊಂದಿಗೆ ಹೋಗುವ ಆಜ್ಞೆ

ಸಾಮೂಹಿಕ ನಮಾಝ್‌ನಲ್ಲಿ ಪಾಲ್ಗೊಳ್ಳಲಿಕ್ಕಾಗಿ ಮಸೀದಿಗೆ ಹೋಗುವಾಗ ಓಡುತ್ತಾ ಅಥವಾ ಜೋರಾಗಿ ನಡೆಯುತ್ತಾ ಹೋಗಬಾರದು. ಗಾಂಭೀರ್ಯದೊಂದಿಗೆ ಸಾವಕಾಶವಾಗಿ ನಡೆಯಬೇಕು. ಏಕೆಂದರೆ ವ್ಯಕ್ತಿಯೊಬ್ಬನು ನಮಾಝ್‌ಗಾಗಿ ಹೊರಟರೆ ಅವನು ನಮಾಝ್ ನಲ್ಲೇ ಇದ್ದಂತೆ.

"ನಾವು ಪ್ರವಾದಿವರ್ಯರ(ಸ) ಜೊತೆ ನಮಾಝ್ ಮಾಡುತ್ತಿದ್ದೆವು. ಆಗ ಕೆಲವು ಜನರ ಗುಲ್ಲು ಕೇಳಿಸಿತು. ನಾವು ನಮಾಝ್ ಮುಗಿಸಿದಾಗ ಪ್ರವಾದಿ(ಸ)- 'ಏನಾಗಿತ್ತು?' ಎಂದು ವಿಚಾರಿಸಿದರು. ಆಗ ಅವರು ಹೇಳಿದರು- ನಾವು ನಮಾಝ್‌ಗಾಗಿ ವೇಗವಾಗಿ ಬರುತ್ತಿದ್ದೆವು. ಆಗ ಪ್ರವಾದಿ(ಸ) ಹೇಳಿದರು- ಹಾಗೆ ಮಾಡಬೇಡಿ, ನೀವು ನಮಾಝ್‌ನ ಕಡೆಗೆ ಬರುವಾಗ ಸಾವಧಾನದಿಂದ ಬನ್ನಿರಿ. ಎಷ್ಟಂಶ ಸಾಮೂಹಿಕ ನಮಾಝ್ ಸಿಗುತ್ತದೋ ಅಷ್ಟರಲ್ಲಿ ಪಾಲ್ಗೊಳ್ಳಿ. ಉಳಿದುದನ್ನು ಮತ್ತೆ ಪೂರ್ಣಗೊಳಿಸಿರಿ."

(ವರದಿ: ಹ. ಅಬೂ ಕತಾದಃ(ರ)- ಬುಖಾರಿ, ಮುಸ್ಲಿಮ್)

## 5. ಸಾಮೂಹಿಕ ನಮಾಝ್‌ನಲ್ಲಿ ಭಾಗವಹಿಸದೆ ಇರಲು ಕಾರಣ

ಈ ಕೆಳಗಿನ ಪರಿಸ್ಥಿತಿಗಳಲ್ಲಿ ಜಮಾಅತ್‌ನಲ್ಲಿ ಭಾಗವಹಿಸದೆ ಇರುವ ಅನುಮತಿ ಇದೆ-

**i) ತೀವ್ರ ಚಳಿ ಅಥವಾ ಮಳೆಯ ಸಮಯ:**

"ತೀವ್ರ ಚಳಿಯ ರಾತ್ರಿಯಲ್ಲಿ, ಪ್ರಯಾಣದ ವೇಳೆ, ರಾತ್ರಿ ಮಳೆಯಾಗುತ್ತಿರುವಾಗ ಪ್ರವಾದಿವರ್ಯರ(ಸ) ಆದೇಶದಂತೆ ಅದಾನ್ ಹೇಳಿದ ಬಳಿಕ ಹೀಗೆ ಹೇಳಲಾಗುತ್ತಿತ್ತು- ಸಲ್ಲೂ ಫೀ ರಿಹಾಲಿಕುಮ್." (ನಿಮ್ಮ ಮನೆಗಳಲ್ಲೇ ನಮಾಝ್ ಮಾಡಿರಿ)

(ವರದಿ: ಹ. ಇಬ್ನು ಉಮರ್(ರ)- ಅಹ್ಮದ್, ಮುಸ್ಲಿಮ್)

**ii) ಊಟ ಬಡಿಸಿರುವಾಗ:**

ಪ್ರವಾದಿ(ಸ) ಹೇಳಿರುವರು:

"ನಿಮ್ಮ ಪೈಕಿ ಒಬ್ಬರ ಮುಂದೆ ಊಟ ಬಡಿಸಲ್ಪಟ್ಟರೆ ಅವನು ಅವಸರ ಮಾಡದಿರಲಿ. ಅವನು ಸಾವಕಾಶವಾಗಿ ಊಟ ಮಾಡಲಿ. ನಮಾಝ್ ನಿಂತಿದ್ದರೂ ಸರಿಯೆ."

(ವರದಿ: ಹ. ಇಬ್ನು ಉಮರ್(ರ)- ಬುಖಾರಿ)

**iii) ಮಲಮೂತ್ರ ವಿಸರ್ಜನೆಯ ಅಗತ್ಯವಿದ್ದಾಗ:**

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಊಟ ಮುಂದಿರುವಾಗ ಅಥವಾ ಮಲ ಮೂತ್ರದ ಅಗತ್ಯವಿದ್ದಾಗ ನಮಾಝ್ ಮಾಡಬಾರದು."

(ವರದಿ: ಹ. ಆಯಿಶಾ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್)

**iv) ಅನಿವಾರ್ಯ ಆವಶ್ಯಕತೆಯ ವೇಳೆ:**

"ಒಬ್ಬ ವ್ಯಕ್ತಿಗೆ ಇರುವ ಧರ್ಮದ ಬಗೆಗಿನ ಜ್ಞಾನದ ಒಂದು ಸಂಕೇತವೇನೆಂದರೆ, ಅವನಿಗೆ ನಮಾಝ್‌ನ ವೇಳೆ ಏನಾದರೂ ತೀವ್ರ ಅಗತ್ಯ ತಲೆದೋರಿದರೆ ಮೊದಲು ಅವನು ತನ್ನ ಅಗತ್ಯವನ್ನು ಪೂರ್ತಿಗೊಳಿಸುವುದು. ತನ್ಮೂಲಕ ಅವನು ನಮಾಝ್ ಮಾಡುವಾಗ ಪೂರ್ಣ ಏಕಾಗ್ರತೆಯೊಂದಿಗೆ ನಮಾಝ್ ಮಾಡುವಂತಾಗುತ್ತದೆ."

(ವರದಿ: ಹ. ಅಬುದ್ದರ್ದಾ(ರ)- ಬುಖಾರಿ)

ನಾಲ್ಕೂ ಕರ್ಮಶಾಸ್ತ್ರಗಳ ಪ್ರಕಾರ ರೋಗ, ಗಾಢಾಂಧಕಾರ, ಬಿರುಗಾಳಿ ಮತ್ತು ಭಯದ ವೇಳೆಯಲ್ಲೂ ಸಾಮೂಹಿಕ ನಮಾಝ್‌ನಲ್ಲಿ ಭಾಗವಹಿಸದೆ ಇರುವ ಅನುಮತಿಯಿದೆ. ಅಂಧ ವ್ಯಕ್ತಿ ಸ್ವತಃ ಮಸೀದಿಗೆ ಹೋಗುವುದು ಸಾಧ್ಯವಿಲ್ಲ ಹಾಗೂ ಅವನನ್ನು ಮಸೀದಿಗೆ ಕೊಂಡೊಯ್ಯುವವನು ಯಾರೂ ಇಲ್ಲದಿದ್ದರೆ ಆತ ಕೂಡಾ ಸಾಮೂಹಿಕ ನಮಾಝ್‌ನಲ್ಲಿ ಭಾಗವಹಿಸದೆ ಇರಬಹುದು.

**6. ಎಷ್ಟು ಮಂದಿ ಇದ್ದರೆ ಜಮಾಅತ್ ಆಗುತ್ತದೆ?**

ಇಮಾಮರ ಹೊರತು ಕನಿಷ್ಠ ಒಬ್ಬ ವ್ಯಕ್ತಿಯಿದ್ದರೆ ಜಮಾಅತ್ ಆಗುತ್ತದೆ. ಅದು ಮಹಿಳೆ ಅಥವಾ ಬಾಲಕನಾದರೂ ಸರಿಯೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಇಬ್ಬರು ಅಥವಾ ಅದಕ್ಕಿಂತ ಹೆಚ್ಚು ಮಂದಿ ಜಮಾಅತ್ ಆಗಿದ್ದಾರೆ."

(ವರದಿ: ಹ. ಅಬೂ ಮೂಸಾ(ರ)- ಇಬ್ನು ಮಾಜಃ)

**7. ಇಮಾಮತ್‌ಗೆ ಹೆಚ್ಚು ಅರ್ಹರು ಯಾರು?**

ಪ್ರವಾದಿ(ಸ) ಹೀಗೆ ಹೇಳಿರುವರು-

"ಮೂರು ಮಂದಿ ಇದ್ದರೆ ಅವರ ಪೈಕಿ ಒಬ್ಬರು ಇಮಾಮ್ ಆಗಲಿ ಮತ್ತು ಅವರ ಪೈಕಿ ಹೆಚ್ಚು ಓದಿದವನೇ ಇಮಾಮ್ ಆಗಲು ಹೆಚ್ಚು ಅರ್ಹನು."

(ವರದಿ: ಹ. ಅಬೂ ಸಈದ್(ರ)- ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಜನರ ಪೈಕಿ ಹೆಚ್ಚು ಓದಿದವನು ಅವರ ಇಮಾಮ್ ಆಗಲಿ. ಒಂದು ವೇಳೆ ಓದಿನಲ್ಲಿ ಎಲ್ಲರೂ ಸಮಾನರಾಗಿದ್ದರೆ, ಪ್ರವಾದಿಚರ್ಯೆಯ ತಿಳುವಳಿಕೆ ಹೆಚ್ಚು ಇರುವವನು. ಪ್ರವಾದಿಚರ್ಯೆಯ ಜ್ಞಾನದಲ್ಲಿಯೂ ಎಲ್ಲರೂ ಸಮಾನರಾಗಿದ್ದರೆ, ಅವರ ಪೈಕಿ ಮೊದಲು ಹಿಜ್ರತ್ ಮಾಡಿದವನು. ಹಿಜ್ರತ್‌ನಲ್ಲಿಯೂ ಎಲ್ಲರೂ ಸಮಾನರಾಗಿದ್ದರೆ, ಪ್ರಾಯದಲ್ಲಿ ಎಲ್ಲರಿಗಿಂತ ಹಿರಿಯವರು. ಯಾವ ವ್ಯಕ್ತಿಯೂ ಇನ್ನೊಬ್ಬನ ಸ್ಥಾನದಲ್ಲಿ ಇಮಾಮ್ ಮಾಡದಿರಲಿ. ಅವನ ಮನೆಯಲ್ಲಿ ಅವನು ಕುಳಿತುಕೊಳ್ಳುವ ಸ್ಥಳದಲ್ಲಿ ಕುಳಿತುಕೊಳ್ಳದಿರಲಿ. ಅವನಾಗಿಯೇ ಅನುಮತಿ ಕೊಟ್ಟಾಗ ಹೊರತು."

(ವರದಿ: ಹ. ಇಬ್ನು ಮಸ್‌ಊದ್(ರ)- ಅಹ್ಮದ್, ಮುಸ್ಲಿಮ್)

**ಈ ಕೆಳಗಿನ ವ್ಯಕ್ತಿಗಳ ಇಮಾಮತ್ ಧರ್ಮಸಮ್ಮತವಾಗಿದೆ-**

**i) ಅಂಧವ್ಯಕ್ತಿ:** "ಪ್ರವಾದಿವರ್ಯರು(ಸ) ಎರಡು ಸಲ ತಮ್ಮ ಗೈರು ಹಾಜರಿಯಲ್ಲಿ ಹ. ಇಬ್ನು ಮಕ್ತೂಮ್‌ರನ್ನು(ರ) ಮದೀನಾದ ಇಮಾಮ್ ಆಗಿ ನೇಮಿಸಿದ್ದರು. ಅವರು ಅಂಧರಾಗಿದ್ದರೂ ಜನರಿಗೆ ನಮಾಝ್ ಮಾಡಿಸುತ್ತಿದ್ದರು."

(ವರದಿ: ಹ. ಅನಸ್(ರ)- ಅಹ್ಮದ್, ಅಬೂ ದಾವೂದ್)

**ii) ಗುಲಾಮ:** "ನಾವು ಮೊಟ್ಟ ಮೊದಲು ಮದೀನಾಕ್ಕೆ ಆಗಮಿಸಿದಾಗ ಪ್ರವಾದಿ(ಸ) ಮದೀನಾಕ್ಕೆ ವಲಸೆ ಬರುವುದಕ್ಕಿಂತ ಮುಂಚೆ ವಲಸೆ ಬಂದವರೆಲ್ಲಾ ಕುಬಾದ ಒಂದು ಸ್ಥಳವಾದ ಉಸ್‌ಬಃದಲ್ಲಿ ತಂಗಿದೆವು. ಅಲ್ಲಿ ಅಬೂ ಹುದೈಫಾರವರು(ರ) ಸ್ವತಂತ್ರಗೊಳಿಸಿದ ಗುಲಾಮ

ಹ. ಸಾಲಿಮ್(ರ), ಜನರ ಇಮಾಮತ್ ಮಾಡುತ್ತಿದ್ದರು. ಅವರಿಗೆ ಅತ್ಯಧಿಕ ಕುರ್‌ಆನ್ ಕಂಠಪಾಠವಿತ್ತು. ಅವರ ಹಿಂದೆ ನಮಾಝ್ ಮಾಡುವವರಲ್ಲಿ ಹ. ಉಮರ್(ರ) ಮತ್ತು ಹ. ಅಬೂಸಲ್ಮಾ(ರ) ಕೂಡಾ ಇದ್ದರು."

(ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಅಬೂ ದಾವೂದ್)

"ನಾನು, ಉಬೈದ್ ಬಿನ್ ಉಮೈರ್, ಮುಸವ್ವಿರ್ ಬಿನ್ ಮಖ್‌ರ್ಮ(ರ) ಮತ್ತಿತರರು ಹ. ಆಯಿಶಾರ(ರ) ಬಳಿಗೆ ಹೋಗುತ್ತಿದ್ದೆವು. ಹ. ಆಯಿಶಾರವರು(ರ) ಸ್ವತಂತ್ರಗೊಳಿಸಿದ ಗುಲಾಮ ಅಬೂ ಅಮ್ರ್ ಇಮಾಮತ್ ಮಾಡುತ್ತಿದ್ದರು. ಅವರು ಆಗ ಗುಲಾಮರೇ ಆಗಿದ್ದರು, ಸ್ವತಂತ್ರರಾಗಿರಲಿಲ್ಲ."

(ವರದಿ: ಹ. ಇಬ್ನು ಅಬೀ ಮುಲೈಕಃ(ರ)- ಶಾಫಿಈ)

ಶಾಫಿಈ ಕರ್ಮಶಾಸ್ತ್ರದಂತೆ ಜುಮಾ ನಮಾಝ್‌ಗೆ ಗುಲಾಮನ ಇಮಾಮತ್ ಸಿಂಧುವಲ್ಲ. ಇತರ ನಮಾಝ್‌ಗಳಿಗೆ ಸಿಂಧುವಾಗಿದೆ. ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಎಲ್ಲ ನಮಾಝ್‌ಗಳಿಗೂ ಅವರ ಇಮಾಮತ್ ಸಿಂಧುವಾಗಿದೆ.

**iii) ಪ್ರಯಾಣಿಕ:** ಊರಲ್ಲಿರುವವನು ಪ್ರಯಾಣಿಕನ ಹಿಂದೆ ನಮಾಝ್ ಮಾಡಬಹುದಾಗಿದೆ. ಅನಂತರ ಅವನು ತನ್ನ ನಮಾಝನ್ನು ಪೂರ್ಣಗೊಳಿಸಿಕೊಳ್ಳಬೇಕು.

"ಪ್ರವಾದಿ(ಸ) ಪ್ರಯಾಣದಲ್ಲಿರುವ ತನಕ ಎರಡು ರಕಅತ್ ನಮಾಝ್ ಮಾಡುತ್ತಿದ್ದರು. ಪ್ರವಾದಿ(ಸ) ಮಕ್ಕಾದಲ್ಲಿ ಹದಿನೆಂಟು ದಿನ ತಂಗಿದ್ದರು. ಆಗ ಮಗ್ರಿಬ್ ನಮಾಝ್‌ನ ಹೊರತು ಇತರೆಲ್ಲ ನಮಾಝ್‌ಗಳನ್ನು ಎರಡೆರಡು ರಕಅತ್ ನಿರ್ವಹಿಸುತ್ತಿದ್ದರು. ಅನಂತರ (ಅಂದರೆ ಸಲಾಮ್ ಹೇಳಿದ ನಂತರ) ಅವರು 'ಮಕ್ಕಾದವರೇ, ಎದ್ದು ನಿಂತು ಉಳಿದ ಎರಡು ರಕಅತ್ ನಮಾಝ್ ಮಾಡಿರಿ. ಏಕೆಂದರೆ ನಾವು ಪ್ರಯಾಣಿಕರಾಗಿದ್ದೇವೆ' ಎಂದು ಹೇಳುತ್ತಿದ್ದರು."

(ವರದಿ: ಹ. ಇಮ್ರಾನ್ ಬಿನ್ ಹಸೀನ್(ರ)- ಅಹ್ಮದ್)

ಈ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ.

(ಫತ್‌ಹುರ್ರಬ್ಬಾನೀ- ಭಾಗ 5, ಪುಟ: 280)

**iv) ಯಾವುದಾದರೂ ಕಾರಣದಿಂದ ಕುಳಿತು ನಮಾಝ್ ಮಾಡುವವನ ಇಮಾಮತ್ ಧರ್ಮಸಮ್ಮತವಾಗಿದೆ:**

"ಒಮ್ಮೆ ಪ್ರವಾದಿವರ್ಯರಿಗೆ(ಸ) ಅಸೌಖ್ಯವಾಯಿತು. ಆಗ ಅವರು ಕುಳಿತುಕೊಂಡು ನಮಾಝ್ ಮಾಡಿದರು. ಕೆಲವರು ಅವರ ಹಿಂದೆ ನಿಂತು ನಮಾಝ್ ಮಾಡಿದರು. ಆಗ ಪ್ರವಾದಿವರ್ಯರು(ಸ) ಅವರಿಗೆ ಕುಳಿತುಕೊಳ್ಳುವಂತೆ ಸೂಚಿಸಿದರು. ಪ್ರವಾದಿ(ಸ) ಸಲಾಮ್ ಹೇಳಿದ ನಂತರ- ಇಮಾಮ್ ಎಂದರೆ ಅನುಸರಿಸಲ್ಪಡಬೇಕಾದವನು. ಆದ್ದರಿಂದ ಆತ

ರುಕೂಅ್ ಮಾಡಿದರೆ ನೀವೂ ಮಾಡಿ. ಆತ ಎದ್ದಾಗ ನೀವೂ ಏಳಿರಿ ಮತ್ತು ಅವರು ಕುಳಿತುಕೊಂಡು ನಮಾಝ್ ಮಾಡಿದರೆ ನೀವೂ ಕುಳಿತುಕೊಂಡೇ ನಮಾಝ್ ಮಾಡಿರಿ."

**(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)**

"ತಮ್ಮ ಕೊನೆಯ ಕಾಯಿಲೆಯ ವೇಳೆ ಪ್ರವಾದಿ(ಸ) ಕುಳಿತುಕೊಂಡು ನಮಾಝ್ ಮಾಡಿಸಿದರು. ಹ. ಅಬೂಬಕರ್(ರ), ಪ್ರವಾದಿವರ್ಯರ(ಸ) ತಕ್ಬೀರ್‌ನ ಜತೆ ತಕ್ಬೀರ್ ಹೇಳುತ್ತಿದ್ದರು. ಜನರು ಹ. ಅಬೂಬಕರ್‌ರವರ(ರ) ತಕ್ಬೀರ್‌ನ ಜತೆ ತಕ್ಬೀರ್ ಹೇಳುತ್ತಿದ್ದರು."

**(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)**

ಈ ಸಲ ಪ್ರವಾದಿ(ಸ) ಜನರಿಗೆ ಕುಳಿತುಕೊಂಡು ನಮಾಝ್ ಮಾಡಲು ಆದೇಶಿಸಲಿಲ್ಲವೆಂದು ಬೇರೆ ವರದಿಗಳಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರಗಳ ಪ್ರಕಾರ ಇಮಾಮ್ ಕುಳಿತುಕೊಂಡು ನಮಾಝ್ ಮಾಡುತ್ತಿರುವಾಗಲೂ ಅನುಯಾಯಿಗಳು ನಿಂತುಕೊಂಡೇ ನಮಾಝ್ ಮಾಡಬೇಕು.

**v) ತಯಮ್ಮುಮ್ ಮಾಡಿದವನ ಇಮಾಮತ್ ಸಿಂಧುವಾಗಿದೆ:**

"ನಾವು 'ದಾತುಸ್ಸಲಾಸಿಲ್'ನ ಯುದ್ಧಕ್ಕೆ ರವಾನಿಸಲ್ಪಟ್ಟಿದ್ದೆವು. ಒಂದು ರಾತ್ರಿ ಚಳಿ ಬಹಳ ತೀವ್ರವಾಗಿತ್ತು. ನನಗೆ ಸ್ನಾನ ಕಡ್ಡಾಯವಾಯಿತು. ನಾನು ಸ್ನಾನ ಮಾಡಿದರೆ ಸತ್ತೇ ಹೋಗುವೆ ಎಂದು ಭಯವಾಯಿತು. ಆದ್ದರಿಂದ ನಾನು ತಯಮ್ಮುಮ್ ಮಾಡಿ ಜನರಿಗೆ ನಮಾಝ್ ಮಾಡಿಸಿದೆ. ನಾವು ಮದೀನಾಕ್ಕೆ ಮರಳಿದಾಗ ಜನರು ಈ ಘಟನೆಯನ್ನು ಪ್ರವಾದಿವರ್ಯರಿಗೆ(ಸ) ವಿವರಿಸಿದರು. ಆಗ ಅವರು ನನ್ನನ್ನುದ್ದೇಶಿಸಿ: ನೀವು ಜನಾಬತ್ ಸ್ಥಿತಿಯಲ್ಲಿ ಜನರಿಗೆ ನಮಾಝ್ ಮಾಡಿಸಿದಿರಾ? ಎಂದು ವಿಚಾರಿಸಿದರು. ಆಗ ನಾನು- ನನಗೆ ಪವಿತ್ರ ಕುರ್‌ಆನಿನ ಈ ಸೂಕ್ತ ನೆನಪಿಗೆ ಬಂತು, 'ನಿಮ್ಮನ್ನು ನೀವು ನಾಶಗೊಳಿಸಿಕೊಳ್ಳದಿರಿ. ಅಲ್ಲಾಹನು ಖಂಡಿತ ನಿಮ್ಮ ಮೇಲೆ ಕರುಣೆ ತೋರುವವನಾಗಿದ್ದಾನೆ.' ಆದ್ದರಿಂದ ನಾನು ತಯಮ್ಮುಮ್ ಮಾಡಿ ನಮಾಝ್ ಮಾಡಿದೆ ಎಂದು ಹೇಳಿದೆ. ಪ್ರವಾದಿ(ಸ) ನಕ್ಕರು. ಆ ಬಳಿಕ ಅವರು ಏನೂ ಹೇಳಲಿಲ್ಲ."

**(ವರದಿ: ಹ. ಅಮ್ರ್ ಬಿನ್ ಆಸ್(ರ)- ಅಹ್ಮದ್, ಅಬೂ ದಾವೂದ್, ಹಾಕಿಮ್, ದಾರಕುತ್ನಿ, ಇಬ್ನು ಮಾಜಃ)**

**vi) ಕೇವಲ ಮಹಿಳೆಯರಿಗೆ ಮಹಿಳೆ ಇಮಾಮತ್ ಮಾಡುವುದು ಸಿಂಧುವಾಗಿದೆ:**

"ಪ್ರವಾದಿ(ಸ) ನಮ್ಮನ್ನು ಭೇಟಿಯಾಗಲು ನಮ್ಮ ಮನೆಗೆ ಬರುತ್ತಿದ್ದರು. ಪ್ರವಾದಿ(ಸ) ಅವರಿಗಾಗಿ ಓರ್ವ ಮುಅದ್ದಿನ್(ಅದಾನ್ ಕೊಡುವವ)ನನ್ನೂ ನೇಮಿಸಿದ್ದರು. ಅವರು ಅದಾನ್ ಕೊಡುತ್ತಿದ್ದರು ಮತ್ತು ನಾನು ನಮ್ಮ ಮನೆಯವರ ಇಮಾಮತ್ ಮಾಡುತ್ತಿದ್ದೆ."

**(ವರದಿ: ಹ. ಉಮ್ಮು ವರಕ ಬಿನ್ತಿ ಅಬ್ದುಲ್ಲಾಬಿನ್ ಅಲ್ ಹಾರಿಸ್(ರ)- ಅಬೂ ದಾವೂದ್)**

"ಮಹಿಳೆ ಅವರ ಮಧ್ಯೆಯೇ ನಿಂತುಕೊಂಡು ಮಹಿಳೆಯರ ಇಮಾಮತ್ ಮಾಡಬೇಕು."

**(ವರದಿ: ಹ. ಇಬ್ನು ಅಬ್ಬಾಸ್(ರ)- ಅಬ್ದುರ್ರಝ್ಝಾಕ್)**

**vii) ಕೇವಲ ಮಹಿಳೆಯರ ಇಮಾಮತ್ ಪುರುಷರು ಮಾಡುವುದು:**

"ನಾನು ಪ್ರವಾದಿವರ್ಯರ(ಸ) ಬಳಿ ಹೋಗಿ ಹೀಗೆ ಹೇಳಿದೆ- ನಾನು ರಾತ್ರಿ ಒಂದು ಕೆಲಸ ಮಾಡಿದ್ದೇನೆ. ಪ್ರವಾದಿ(ಸ)- ಅದೇನೆಂದು ವಿಚಾರಿಸಿದರು. ಆಗ ನಾನು, ಕೆಲವು ಮಹಿಳೆಯರು ಮನೆಯಲ್ಲಿ ಸೇರಿದ್ದರು. ಅವರು ಹೇಳಿದರು- ನೀವು ಕುರ್‌ಆನ್ ಓದುತ್ತೀರಿ. ನಮಗೆ ಓದಲಿಕ್ಕೆ ಬರುವುದಿಲ್ಲ. ಆದ್ದರಿಂದ ಇಂದು ನೀವು ನಮಗೆ ನಮಾಝ್ ಮಾಡಿಸಿ. ನಾನು ಅವರಿಗೆ ಎಂಟು ರಕಅತ್ ಮತ್ತು ವಿತ್ರ್ ನಮಾಝ್ ಮಾಡಿಸಿದೆ. ಆಗ ಪ್ರವಾದಿ(ಸ)- ಮೌನ ವಹಿಸಿದರು. ಅವರ ಮೌನವು ಅವರ ಸಮ್ಮತಿಯಾಗಿತ್ತು."

(ವರದಿ: ಹ. ಉಬೈ ಬಿನ್ ಕಅ್‌ಬ್(ರ)- ತಬ್ರಾನಿ, ಅಬೂ ಯಅ್‌ಲಾ)

ತನ್ನ ಪತ್ನಿ, ಸೋದರಿ, ತಾಯಿ ಮುಂತಾದ ಬಂಧುಗಳು ಸೇರಿರದ ಕೇವಲ ಪರಕೀಯ ಮಹಿಳೆಯರ ಇಮಾಮತ್ ಮಾಡುವುದು ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಪುರುಷರಿಗೆ ಮಕ್ರೂಹ್(ಅನಪೇಕ್ಷಿತ) ಆಗಿದೆ.

**8. ಇಮಾಮತ್‌ಗೆ ಅನರ್ಹರಾದವರು**

1) ಒಬ್ಬ ವ್ಯಕ್ತಿಯ ಅಜ್ಞಾನ ಅಥವಾ ಇನ್ನಿತರ ಕಾರಣಗಳಿಂದ ಅನುಯಾಯಿಗಳು ಅವನನ್ನು ಮೆಚ್ಚದಿದ್ದರೆ:

ಪ್ರವಾದಿ(ಸ) ಹೀಗೆ ಹೇಳಿರುವರು-

"ಮೂರು ಮಂದಿಯ ಯಾವುದೇ ನಮಾಝನ್ನು ಅಲ್ಲಾಹನು ಸ್ವೀಕರಿಸುವುದಿಲ್ಲ- 1) ತನ್ನನ್ನು ಮೆಚ್ಚದ ಜನರ ಇಮಾಮತ್ ಮಾಡುವ ವ್ಯಕ್ತಿ. 2) ನಮಾಝ್‌ನ ಸಮಯ ಮುಗಿಯುವ ವೇಳೆಗೆ ನಮಾಝ್‌ಗೆ ಹೋಗುವ ವ್ಯಕ್ತಿ. 3) ತನ್ನ ಗುಲಾಮನನ್ನು ಸ್ವತಂತ್ರ ಗೊಳಿಸಿದ ಬಳಿಕ ಅವನನ್ನು ಗುಲಾಮನಾಗಿಸಿದ ವ್ಯಕ್ತಿ."

(ವರದಿ: ಹ. ಅಬ್ದುಲ್ಲಾ ಬಿನ್ ಅಮ್ರ್- ಅಬೂ ದಾವೂದ್, ತಿರ್ಮಿದಿ)

ತನ್ನನ್ನು ಮೆಚ್ಚದ ಜನರ ಇಮಾಮತ್ ಮಾಡುವವನನ್ನು ಕೆಲವು ಸಹಾಬಿಗಳು ಮೆಚ್ಚುತ್ತಿರಲಿಲ್ಲ. ಆದರೆ ಇಮಾಮ್ ಅಕ್ರಮಿಯಾಗಿರದಿದ್ದರೆ (ಅರ್ಥಾತ್ ಅವನಲ್ಲಿ ಯಾವುದೇ ಕುಂದು ಕೊರತೆ ಇಲ್ಲದಿದ್ದರೆ) ಅದರ ಪಾಪವು ಅವನನ್ನು ಮೆಚ್ಚದವರ ಮೇಲೆ ಇರುವುದು ಎಂದು ಇಮಾಮ್ ತಿರ್ಮಿದಿ ಹೇಳುತ್ತಾರೆ. ಈ ಬಗ್ಗೆ ಕರ್ಮಶಾಸ್ತ್ರಜ್ಞರ ಒಮ್ಮತಾಭಿಪ್ರಾಯವಿದೆ.

2) ಕರ್ಮಭ್ರಷ್ಟ ಮತ್ತು ನವೀನವಾದಿಗಳು:

ಯಾರ ನಮಾಝ್ ಅವನ ಮಟ್ಟಿಗೆ ಧರ್ಮಸಮ್ಮತವಾಗುತ್ತದೋ ಅವನ ಹಿಂದೆ ನಮಾಝ್ ಮಾಡುವುದು ಇತರರಿಗೂ ಧರ್ಮಸಮ್ಮತವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು-

"ಒಳ್ಳೆಯವನಾದರೂ ಕೆಟ್ಟವನಾದರೂ ಎಲ್ಲ ಅಮೀರ್‌ನ ಜತೆಗೂಡಿ ಜಿಹಾದ್ ಮಾಡುವುದು ಕಡ್ಡಾಯವಾಗಿದೆ. ಅಂತೆಯೇ ಒಳ್ಳೆಯವನಾದರೂ ಕೆಟ್ಟವನಾದರೂ ಎಲ್ಲ

ಮುಸ್ಲಿಮರ ಹಿಂದೆ ನಮಾಝ್ ಮಾಡುವುದು ಕಡ್ಡಾಯವಾಗಿದೆ. ಅವನು ದೊಡ್ಡ ಪಾಪ ಮಾಡುವವನಾದರೂ ಸರಿಯೇ."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)

ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರಗಳ ಪ್ರಕಾರ ಕರ್ಮಭ್ರಷ್ಟನ ಹಿಂದೆ ನಮಾಝ್ ಮಾಡುವುದು ಮಕ್ರೂಹ್(ಅನಪೇಕ್ಷಿತ) ಆಗಿದೆ.

3) ಹನಫೀ ಕರ್ಮಶಾಸ್ತ್ರ ಪ್ರಕಾರ ನಫಿಲ್ ನಮಾಝ್ ಮಾಡುವವನ ಹಿಂದೆ ಫರ್ಝ್ ನಮಾಝ್ ಮಾಡುವಂತಿಲ್ಲ. ಆದರೆ ಶಾಫಿಈ ಕರ್ಮಶಾಸ್ತ್ರ ಪ್ರಕಾರ ಹಾಗೆ ಮಾಡಬಹುದು.

4) ಹನಫೀ ಕರ್ಮಶಾಸ್ತ್ರದಂತೆ ಬಾಲಕರ ಇಮಾಮತ್‌ನಲ್ಲಿ ನಮಾಝ್ ಮಾಡುವಂತಿಲ್ಲ. ಆದರೆ ಶಾಫಿಈ ಕರ್ಮಶಾಸ್ತ್ರದಂತೆ ಬಾಲಕರ ಹಿಂದೆಯೂ ನಮಾಝ್ ಮಾಡಬಹುದಾಗಿದೆ.

**9. ಇಮಾಮ್ ಮತ್ತು ಅನುಯಾಯಿಗಳು ಹೇಗೆ ನಿಲ್ಲಬೇಕು?**

ಇಮಾಮ್‌ನ ಜತೆ ಒಬ್ಬನೇ ಅನುಯಾಯಿ ಇದ್ದರೆ ಆತ ಅವನ ಬಲಬದಿಯಲ್ಲಿ ಸ್ವಲ್ಪ ಹಿಂದೆ ನಿಲ್ಲಬೇಕು. ಇಬ್ಬರು ಅಥವಾ ಹೆಚ್ಚು ಮಂದಿ ಅನುಯಾಯಿಗಳಿದ್ದರೆ ಅವರು ಇಮಾಮರ ಹಿಂದೆ ನಿಲ್ಲುವರು.

"ಪ್ರವಾದಿ(ಸ) ಮಗ್ರಿಬ್ ನಮಾಝ್ ಮಾಡಲು ನಿಂತಿದ್ದರು. ನಾನು ಬಂದು ಅವರ ಎಡಭಾಗದಲ್ಲಿ ನಿಂತೆ. ಅವರು(ಸ) ನನ್ನ ಕೈ ಹಿಡಿದು ನನ್ನನ್ನು ತಮ್ಮ ಬಲಭಾಗಕ್ಕೆ ತಿರುಗಿಸಿ ನಿಲ್ಲಿಸಿದರು. ಅನಂತರ ಜಬ್ಬಾರ್ ಬಿನ್ ಸಖ್ರ್(ರ) ಬಂದರು. ಅವರು ಪ್ರವಾದಿವರ್ಯರ(ಸ) ಎಡಭಾಗದಲ್ಲಿ ನಿಂತರು. ಪ್ರವಾದಿ(ಸ) ನಮ್ಮ ಕೈ ಹಿಡಿದು ನಮ್ಮನ್ನು ಹಿಂದಕ್ಕೆ ದೂಡಿದರು ಮತ್ತು ತಮ್ಮ ಹಿಂದೆ ನಿಲ್ಲಿಸಿದರು."

(ವರದಿ: ಹ.ಜಾಬಿರ್(ರ)- ಮುಸ್ಲಿಮ್, ಅಬೂ ದಾವೂದ್)

ಪ್ರವಾದಿ(ಸ) ಹೀಗೆ ಆಜ್ಞಾಪಿಸಿರುವರು-

"ನೀವು ಮೂರು ಮಂದಿ ಇದ್ದರೆ ನಿಮ್ಮಲ್ಲಿ ಒಬ್ಬರು ಮುಂದೆ ನಿಂತುಕೊಳ್ಳಬೇಕು ಮತ್ತು ಇಬ್ಬರು ಹಿಂದೆ." (ವರದಿ: ಹ. ಸಮುರ ಬಿನ್ ಜುಂದುಬ್(ರ)- ತಿರ್ಮಿದಿ)

1) ಜಮಾಅತ್‌ನಲ್ಲಿ ಸೇರಿಕೊಳ್ಳಲು ಮಹಿಳೆ ಬಂದರೆ ಆಕೆ ಪುರುಷರಿಂದ ದೂರ ಅವರ ಹಿಂದೆ ನಿಲ್ಲಬೇಕು.

"ನಾನು ಮತ್ತು ನಮ್ಮ ಮನೆಯ ಓರ್ವ ಅನಾಥ ಬಾಲಕ ಪ್ರವಾದಿವರ್ಯರ(ಸ) ಹಿಂದೆ ನಮಾಝ್ ಮಾಡಿದೆವು. ನನ್ನ ತಾಯಿ ಉಮ್ಮು ಸುಲೈಮ್ ನಮ್ಮ ಹಿಂದೆ ನಿಂತಿದ್ದರು. ಇನ್ನೊಂದು ವರದಿಯಲ್ಲಿ ಹೀಗಿದೆ: ನಾನು ಮತ್ತು ಆ ಅನಾಥ ಬಾಲಕ ಪ್ರವಾದಿವರ್ಯರ(ಸ) ಹಿಂದೆ ನಿಂತಿದ್ದೆವು ಮತ್ತು ತಾಯಿ ನಮ್ಮ ಹಿಂದೆ ನಿಂತಿದ್ದರು."

(ವರದಿ: ಹ. ಅನಸ್(ರ)- ಬುಖಾರಿ, ಮುಸ್ಲಿಮ್)

2) ಇಮಾಮರ ಬಲ ಮತ್ತು ಎಡಭಾಗದಲ್ಲಿ ಜನರು ಸಮಾನವಾಗಿರಬೇಕು. ಹೆಚ್ಚು ವಿದ್ವಾಂಸರು ಇಮಾಮರ ಸಮೀಪ ನಿಲ್ಲಬೇಕು. ಏಕೆಂದರೆ ಏನಾದರೂ ಕಾರಣಕ್ಕೆ ಇಮಾಮರು ಅಲ್ಲಿಂದ ಸರಿಯಬೇಕಾಗಿ ಬಂದರೆ ಅವರು ಅವರ ಸ್ಥಾನದಲ್ಲಿ ನಿಂತು ಜಮಾಅತ್ ಮುಂದುವರಿಸಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಇಮಾಮರು ಮಧ್ಯೆ ಇರಬೇಕು. ನಿಮ್ಮ ಮಧ್ಯೆ ಅಂತರವಿರಬಾರದು."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)

ಪ್ರವಾದಿ(ಸ) ಈ ರೀತಿ ಹೇಳಿರುವರು-

"ನನ್ನ ಬಳಿ ಹೆಚ್ಚು ಬುದ್ಧಿ ಮತ್ತು ತಿಳುವಳಿಕೆಯುಳ್ಳವರು ನಿಲ್ಲಲಿ. ಅನಂತರ ಅವರಿಗಿಂತ ಕಡಿಮೆಯವರು. ಅನಂತರ ಅವರಿಗಿಂತ ಕಡಿಮೆಯವರು ಮತ್ತು ನೀವು ಪೇಟೆಯ ವ್ಯರ್ಥ ಮಾತುಗಳಿಂದ ದೂರವಿರಿ."

(ವರದಿ: ಹ. ಇಬ್ನು ಮಸ್‌ಊದ್(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

3) ಅನುಯಾಯಿಗಳಲ್ಲಿ ಪುರುಷರು, ಮಹಿಳೆಯರು ಮತ್ತು ಮಕ್ಕಳು ಇದ್ದರೆ ಪುರುಷರು ಮುಂದೆ ನಿಲ್ಲಬೇಕು. ಅನಂತರ ಮಕ್ಕಳು ಮತ್ತು ಆ ಬಳಿಕ ಮಹಿಳೆಯರು.

"ಪ್ರವಾದಿ(ಸ) ಜಮಾಅತ್‌ನಲ್ಲಿ ಪುರುಷರನ್ನು ಎಲ್ಲರಿಗಿಂತ ಮುಂದೆ ನಿಲ್ಲಿಸುತ್ತಿದ್ದರು. ಅವರ ಹಿಂದೆ ಮಕ್ಕಳನ್ನು ಮತ್ತು ಅವರ ಹಿಂದೆ ಮಹಿಳೆಯರನ್ನು ನಿಲ್ಲಿಸುತ್ತಿದ್ದರು."

(ವರದಿ: ಹ. ಅಬೂ ಮಾಲಿಕ್ ಅಶ್‌ಅರೀ(ರ)- ಅಹ್ಮದ್, ಅಬೂ ದಾವೂದ್)

ಪ್ರವಾದಿ(ಸ) ಹೀಗೆ ಹೇಳಿರುವರು:

"ಪುರುಷರ ಅತ್ಯುತ್ತಮ ಪಂಕ್ತಿ ಮುಂದಿನ ಪಂಕ್ತಿಯಾಗಿದೆ ಮತ್ತು ಅತ್ಯಂತ ಕೆಟ್ಟ ಪಂಕ್ತಿ ಕೊನೆಯ ಪಂಕ್ತಿಯಾಗಿದೆ. ಮಹಿಳೆಯರ ಅತ್ಯುತ್ತಮ ಪಂಕ್ತಿ ಕೊನೆಯ ಪಂಕ್ತಿಯಾಗಿದೆ ಮತ್ತು ಅವರ ಅತ್ಯಂತ ಕೆಟ್ಟ ಪಂಕ್ತಿ ಮುಂದಿನ ಪಂಕ್ತಿಯಾಗಿದೆ."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಅಬೂ ದಾವೂದ್,
ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

4) ಪಂಕ್ತಿಯ ಹಿಂದೆ ಒಬ್ಬಂಟಿಯಾಗಿ ನಮಾಝ್ ಮಾಡಿದರೆ ನಮಾಝ್ ಆಗುತ್ತದೆ. ಆದರೆ ಅದು ಮಕ್ರೂಹ್(ಅನಪೇಕ್ಷಿತ) ಆಗಿದೆ. ಆದರೆ ಅಹ್ಲುಲ್ ಹದೀಸ್‌ಗಳ ಪ್ರಕಾರ ಪಂಕ್ತಿಯ ಹಿಂದೆ ಒಬ್ಬಂಟಿಯಾಗಿ ನಮಾಝ್ ಮಾಡಿದವನ ನಮಾಝ್ ಸಿಂಧುವಾಗುವುದಿಲ್ಲ. ಅವನು ಪುನಃ ನಮಾಝ್ ಮಾಡಬೇಕು.

ಪಂಕ್ತಿಯು ಪೂರ್ಣವಾದ ಬಳಿಕ ಯಾರಾದರೂ ಬಂದರೆ ಅವನು ಪಂಕ್ತಿಯ ಹಿಂದೆ ಒಬ್ಬಂಟಿಯಾಗಿ ನಿಂತು ನಮಾಝ್ ಮಾಡುವುದಕ್ಕಿಂತ ಪಂಕ್ತಿಯಿಂದ ಒಬ್ಬರನ್ನು ಎಳೆದು ತನ್ನ ಜತೆ ಸೇರಿಸಿಕೊಳ್ಳಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಒಬ್ಬ ವ್ಯಕ್ತಿ ಬಂದಾಗ (ಅವನ ಜತೆ ನಿಲ್ಲಲು) ಬೇರಾರೂ ಇಲ್ಲದಿದ್ದರೆ ಅವನು ಪಂಕ್ತಿಯಿಂದ ಒಬ್ಬರನ್ನು ಎಳೆದು ತನ್ನ ಜತೆ ನಿಲ್ಲಿಸಬೇಕು. ಯಾವ ವ್ಯಕ್ತಿಯನ್ನು ಎಳೆಯಲಾಗುತ್ತದೋ ಅವನಿಗೆ ಹೆಚ್ಚು ಪುಣ್ಯವಿದೆ."

**(ವರದಿ: ಹ. ಮುಕಾತಿಲ್ ಬಿನ್ ಹಿಬ್ಬಾನ್(ರ)- ಅಬೂ ದಾವೂದ್)**

5) ಇಮಾಮ್ ಅನುಯಾಯಿಗಳಿಗಿಂತ ಉನ್ನತ ಸ್ಥಳದಲ್ಲಿ ನಿಂತುಕೊಳ್ಳಬಾರದು.

"ಇಮಾಮ್ ಉನ್ನತ ಸ್ಥಾನದಲ್ಲಿ ನಿಲ್ಲುವುದನ್ನು ಮತ್ತು ಅನುಯಾಯಿಗಳು ಕೆಳಗೆ ನಿಂತುಕೊಳ್ಳುವುದನ್ನು ಪ್ರವಾದಿ(ಸ) ತಡೆದಿರುವರು."

**(ವರದಿ: ಹ. ಇಬ್ನು ಮಸ್‌ಊದ್(ರ)- ದಾರಕುತ್ನಿ)**

ಅನುಯಾಯಿಗಳು ಇಮಾಮ್‌ಗಿಂತ ಉನ್ನತ ಸ್ಥಾನದಲ್ಲಿ ನಿಲ್ಲಬಹುದು.

"ನಾನು ಜಮಾಅತ್‌ನಲ್ಲಿ ಸೇರಿ ಮಸೀದಿಯ ಮಹಡಿಯಲ್ಲಿ ನಿಂತು ನಮಾಝ್ ಮಾಡಿರುತ್ತೇನೆ."

**(ವರದಿ: ಹ. ಅಬೂ ಹುರೈರಾ(ರ)- ಸಈದ್ ಬಿನ್ ಮನ್‌ಸೂರ್, ಶಾಫಿಈ, ಬೈಹಕಿ, ಬುಖಾರಿ)**

6) ಜಮಾಅತ್‌ನ ಪ್ರಥಮ ಪಂಕ್ತಿಯ ಬಲಬದಿಯಲ್ಲಿ ನಿಲ್ಲುವುದು ಉತ್ತಮವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಜನರಿಗೆ ಅದಾನ್ ಮತ್ತು ಪ್ರಥಮ ಪಂಕ್ತಿಯ ಪುಣ್ಯವೆಷ್ಟಿದೆಯೆಂದು ತಿಳಿಯುತ್ತಿದ್ದರೆ ಅದಕ್ಕಾಗಿ ಲಾಟರಿ ಎತ್ತಬೇಕಾಗಿ ಬರುತ್ತಿತ್ತು."

**(ವರದಿ: ಹ. ಅಬೂ ಹುರೈರಾ(ರ)- ಬುಖಾರಿ)**

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅಲ್ಲಾಹನು ಮತ್ತು ಅವನ ದೇವಚರರು ಪಂಕ್ತಿಗಳ ಬಲಬದಿಯಲ್ಲಿ ನಮಾಝ್ ಮಾಡುವವರ ಮೇಲೆ ಸಲಾಮ್ ಹೇಳುತ್ತಾರೆ."

**(ವರದಿ: ಹ. ಆಯಿಶಾ(ರ)- ಅಬೂ ದಾವೂದ್)**

### 10. ಇಮಾಮ್‌ಗೆ ಅಪೇಕ್ಷಣೀಯವಾದ ವಿಷಯಗಳು

1) ಅನುಯಾಯಿಗಳನ್ನು ಗಮನದಲ್ಲಿರಿಸಿ ನಮಾಝನ್ನು ಲಘುವಾಗಿ ನಿರ್ವಹಿಸುವುದು:

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ಜನರ ಇಮಾಮತ್ ಮಾಡುವುದಿದ್ದರೆ ಆತ ನಮಾಝನ್ನು ಲಘುವಾಗಿ ನಿರ್ವಹಿಸಲಿ. ಏಕೆಂದರೆ ಅವನ ಅನುಯಾಯಿಗಳಲ್ಲಿ ಬಲಹೀನರೂ ರೋಗಿಗಳೂ ವೃದ್ಧರೂ ಇರಬಹುದು. ಆತ ಒಬ್ಬಂಟಿಯಾಗಿ ನಮಾಝ್ ಮಾಡುವುದಿದ್ದರೆ ದೀರ್ಘ ನಮಾಝ್ ಮಾಡಲಿ."

**(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ)**

2) ಮತ್ತೆ ಬಂದು ಸೇರುವವರ ಅನುಕೂಲತೆಗಾಗಿ ಇಮಾಮ್ ಮೊದಲ ರಕಅತನ್ನು ತುಲನಾತ್ಮಕವಾಗಿ ದೀರ್ಘಗೊಳಿಸುವುದು:

"ಪ್ರವಾದಿ(ಸ) ಝುಹರ್, ಅಸರ್ ಮತ್ತು ಫಜ್ರ್ ನಮಾಝ್‌ಗಳಲ್ಲಿ ಪ್ರಥಮ ರಕಅತನ್ನು ದ್ವಿತೀಯ ರಕಅತ್‌ಗಿಂತ ದೀರ್ಘಗೊಳಿಸುತ್ತಿದ್ದರು."

**(ವರದಿ: ಹ. ಅಬೂ ಕತಾದಃ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್)**

3) ಸಲಾಮ್ ಹೇಳಿದ ಬಳಿಕ ಇಮಾಮ್ ಬಲ ಅಥವಾ ಎಡ ಭಾಗಕ್ಕೆ ತಿರುಗಿ ಅನುಯಾಯಿಗಳಿಗೆ ಮುಖ ಮಾಡುವುದು:

"ಪ್ರವಾದಿ(ಸ) ನಮ್ಮ ಇಮಾಮತ್ ಮಾಡುತ್ತಿದ್ದರು. (ಸಲಾಮ್ ಹೇಳಿದ ಬಳಿಕ) ಪ್ರವಾದಿವರ್ಯರು(ಸ) ತಮ್ಮ ಬಲ ಅಥವಾ ಎಡಕಡೆಗೆ ತಿರುಗಿ ನಮ್ಮ ಕಡೆ ಮುಖ ಮಾಡುತ್ತಿದ್ದರು." **(ವರದಿ: ಹ. ಹಲ್ಬ್(ರ)- ತಿರ್ಮಿದಿ)**

4) ನಮಾಝ್ ಆದ ಬಳಿಕ ಇಮಾಮ್ ತನ್ನ ಸ್ಥಾನದಿಂದ ಸರಿದು ಸುನ್ನತ್ ನಮಾಝ್ ವಗೈರೆ ನಿರ್ವಹಿಸುವುದು:

ಪ್ರವಾದಿ(ಸ) ಹೀಗೆ ಹೇಳಿರುವರು:

"ಇಮಾಮ್ ತಾನು ಫರ್ಝ್ ನಮಾಝ್ ಮಾಡಿಸಿದ ಸ್ಥಳದಲ್ಲೇ ನಮಾಝ್ ಮಾಡಬಾರದು. ಅವನು ಅಲ್ಲಿಂದ ಸ್ವಲ್ಪ ಸರಿದು ನಿಂತು ನಮಾಝ್ ಮಾಡಬೇಕು."

**(ವರದಿ: ಹ. ಮುಗೀರ ಬಿನ್ ಶುಲ್‌ಬ(ರ)- ಅಬೂ ದಾವೂದ್, ಇಬ್ನು ಮಾಜಃ)**

## 11. ಮುಕ್ತದೀಗಳು(ಅನುಯಾಯಿಗಳು) ಮಾಡಬೇಕಾದ ಕಾರ್ಯಗಳು:

1) ತಮ್ಮ ಪಂಕ್ತಿಗಳನ್ನು ಸರಿಪಡಿಸಬೇಕು. ಆದಷ್ಟು ಹತ್ತಿರವಾಗಿ ನಿಲ್ಲಬೇಕು.

"ಪ್ರವಾದಿ(ಸ) ನಮಾಝ್‌ಗೆ ಅಲ್ಲಾಹು ಅಕ್ಬರ್ ಎನ್ನುವುದಕ್ಕೆ ಮುಂಚೆ ನಮ್ಮ ಕಡೆಗೆ ನೋಡಿ 'ಜೊತೆಯಾಗಿ ನಿಲ್ಲಿರಿ, ನೇರವಾಗಿ ನಿಲ್ಲಿರಿ' ಎಂದು ಹೇಳುತ್ತಿದ್ದರು."

**(ವರದಿ: ಹ. ಅನಸ್(ರ)- ಬುಖಾರಿ, ಮುಸ್ಲಿಮ್)**

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮುಂದಿನ ಪಂಕ್ತಿಯನ್ನು ಪೂರ್ತಿಗೊಳಿಸಿರಿ. ಅನಂತರ ಅದರ ನಂತರ ಇರುವ ಪಂಕ್ತಿಯನ್ನು ಪೂರ್ತಿಗೊಳಿಸಿರಿ. ಈ ರೀತಿ ಯಾವುದೇ ಕೊರತೆಯಿದ್ದರೆ ಅದು ಕೊನೆಯ ಪಂಕ್ತಿಯಲ್ಲಿರಬೇಕು." **(ವರದಿ: ಹ. ಅನಸ್(ರ)- ಅಬೂ ದಾವೂದ್, ನಸಾಈ, ಬೈಹಕಿ)**

2) ಜಮಾಅತ್‌ನಲ್ಲಿ ಅನುಯಾಯಿಗಳು ಇಮಾಮ್‌ಗಿಂತ ಹಿಂದಿರುವುದು ಅಗತ್ಯ. ಅವನಿಗಿಂತ ಮುಂದುವರಿಯುವುದು ಪಾಪಕಾರ್ಯವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಇಮಾಮ್‌ನ ನೇಮಕ ಮಾಡುವುದೇ ಅವನನ್ನು ಅನುಸರಿಸಲಿಕ್ಕಾಗಿ. ಆದ್ದರಿಂದ ನೀವು ಅವನಿಗಿಂತ ಮುಂದುವರಿಯಬಾರದು. ಅವನು ಅಲ್ಲಾಹು ಅಕ್ಬರ್ ಹೇಳಿದಾಗ ನೀವು ಅಲ್ಲಾಹು

ಅಕ್ಬರ್ ಹೇಳಿ. ಅವನು ರುಕೂಅ್ ಮಾಡಿದಾಗ ನೀವು ರುಕೂಅ್ ಮಾಡಿ. ಅವನು 'ಸಮಿಅಲ್ಲಾಹು ಲಿಮನ್ ಹಮಿದಃ' ಎಂದು ಹೇಳಿದಾಗ ನೀವು 'ಅಲ್ಲಾಹುಮ್ಮ ರಬ್ಬನಾ ಲಕಲ್ ಹಮ್ದ್' ಎಂದು ಹೇಳಿರಿ. ಅವನು ಸುಜೂದ್ ಮಾಡಿದಾಗ ನೀವು ಸುಜೂದ್ ಮಾಡಿರಿ. ಅವನು ರುಕೂಅ್ ಮಾಡದೆ ನೀವು ರುಕೂಅ್ ಮಾಡಬೇಡಿರಿ. ಅವನು ಸುಜೂದ್ ಮಾಡದೆ ನೀವು ಸುಜೂದ್ ಮಾಡಬೇಡಿರಿ."

(ವರದಿ: ಹ. ಅಬೂ ಹುರ್ೈರಾ(ರ)- ಅಹ್ಮದ್, ಅಬೂ ದಾವೂದ್)

3) ಫರ್ಝ್ ನಮಾಝ್‌ನ ನಂತರ ಮುಕ್ತದೀಗಳು ಕೂಡಾ ತಮ್ಮ ಸ್ಥಾನದಿಂದ ಸ್ವಲ್ಪ ಸರಿದು ಸುನ್ನತ್ ಇತ್ಯಾದಿ ನಮಾಝ್‌ಗಳನ್ನು ನಿರ್ವಹಿಸಬೇಕು. ಸಲಾಮ್ ಹೇಳಿದ ನಂತರ ಇಮಾಮ್ ಬಲ ಅಥವಾ ಎಡಭಾಗಕ್ಕೆ ತಿರುಗುವ ತನಕ ಅನುಯಾಯಿಗಳು ತಮ್ಮ ಸ್ಥಾನದಿಂದ ಏಳಬಾರದು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ನಮಾಝ್ ಮಾಡಿ ಮುಗಿಸಿದ ಬಳಿಕ ಮುಂದೆ, ಹಿಂದೆ, ಬಲ ಅಥವಾ ಎಡಭಾಗಕ್ಕೆ ಸರಿಯುವುದು ಒಳ್ಳೆಯದು."

(ವರದಿ: ಹ. ಅಬೂ ಹುರ್ೈರಾ(ರ)- ಅಹ್ಮದ್, ಅಬೂ ದಾವೂದ್, ಇಬ್ನು ಮಾಜಃ)

"ಪ್ರವಾದಿ(ಸ) ನನ್ನನ್ನು ನಮಾಝ್‌ಗೆ ಪ್ರೇರೇಪಿಸುತ್ತಿದ್ದರು. ಅವರು(ಸ) (ಬಲ ಅಥವಾ ಎಡಭಾಗಕ್ಕೆ) ತಿರುಗುವುದಕ್ಕೆ ಮುಂಚೆ ಏಳುವುದರಿಂದ ತಡೆಯುತ್ತಿದ್ದರು."

(ವರದಿ: ಹ. ಅನಸ್(ರ)- ಅಬೂ ದಾವೂದ್)

## 12. ಇಮಾಮ್‌ನ ಹಿಂದೆ ಮುಕ್ತದೀಗಳು ಕುರ್‌ಆನ್ ಪಠಿಸುವುದು

ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಸಾಮೂಹಿಕ ನಮಾಝ್‌ನಲ್ಲಿ ಇಮಾಮ್‌ನ ಕುರ್‌ಆನ್ ಪಠನವು ಎಲ್ಲರಿಗೂ ಸಾಕಾಗುತ್ತದೆ. ಆದ್ದರಿಂದ ಇಮಾಮ್‌ನ ಹಿಂದೆ ನಮಾಝ್ ಮಾಡುವಾಗ ಮುಕ್ತದೀಗಳು ಕುರ್‌ಆನ್ ಪಠಿಸಬಾರದು.

ಶಾಫಿಈ ಕರ್ಮಶಾಸ್ತ್ರದಂತೆ ಎಲ್ಲ ನಮಾಝ್‌ಗಳಲ್ಲೂ ಮುಕ್ತದೀಗಳು ಸೂರಃ ಫಾತಿಹಾ ಪಠಿಸಲೇ ಬೇಕು. ಝುಹರ್ ಮತ್ತು ಅಸರ್ ನಮಾಝ್‌ಗಳ ಮೊದಲ ಎರಡು ರಕಅತ್‌ಗಳಲ್ಲಿ ಫಾತಿಹಾದ ಜೊತೆಗೆ ಕುರ್‌ಆನಿನ ಯಾವುದಾದರೂ ಭಾಗವನ್ನೂ ಪಠಿಸಬೇಕು.

## 13. ತಡವಾಗಿ ಬಂದು ಸೇರುವವರು

ಜಮಾಅತ್ ನಡೆಯುತ್ತಿರುವಾಗ ಮುಕ್ತದೀಗಳು ಬಂದು ಸೇರಿಕೊಳ್ಳುವ ವಿಭಿನ್ನ ರೂಪಗಳು:

1) ಜಮಾಅತ್ ನಮಾಝ್ ಆರಂಭವಾದ ಬಳಿಕ ಯಾರಾದರೂ ಬಂದರೆ ಆಗ ಅವನು 'ಅಲ್ಲಾಹು ಅಕ್ಬರ್' ಎಂದು ಹೇಳಿ ಇಮಾಮ್ ಯಾವ ಸ್ಥಿತಿಯಲ್ಲಿದ್ದಾರೋ ಅವರೊಂದಿಗೆ ಸೇರಿಕೊಳ್ಳಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ನಮಾಝ್‌ಗೆ ಬಂದಾಗ ಇಮಾಮ್ ನಮಾಝ್ ಮಾಡಿಸುತ್ತಿದ್ದರೆ ಇಮಾಮ್ ಏನು ಮಾಡುತ್ತಾನೋ ಅದನ್ನೇ ಅವನೂ ಮಾಡಬೇಕು."

(ವರದಿ: ಹ. ಅಲೀ(ರ) ಮತ್ತು ಹ. ಮುಆದ್ ಬಿನ್ ಜಬಲ್(ರ)- ತಿರ್ಮಿದಿ)

ಹನಫೀ ಕರ್ಮಶಾಸ್ತ್ರದ ಪ್ರಕಾರ 'ಸುಬ್‌ಹಾನಕಲ್ಲಾಹುಮ್ಮ...' ಕೂಡಾ ಪಠಿಸಬೇಕು. ಸಿರ್ರೀ (ರಹಸ್ಯ) ನಮಾಝ್ ಆಗಿದ್ದರೆ ಕೂಡಲೇ ಮತ್ತು ಜಹ್ರೀ(ಬಹಿರಂಗ) ನಮಾಝ್ ಆಗಿದ್ದರೆ ಇಮಾಮ್ ಸಲಾಮ್ ಹೇಳಿದ ನಂತರ ಎದ್ದು ನಿಂತು ಅದನ್ನು ಪಠಿಸಬೇಕು.

2) ಹೆಚ್ಚಿನ ಕರ್ಮಶಾಸ್ತ್ರ ವಿದ್ವಾಂಸರ ಪ್ರಕಾರ ಒಬ್ಬನು ಇಮಾಮರ ಜೊತೆ ರುಕೂಅ್‌ನಲ್ಲಿ ಬಂದು ಸೇರಿದರೆ ಅವನಿಗೆ ಆ ರಕಅತ್ ಸಿಕ್ಕಿದಂತೆ. ಆದರೆ ರುಕೂಅ್‌ನ ನಂತರ ಇಅ್‌ತಿದಾಲ್ (ನಿಂತಿರುವ) ಮತ್ತು ಸುಜೂದ್‌ನ ಸ್ಥಿತಿಯಲ್ಲಿ ಯಾರಾದರೂ ಬಂದು ಸೇರಿದರೆ ಅದು ಅವನ ರಕಅತ್ ಎಂದು ಪರಿಗಣಿಸಲ್ಪಡುವುದಿಲ್ಲ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ನಮಾಝ್‌ನ ಕಡೆಗೆ ಬಂದಾಗ ನಾವು ಸುಜೂದ್‌ನಲ್ಲಿದ್ದರೆ ನೀವೂ ಸುಜೂದ್ ನಲ್ಲಿ ಸೇರಿಕೊಳ್ಳಿರಿ. ಆದರೆ ಅದನ್ನು ನಿಮ್ಮ ರಕಅತೆಂದು ಪರಿಗಣಿಸಬೇಡಿರಿ. ಯಾರಿಗೆ ರಕಅತ್ (ರುಕೂಅ್) ಸಿಕ್ಕಿತೋ ಅವನಿಗೆ ನಮಾಝ್(ರಕಅತ್) ಸಿಕ್ಕಿತು."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್, ಇಬ್ನು ಖುಝೈಮ, ಹಾಕಿಮ್)

3) ಒಬ್ಬ ವ್ಯಕ್ತಿಗೆ ಎಷ್ಟು ರಕಅತ್‌ಗಳು ಇಮಾಮ್‌ನ ಜತೆ ಸಿಗುತ್ತದೋ ಅವುಗಳನ್ನು ಇಮಾಮ್‌ನ ಜೊತೆ ನಿರ್ವಹಿಸಿ ಉಳಿದ ರಕಅತ್‌ಗಳನ್ನು ಇಮಾಮ್ ಸಲಾಮ್ ಹೇಳಿದ ಬಳಿಕ ಎದ್ದು ನಿಂತು ಪೂರ್ಣಗೊಳಿಸಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ಇಕಾಮತ್ ಕೇಳಿದರೆ ನಮಾಝ್‌ನ ಕಡೆಗೆ ಸಾವಧಾನದಿಂದ ಹೋಗಿರಿ, ಆತುರ ಪಡಬೇಡಿರಿ. ನಿಮಗೆ ಸಿಕ್ಕಿದಷ್ಟು ನಮಾಝ್ ಮಾಡಿರಿ. ಉಳಿದುದನ್ನು ಅನಂತರ ಪೂರ್ಣ ಗೊಳಿಸಿರಿ.

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಅಹ್ಮದ್, ನಸಾಈ)

ಹೆಚ್ಚಿನ ಕರ್ಮಶಾಸ್ತ್ರ ವಿದ್ವಾಂಸರ ಅಭಿಪ್ರಾಯದಂತೆ ಆತನು ಇಮಾಮ್‌ನ ಜತೆ ಮಾಡುವ ನಮಾಝ್ ಅವನ ನಮಾಝ್‌ನ ಮೊದಲ ಭಾಗವಾಗಿರುವುದು. ಇಮಾಮ್ ಸಲಾಮ್ ಹೇಳಿದ ನಂತರ ಆತನು ಎದ್ದು ನಿರ್ವಹಿಸುವ ನಮಾಝ್ ಆತನ ನಂತರದ ನಮಾಝ್ ಆಗಿರುವುದು. ಆದರೆ ಉಳಿದು ಹೋದ ಕುರ್‌ಆನಿನ ಭಾಗವನ್ನು ನಂತರದ ರಕಅತ್‌ಗಳಲ್ಲಿ ಪೂರ್ಣಗೊಳಿಸಬೇಕು. ಅರ್ಥಾತ್ ಒಬ್ಬನು ಝುಹರ್, ಅಸರ್ ಅಥವಾ ಇಶಾ ನಮಾಝ್‌ನ ಮೂರನೆಯ ರಕಅತ್‌ನಲ್ಲಿ ಬಂದು ಸೇರಿದರೆ ಆ ರಕಅತ್ ಮತ್ತು ಅದರ ನಂತರದ ರಕಅತ್ ಅವನ ಪ್ರಥಮ ಮತ್ತು ದ್ವಿತೀಯ ರಕಅತ್ ಆಗಿವೆ. ಅದೇ

ರೀತಿ ಅವನ ಮೂರನೆಯ ಮತ್ತು ನಾಲ್ಕನೆಯ ರಕಅತ್ ಅವನು ಇಮಾಮ್ ಸಲಾಮ್ ಹೇಳಿದ ನಂತರ ಎದ್ದು ನಿಂತು ಮಾಡುವುದೇ ಆಗಿದೆ. ಈ ರೀತಿ ಅವನು ಈ ಕೊನೆಯ ಎರಡು ರಕಅತ್‌ಗಳಲ್ಲಿ ಕೇವಲ ಸೂರಃ ಫಾತಿಹಾ ಪಠಿಸಿದರೆ ಸಾಕು. ಆದರೂ ಅವನು ಸೂರಃ ಫಾತಿಹಾದ ನಂತರ ಕುರ್‌ಆನಿನ ಇತರ ಯಾವುದಾದರೂ ಭಾಗವನ್ನು ಪಠಿಸಬೇಕು. ಅದೇ ರೀತಿ ಒಬ್ಬನು ಮಗ್ರಿಬ್‌ನ ಮೂರನೆಯ ರಕಅತ್‌ನಲ್ಲಿ ಬಂದು ಸೇರಿದರೆ ಇಮಾಮ್ ಸಲಾಮ್ ಹೇಳಿದ ಬಳಿಕ ಎದ್ದು ನಿಂತು ಮಾಡುವ ಎರಡು ರಕಅತ್‌ಗಳಲ್ಲಿ ಸೂರಃ ಫಾತಿಹಾದ ನಂತರ ಯಾವುದೇ ಇತರ ಸೂರಃ ಅಥವಾ ಕುರ್‌ಆನಿನ ಯಾವುದಾದರೂ ಭಾಗವನ್ನು ಪಠಿಸಬೇಕು. ಝುಹರ್, ಅಸರ್ ಅಥವಾ ಇಶಾ ನಮಾಝ್‌ನ ಎರಡನೆಯ ರಕಅತ್‌ನಲ್ಲಿ ಬಂದು ಸೇರುವವನು ಇಮಾಮ್ ಸಲಾಮ್ ಹೇಳಿದ ನಂತರ ಉಳಿಯುವ ಮೂರು ರಕಅತ್‌ಗಳಲ್ಲಿ ಪ್ರಥಮ ರಕಅತ್‌ನಲ್ಲಿ ಸೂರಃ ಫಾತಿಹಾದ ಜತೆಗೆ ಕುರ್‌ಆನಿನ ಯಾವುದಾದರೂ ಭಾಗವನ್ನು ಪಠಿಸಬೇಕು. ಇನ್ನುಳಿದ ಎರಡು ರಕಅತ್‌ಗಳಲ್ಲಿ ಕೇವಲ ಸೂರಃ ಫಾತಿಹಾ ಪಠಿಸಬೇಕು. ಇಮಾಮ್ ಶಾಫಿಈಯವರ(ರ) ಅಭಿಪ್ರಾಯವೂ ಇದುವೇ ಆಗಿದೆ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಮಧ್ಯದಲ್ಲಿ ಬಂದು ಜಮಾಅತ್‌ನಲ್ಲಿ ಸೇರಿಕೊಳ್ಳುವವನ ನಮಾಝ್‌ನ ಮೊದಲ ಭಾಗವು ಅವನ ಇಮಾಮ್ ಸಲಾಮ್ ಹೇಳಿದ ನಂತರ ಎದ್ದು ನಿಂತು ಮಾಡುವ ನಮಾಝ್ ಆಗಿದೆ ಮತ್ತು ಇಮಾಮರ ಜತೆ ಮಾಡುವ ನಮಾಝ್ ಅದರ ನಂತರದ ಭಾಗವಾಗಿರುವುದು.

### 14. ಇಮಾಮ್ ನಮಾಝ್‌ನ ಅಂಶವನ್ನು ತೊರೆದರೆ?

ನಮಾಝ್‌ನ ನಿಬಂಧನೆಗಳು ಅಥವಾ ಕಡ್ಡಾಯ ವಿಧಿಗಳ ಪೈಕಿ ಯಾವುದನ್ನಾದರೂ ಇಮಾಮ್ ತೊರೆದರೆ ಹಾಗೂ ಅದು ಅನುಯಾಯಿಗಳಿಗೆ ತಿಳಿಯದಿದ್ದು ಅವರು ನಮಾಝ್ ಪೂರ್ಣಗೊಳಿಸಿದರೆ ಅನುಯಾಯಿಗಳ ನಮಾಝ್ ಸಿಂಧುವಾಗುವುದು. ಇಮಾಮ್ ತನ್ನ ನಮಾಝನ್ನು ಪುನರಾವರ್ತಿಸಬೇಕಾದರೂ ಸರಿಯೇ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಜನರು ನಿಮಗೆ ನಮಾಝ್ ಮಾಡಿಸುತ್ತಾರೆ. ಅವರು ಸರಿಯಾಗಿ ನಮಾಝ್ ಮಾಡಿದರೆ ಅದು ಅವರಿಗೂ ನಿಮಗೂ ಸರಿಯಾಗಿರುವುದು. ಒಂದು ವೇಳೆ ಅವರು ತಪ್ಪು ಮಾಡಿದರೆ ನಿಮ್ಮ ನಮಾಝ್ ಸರಿಯಾಗುವುದು. ಅವರದ್ದು ಸರಿಯಾಗದು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಅಹ್ಮದ್)

"ಹ. ಉಮರ್(ರ) ಒಮ್ಮೆ ನೆನಪಿಲ್ಲದೆ ಜನಾಬತ್‌ನ ಸ್ಥಿತಿ (ಸ್ನಾನ ಕಡ್ಡಾಯವಾಗಿರುವ ಸ್ಥಿತಿ)ಯಲ್ಲಿ ಜನರಿಗೆ ನಮಾಝ್ ಮಾಡಿಸಿದರು. ನೆನಪಾದಾಗ ಅವರು ಪುನಃ ನಮಾಝ್ ಮಾಡಿದರು. ಆದರೆ ಜನರು ನಮಾಝ್ ಮಾಡಲಿಲ್ಲ."

(ನೈಲುಲ್ ಔತಾರ್- ಭಾಗ-3, ಪುಟ:147)

ಹನಫೀ ಕರ್ಮಶಾಸ್ತ್ರದ ಪ್ರಕಾರ ಅನುಯಾಯಿಗಳಿಗೆ ಆ ಬಳಿಕ ತಿಳಿದು ಬಂದರೆ ಅವರು ನಮಾಝ್ ಪುನರಾವರ್ತಿಸಬೇಕು.

## 15. ನಮಾಝ್‌ನ ಮಧ್ಯೆ ಇಮಾಮ್‌ಗೆ ಏನಾದರೂ ಆದರೆ?

ನಮಾಝ್‌ನ ಮಧ್ಯೆ ಇಮಾಮ್‌ಗೆ ಏನಾದರೂ ಆದರೆ ಉದಾಹರಣೆಗೆ ವುಝೂ ಭಂಗವಾದರೆ ಅಥವಾ ತನಗೆ ವುಝೂ ಇಲ್ಲವೆಂದು ಅವನಿಗೆ ನೆನಪಾದರೆ ಆತನು ಅಲ್ಲಿಂದ ಸರಿದು ಅನುಯಾಯಿಗಳ ಪೈಕಿ ಒಬ್ಬರನ್ನು ತನ್ನ ಸ್ಥಾನದಲ್ಲಿ ನಿಲ್ಲಿಸಬೇಕು. ಆ ವ್ಯಕ್ತಿ ಇಮಾಮ್ ಆಗಿ ಜಮಾಅತ್ ಮುಂದುವರಿಸಬೇಕು.

"ಹ. ಉಮರ್‌ರವರ(ರ) ಮೇಲೆ ಮಾರಣಾಂತಿಕ ದಾಳಿ ನಡೆದ ದಿನ ಫಜ್ರ್‌ನ ಮುಂದಿನ ಪಂಕ್ತಿಯಲ್ಲಿ ನಾನು ನಿಂತಿದ್ದೆ. ನನ್ನ ಮತ್ತು ಹ. ಉಮರ್‌ರ(ರ) ಮಧ್ಯೆ ಅಬ್ದುಲ್ಲಾ ಬಿನ್ ಅಬ್ಬಾಸ್‌ರ(ರ) ಹೊರತು ಇನ್ನಾರೂ ಇರಲಿಲ್ಲ. ಅವರು 'ಅಲ್ಲಾಹು ಅಕ್ಬರ್' ಎಂದು ಹೇಳಿದೊಡನೆ ಅವರ ಬಾಯಿಯಿಂದ ಈ ರೀತಿಯ ಮಾತು ಕೇಳಿ ಬಂತು- 'ನನ್ನನ್ನು ನಾಯಿ ಕೊಂದಿತು' ಅಥವಾ 'ನನ್ನನ್ನು ತಿಂದಿತು.' ಇದನ್ನು ಅವರು ತಮ್ಮ ಮೇಲೆ ದಾಳಿ ನಡೆದಾಗ ಹೇಳಿದ್ದರು. ಆಗಲೇ ಹ. ಉಮರ್(ರ), ಹ. ಅಬ್ದುರ್ರಹ್ಮಾನ್ ಬಿನ್ ಔಫ್‌ರನ್ನು(ರ) ಹಿಡಿದು ಮುಂದೆ ಮಾಡಿದರು. ಅವರು ಲಘುವಾದ ನಮಾಝ್ ಮಾಡಿಸಿದರು."

(ವರದಿ: ಹ. ಅಮ್ರ್ ಬಿನ್ ಮೈಮೂನ್(ರ)- ಬುಖಾರಿ)

"ಒಂದು ದಿನ ನಮಾಝ್ ಮಾಡಿಸುತ್ತಿರುವಾಗ ಹ. ಅಲೀಯವರ(ರ) ವುಝೂ ಭಂಗವಾಯಿತು. ಅವರು ಒಬ್ಬರ ಕೈ ಹಿಡಿದು ಮುಂದೆ ಮಾಡಿ ಅಲ್ಲಿಂದ ಸರಿದರು."

(ವರದಿ: ಹ. ಅಬೂ ರ್‍ಝೀನ್(ರ)- ಸುನನ್ ಸಈದ್ ಬಿನ್ ಮನ್ಸೂರ್)

ಇಂತಹ ಸಂದರ್ಭದಲ್ಲಿ ಜನರು ಬೇರೆ ಬೇರೆಯಾಗಿಯೂ ನಮಾಝ್ ಮಾಡ ಬಹುದೆಂದು ಇಮಾಮ್ ಶಾಫಿಈ(ರ) ಹೇಳುತ್ತಾರೆ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಬೇರೆ ಬೇರೆಯಾಗಿ ನಮಾಝ್ ಮಾಡಿದರೆ ಅದು ಸಿಂಧುವಾಗುವುದಿಲ್ಲ.

## 16. ನಮಾಝ್ ಮಾಡುತ್ತಿರುವಾಗ ಇಮಾಮ್ ಆಗಿ ಮಾರ್ಪಡುವುದು

ಒಬ್ಬನು ಒಂಟಿಯಾಗಿ ನಮಾಝ್ ಮಾಡುತ್ತಿರುವಾಗ ಅವನ ಜತೆ ಇತರರು ಬಂದು ಸೇರಿಕೊಂಡರೆ ಜಮಾಅತ್ ಆಗುತ್ತದೆ.

"ನಾನು ಒಂದು ರಾತ್ರಿ ನನ್ನ ಮಾತೃ ಸೋದರಿ ಮೈಮೂನರವರ(ರ) ಮನೆಯಲ್ಲಿ ಮಲಗಿದ್ದೆ. ರಾತ್ರಿ ಪ್ರವಾದಿವರ್ಯರು(ಸ) ಎದ್ದು ನಮಾಝ್ ಮಾಡಲು ಆರಂಭಿಸಿದಾಗ ನಾನೂ ಅವರ ಜತೆ ಸೇರಿಕೊಂಡೆ."

(ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜ:)

"ಒಬ್ಬನು ಒಂಟಿಯಾಗಿ ನಮಾಝ್ ಮಾಡುತ್ತಿರುವುದನ್ನು ಪ್ರವಾದಿ(ಸ) ಕಂಡಾಗ-ಇವನಿಗೆ 'ಸದಕಾ'(ದಾನ) ನೀಡುವವರು ಮತ್ತು ಇವನ ಜತೆ ನಮಾಝ್ ಮಾಡುವವರು ಯಾರಾದರೂ ಇರುವರೇ? ಎಂದು ಹೇಳಿದರು."

(ವರದಿ: ಹ. ಅಬೂ ಸಈದ್(ರ)- ಅಬೂ ದಾವೂದ್, ಮುಸ್ಲಿಮ್)

ಇಮಾಮ್ ಶಾಫಿಈಯವರ(ರ) ಪ್ರಕಾರ ಜುಮಾದ ಹೊರತು ಇತರೆಲ್ಲ ನಮಾಝ್‌ಗೆ ಈ ನಿಯಮ ಅನ್ವಯವಾಗುತ್ತದೆ.

ಹನಫೀ ಕರ್ಮಶಾಸ್ತ್ರದ ಪ್ರಕಾರ ಪುರುಷರು ನಮಾಝ್ ಮಾಡುತ್ತಿದ್ದರೆ ಸ್ತ್ರೀಯರು ಅವನನ್ನು ಅನುಗಮಿಸುವಂತಿಲ್ಲ. ಏಕೆಂದರೆ ಮಹಿಳೆಯರ ಇಮಾಮತ್‌ಗೆ ಪುರುಷನು ಆರಂಭದಲ್ಲೇ ನಿಯ್ಯತ್ ಮಾಡಬೇಕಾಗುತ್ತದೆ.

## 17. ಒಮ್ಮೆ ಕಡ್ಡಾಯ ನಮಾಝ್ ಮಾಡಿದವನು ಜಮಾಅತ್‌ನಲ್ಲಿ ಶಾಮೀಲಾಗುವುದು

ಒಮ್ಮೆ ಒಂಟಿಯಾಗಿ ನಮಾಝ್ ಮಾಡಿರುವವರು ಮಸೀದಿಗೆ ಬಂದಾಗ ಅಲ್ಲಿ ನಮಾಝ್‌ನ ಜಮಾಅತ್ ನಡೆಯುತ್ತಿದ್ದರೆ ಆತನು ನಫಿಲ್(ಐಚ್ಛಿಕ) ನಮಾಝ್‌ನ ನಿಯ್ಯತ್ ಮಾಡಿ ಜಮಾಅತ್‌ನೊಂದಿಗೆ ಸೇರಿಕೊಳ್ಳಬೇಕು.

"ನಾನು ಹಜ್ಜ್‌ನಲ್ಲಿ ಪ್ರವಾದಿವರ್ಯರ(ಸ) ಜತೆಗಿದ್ದೆ. ನಾನು ಫಜ್ರ್ ನಮಾಝ್ ಅವರ(ಸ) ಜತೆ ಖೈಫ್ ಮಸೀದಿಯಲ್ಲಿ ನಿರ್ವಹಿಸಿದೆ. ಪ್ರವಾದಿವರ್ಯರು(ಸ) ಸಲಾಮ್ ಹೇಳಿದಾಗ ತಮ್ಮ ಹಿಂದೆ ನಮಾಝ್ ಮಾಡದೆ ಇಬ್ಬರು ನಿಂತಿರುವುದನ್ನು ಕಂಡರು. 'ಅವರಿಬ್ಬರನ್ನೂ ನನ್ನ ಬಳಿಗೆ ತನ್ನಿ' ಎಂದು ಪ್ರವಾದಿ(ಸ) ಆದೇಶಿಸಿದರು. ಅವರು ಬಂದಾಗ ಹೆದರಿ ಕಂಪಿಸುತ್ತಿದ್ದರು. ಪ್ರವಾದಿವರ್ಯರಲ್ಲಿ(ಸ) ಹೀಗೆ ವಿಚಾರಿಸಿದರು- ನೀವು ನಮ್ಮೊಂದಿಗೆ ನಮಾಝ್ ಏಕೆ ಮಾಡಲಿಲ್ಲ. ಆಗ ಅವರು- ಪ್ರವಾದಿವರ್ಯರೇ! ನಾವು ನಮ್ಮ ಮನೆಗಳಲ್ಲಿ ನಮಾಝ್ ಮಾಡಿ ಬಂದಿದ್ದೆವು ಎಂದರು. ಅದಕ್ಕೆ ಪ್ರವಾದಿ(ಸ) ಹೇಳಿದರು- ಹಾಗೆ ಮಾಡಬೇಡಿರಿ. ನೀವು ನಿಮ್ಮ ಮನೆಗಳಲ್ಲಿ ನಮಾಝ್ ಮಾಡಿ ಮಸೀದಿಗೆ ಬಂದಾಗ ಅಲ್ಲಿ ನಮಾಝ್ ಆಗುತ್ತಿದ್ದರೆ ಜಮಾಅತ್‌ನಲ್ಲಿ ಶಾಮೀಲಾಗಿರಿ. ಈ ನಮಾಝ್ ನಿಮಗೆ ನಫಿಲ್ ಆಗುವುದು."

(ವರದಿ: ಹ. ಯಝೀದ್ ಬಿನ್ ಅಸ್ವದ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ದಾರಕುತ್ನಿ, ಇಬ್ನು ಹಿಬ್ಬಾನ್, ಹಾಕಿಮ್)

ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಫಜ್ರ್, ಅಸರ್ ಮತ್ತು ಮಗ್ರಿಬ್ ನಮಾಝನ್ನು ಈ ರೀತಿ ಪುನರಾವರ್ತಿಸಬಾರದು.

### 18. ಇಮಾಮ್‌ನ ತಕ್ಬೀರ್ ಧ್ವನಿಯನ್ನು ಅನುಯಾಯಿಗಳಿಗೆ ತಲಪಿಸುವುದು

"ಪ್ರವಾದಿ(ಸ) ಒಮ್ಮೆ ಕುಳಿತುಕೊಂಡು ನಮಾಝ್ ಮಾಡಿಸಿದರು. ಅವರು ತಮ್ಮ ಜೀವಮಾನದ ಕೊನೆಯಲ್ಲೂ ಕಾಯಿಲೆ ಪೀಡಿತರಾಗಿದ್ದುದರಿಂದ ಅವರ ಸ್ವರವೂ ಕ್ಷೀಣಿಸಿತ್ತು. ಆದ್ದರಿಂದ ಹ. ಅಬೂಬಕರ್(ರ), ಪ್ರವಾದಿವರ್ಯರ(ಸ) ತಕ್ಬೀರನ್ನು ಪುನರಾವರ್ತಿಸುತ್ತಿದ್ದರು. ಜನರು ಹ. ಅಬೂಬಕರ್‌ರವರ(ರ) ತಕ್ಬೀರ್ ಕೇಳಿ ಅದನ್ನು ಅನುಸರಿಸುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

### 19. ಒಂದು ಜಮಾಅತ್ ಆದ ಬಳಿಕ ಇನ್ನೊಂದು ಜಮಾಅತ್

ಕಾರಣಾಂತರಗಳಿಂದ ಜಮಾಅತ್ ಮುಗಿದ ನಂತರ ಯಾರಾದರೂ ಮಸೀದಿಗೆ ತಲುಪಿದರೆ ಅವರು ಇನ್ನೊಂದು ಜಮಾಅತ್ ಮಾಡಿ ನಮಾಝ್ ನಿರ್ವಹಿಸಬಹುದು.

"ಹ. ಅನಸ್(ರ) ಒಂದು ಮಸೀದಿಗೆ ಹೋದರು. ಅಲ್ಲಿ ನಮಾಝ್ ಆಗಿತ್ತು. ಹ. ಅನಸ್(ರ) ಅದಾನ್ ಮತ್ತು ಇಕಾಮತ್ ಹೇಳಿ ಜಮಾಅತ್ ಸಹಿತ ನಮಾಝ್ ಮಾಡಿದರು."

(ಬುಖಾರಿ)

"ಜನರು ನಮಾಝ್ ಮಾಡಿ ಆದ ಬಳಿಕ ಒಬ್ಬರು ಮಸೀದಿಗೆ ಬಂದರು. ಈ ವ್ಯಕ್ತಿಗೆ ಸದಕ(ದಾನ) ನೀಡುವವರು ಯಾರಿದ್ದಾರೆ? ಎಂದು ಪ್ರವಾದಿ(ಸ) ಕೇಳಿದರು. ಆಗ ಓರ್ವ ವ್ಯಕ್ತಿ ಎದ್ದು ನಿಂತರು. ಅವರ ಜತೆ ನಮಾಝ್ ಮಾಡಿದರು."

(ವರದಿ: ಹ. ಅಬೂ ಸಈದ್(ರ)- ಅಬೂ ದಾವೂದ್, ತಿರ್ಮಿದಿ)

ಈ ಜಮಾಅತ್‌ಗೆ ಇಕಾಮತ್ ಮತ್ತು ಅದಾನ್ ಕೊಟ್ಟರೂ ಕೊಡದಿದ್ದರೂ ಸರಿಯೇ.

ಹನಫೀ ಕ್ರಮದಂತೆ ಇಮಾಮ್ ನೇಮಕಗೊಳ್ಳದಿರುವ ಮಸೀದಿಯಲ್ಲಿ ಇನ್ನೊಂದು ಜಮಾಅತ್ ಮಾಡಬಹುದು. ಇಮಾಮ್ ನೇಮಕಗೊಂಡಿರುವ ಮಸೀದಿಯಲ್ಲಿ ಎರಡನೆಯ ಜಮಾಅತ್ ಪ್ರಥಮ ಜಮಾಅತ್‌ನ ರೂಪದಲ್ಲೇ ಇರಬಾರದು. ಪ್ರಥಮ ಜಮಾಅತ್ ಮಿಹ್ರಾಬ್‌ನಲ್ಲಿ ಆಗಿದ್ದರೆ ದ್ವಿತೀಯ ಜಮಾಅತ್ ಅದರಿಂದ ಸ್ವಲ್ಪದೂರ ನೆರವೇರಿಸಬಹುದು.

ಶಾಫಿಈ ಕ್ರಮದಂತೆ ಇಮಾಮ್ ನೇಮಕಗೊಂಡಿರುವ ಮಸೀದಿಯಲ್ಲಿ ಎರಡನೆಯ ಜಮಾಅತ್ ಆ ಇಮಾಮರ ಅನುಮತಿಯಿಂದಲೇ ಆಗಬೇಕು. ಅನ್ಯಥಾ ಅದು ಮಕ್ರೂಹ್ (ಅನಪೇಕ್ಷಿತ) ಆಗುತ್ತದೆ.

◈

# ಐಚ್ಛಿಕ ನಮಾಝ್

## ಮಹತ್ವ

ಕಡ್ಡಾಯ ನಮಾಝ್‌ಗಳನ್ನು ನೆರವೇರಿಸುವಲ್ಲಿ ಏನಾದರೂ ಲೋಪದೋಷ ಉಂಟಾಗಿದ್ದರೆ ಅದನ್ನು ನಿವಾರಿಸಲಿಕ್ಕಾಗಿ ಕೆಲವು ಐಚ್ಛಿಕ ನಮಾಝ್‌ಗಳನ್ನು ಗೊತ್ತು ಪಡಿಸಲಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಜನರ ಕರ್ಮಗಳ ಪೈಕಿ ಮೊಟ್ಟ ಮೊದಲು ನಮಾಝ್‌ನ ಕುರಿತು ವಿಚಾರಣೆ ನಡೆಯುವುದು. ಅಲ್ಲಾಹನು ಸ್ವಯಂ ತಿಳಿದಿದ್ದೂ ತನ್ನ ಮಲಕ್‌ಗಳೊಂದಿಗೆ ಹೀಗೆ ಕೇಳುವನು- ನನ್ನ ದಾಸನ ನಮಾಝನ್ನು ನೋಡಿರಿ. ಅವನು ಅದನ್ನು ಪೂರ್ಣಗೊಳಿಸಿರುವನೇ ಅಥವಾ ಅದರಲ್ಲೇನಾದರೂ ಕೊರತೆಯಿದೆಯೇ? ಪೂರ್ಣವಾಗಿದ್ದರೆ ಅದನ್ನು ಸಂಪೂರ್ಣವಾಗಿ ಬರೆಯಲಾಗುವುದು. ಅದರಲ್ಲೇನಾದರೂ ಕೊರತೆಯಿದ್ದರೆ ಅಲ್ಲಾಹನು ಹೀಗೆ ಹೇಳುವನು- ಈ ದಾಸನ ಕಡ್ಡಾಯವಲ್ಲದ ನಮಾಝ್ ಏನಾದರೂ ಇದೆಯೇ ಎಂದು ನೋಡಿರಿ. ಒಂದು ವೇಳೆ ಇದ್ದರೆ ಅಲ್ಲಾಹನು ಈ ರೀತಿ ಆದೇಶಿಸುವನು- ನನ್ನ ದಾಸನ ಕಡ್ಡಾಯ ನಮಾಝ್‌ನ ಕೊರತೆಯನ್ನು ಹೆಚ್ಚುವರಿ ನಮಾಝ್‌ನಿಂದ ಭರ್ತಿಗೊಳಿಸಿರಿ. ಅನಂತರ ಇದೇ ರೀತಿ ಎಲ್ಲ ಕರ್ಮಗಳ ಸಮೀಕ್ಷೆ ನಡೆಯುವುದು." (ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)

"ಪ್ರವಾದಿ(ಸ) ನನ್ನಲ್ಲಿ ಹೇಳಿದರು- 'ಬೇಡಿರಿ.' ನಾನು ಈ ರೀತಿ ಅರಿಕೆ ಮಾಡಿದೆ-ನಾನು ಸ್ವರ್ಗದಲ್ಲಿ ತಮ್ಮ ಸಾಮೀಪ್ಯವನ್ನು ಬಯಸುತ್ತೇನೆ. ಆಗ ಪ್ರವಾದಿ(ಸ) ಕೇಳಿದರು- ಇನ್ನೇನಾದರೂ ಬಯಸುತ್ತೀರಾ? ನಾನು ನಿವೇದಿಸಿದೆ- ಇದು ಮಾತ್ರ ನನ್ನ ಕೋರಿಕೆಯಾಗಿದೆ. ಅದಕ್ಕೆ ಪ್ರವಾದಿ(ಸ) ಹೀಗೆ ಹೇಳಿದರು- ನೀವು ಸುಜೂದ್‌ಗಳನ್ನು ಹೆಚ್ಚು ಮಾಡುವ ಮೂಲಕ ನಿಮ್ಮ ಚಿತ್ತಕ್ಕೆ ಎದುರಾಗಿ ನನಗೆ ನೆರವಾಗಿರಿ." (ವರದಿ: ರಬೀಅ ಬಿನ್ ಮಾಲಿಕ್ ಅಸ್ಲಮೀ(ರ)- ಮುಸ್ಲಿಮ್)

## ಸುನ್ನತ್ ಮತ್ತು ನಫಿಲ್ ನಮಾಝ್‌ನ ವಿಧಿಗಳು:

**1. ಅವುಗಳನ್ನು ಮನೆಯಲ್ಲಿ ನಿರ್ವಹಿಸುವುದು ಉತ್ತಮವಾಗಿದೆ.**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಒಬ್ಬನು ಮಸೀದಿಯಲ್ಲಿ ನಮಾಝ್ ಮಾಡಿದರೆ ಅವನು ತನ್ನ

ನಮಾಝ್‌ನ ಒಂದಂಶವನ್ನು ಮನೆಗಾಗಿ ಕಾದಿರಿಸಲಿ. ಏಕೆಂದರೆ ಅಲ್ಲಾಹನು ಅವನ ನಮಾಝ್‌ನ ಮೂಲಕ ಅವನ ಮನೆಯಲ್ಲಿ ಒಳಿತು ಮತ್ತು ಸಮೃದ್ಧಿ ಉಂಟು ಮಾಡುವನು."

(ವರದಿ: ಹ. ಜಾಬಿರ್(ರ)- ಅಹ್ಮದ್, ಮುಸ್ಲಿಮ್)

"ನಿಮ್ಮ ನಮಾಝ್‌ಗಳ ಒಂದಂಶವನ್ನು ನಿಮ್ಮ ಮನೆಗಳಲ್ಲಿ ನಿರ್ವಹಿಸಿರಿ ಮತ್ತು ಮನೆಗಳನ್ನು ಸ್ಮಶಾನವಾಗಿ ಮಾಡಬೇಡಿರಿ."

(ವರದಿ: ಹ. ಝೈದ್ ಬಿನ್ ಸಾಬಿತ್(ರ)- ಅಬೂ ದಾವೂದ್)

**2. ಹೆಚ್ಚು ಸುಜೂದ್ ಮಾಡುವುದಕ್ಕಿಂತ ದೀರ್ಘವಾಗಿ ಕುರ್‌ಆನ್ ಪಠಿಸುವುದು ಉತ್ತಮವಾಗಿದೆ.**

"ಕಿಯಾಮುಲ್ಲೈಲ್(ರಾತ್ರಿಯ ನಮಾಝ್)ನಲ್ಲಿ ಪ್ರವಾದಿ(ಸ) ತಮ್ಮ ಕಾಲುಗಳು ಬಾತು ಹೋಗುವಷ್ಟು ದೀರ್ಘವಾಗಿ ನಿಲ್ಲುತ್ತಿದ್ದರು. ಸಹಾಬಿಗಳು ತಾವೇಕೆ ಇಷ್ಟು ತ್ರಾಸ ತೆಗೆದುಕೊಳ್ಳುತ್ತಿರುವಿರೆಂದು ಕೇಳಿದಾಗ- ನಾನು ಅಲ್ಲಾಹನ ಕೃತಜ್ಞ ದಾಸನಾಗುವುದು ಬೇಡವೇ? ಎನ್ನುತ್ತಿದ್ದರು."

(ವರದಿ: ಹ. ಮುಗೀರಾ ಬಿನ್ ಶುಅ್‌ಬಾ(ರ)- ಬುಖಾರಿ, ಮುಸ್ಲಿಮ್,
ಅಹ್ಮದ್, ತಿರ್ಮಿಧಿ, ನಸಾಈ, ಇಬ್ನು ಮಾಜಃ)

"ಅತ್ಯುತ್ತಮ ಕಾರ್ಯ ಯಾವುದು ಎಂದು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದಾಗ ಅವರು- ನಮಾಝ್‌ನಲ್ಲಿ ದೀರ್ಘ ಹೊತ್ತು ನಿಲ್ಲುವುದು ಎಂದರು."

(ವರದಿ: ಹ. ಅಬ್ದುಲ್ಲಾ ಬಿನ್ ಹಬ್‌ಶೀ ಖಶ್‌ಅಮಿ(ರ)- ಅಬೂ ದಾವೂದ್)

**3. ಕುಳಿತುಕೊಂಡು ನಿರ್ವಹಿಸುವುದು.**

ಸಾಮರ್ಥ್ಯ ಉಳ್ಳವರು ಫರ್ಝ್(ಕಡ್ಡಾಯ) ನಮಾಝ್‌ಗಳನ್ನು ನಿಂತುಕೊಂಡೇ ನಿರ್ವಹಿಸುವುದು ಕಡ್ಡಾಯವಾಗಿದೆ. ಆದರೆ ಸುನ್ನತ್-ನಫಿಲ್ ನಮಾಝ್‌ಗಳನ್ನು ನಿಂತು ಕೊಳ್ಳುವ ಸಾಮರ್ಥ್ಯವಿದ್ದೂ ಕುಳಿತುಕೊಂಡು ನಿರ್ವಹಿಸಬಹುದು ಎಂದು ಇಮಾಮ್ ಶಾಫಿಈ(ರ) ಹೇಳುತ್ತಾರೆ. ಆದರೆ ಹನಫೀ ಕರ್ಮಶಾಸ್ತ್ರದಂತೆ ವಿತ್ರ್, ಫಜ್ರ್‌ನ ಸುನ್ನತ್ ಮತ್ತು ಹರಕೆಯ ನಮಾಝ್‌ಗಳನ್ನು ನಿಂತುಕೊಂಡೇ ನಿರ್ವಹಿಸಬೇಕು.

ಕುಳಿತುಕೊಂಡು ಮಾಡುವ ನಮಾಝ್‌ಗೆ ನಿಂತುಕೊಂಡು ಮಾಡುವ ನಮಾಝ್‌ನ ಅರ್ಧದಷ್ಟು ಪುಣ್ಯಫಲ ಮಾತ್ರ ಸಿಗುವುದು.

ಪ್ರವಾದಿ(ಸ) ಹೀಗೆ ಹೇಳಿರುವರು ಎಂದು ನನಗೆ ತಿಳಿಸಲಾಯಿತು- "ಕುಳಿತುಕೊಂಡು ಮಾಡುವ ನಮಾಝ್ ಅರ್ಧ ನಮಾಝ್‌ಗೆ ಸಮ."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಬುಖಾರಿ)

ಸುನ್ನತ್ ಮತ್ತು ನಫಿಲ್ ನಮಾಝ್‌ನ ಸ್ವಲ್ಪ ಭಾಗವನ್ನು ನಿಂತು ಮತ್ತು ಸ್ವಲ್ಪ ಭಾಗವನ್ನು ಕುಳಿತುಕೊಂಡು ನಿರ್ವಹಿಸುವುದು ಕೂಡಾ ಧರ್ಮಸಮ್ಮತವಾಗಿದೆ.

"ಪ್ರವಾದಿವರ್ಯರು(ಸ) ವೃದ್ಧರಾಗುವ ತನಕ ಅವರನ್ನು ಕುಳಿತುಕೊಂಡು ಕಿರಾಅತ್ ಮಾಡುವುದಾಗಿ ನಾನು ಕಂಡಿರಲಿಲ್ಲ. ವೃದ್ಧರಾದಾಗ ಅವರು ಕುಳಿತುಕೊಂಡು ಕಿರಾಅತ್ ಮಾಡುತ್ತಿದ್ದರು. 40 ಅಥವಾ 30 ಆಯತ್‌ಗಳು ಉಳಿದಿರುವಾಗ, ಪ್ರವಾದಿ(ಸ) ಎದ್ದು ನಿಂತುಕೊಂಡು ಅದನ್ನು ಪಠಿಸುತ್ತಿದ್ದರು. ಆ ಬಳಿಕವೇ ಸುಜೂದ್ ಮಾಡುತ್ತಿದ್ದರು."

(ವರದಿ: ಹ.ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

**4. ವಿಧಗಳು.**

ಫರ್ಳ್(ಕಡ್ಡಾಯ)ನ ಹೊರತಾಗಿರುವ ನಮಾಝ್‌ಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದು- ಒಂದು ನಿಶ್ಚಿತ. ಇನ್ನೊಂದು ಅನಿಶ್ಚಿತ. ಅನಿಶ್ಚಿತ ನಮಾಝ್ ಎಂದರೆ ನಮಾಝ್ ನಿಷಿದ್ಧವಲ್ಲದ ಯಾವ ಸಮಯದಲ್ಲಿ ಎಷ್ಟು ಬೇಕಾದರೂ ನಿರ್ವಹಿಸಬಹುದಾದ ನಮಾಝ್ ಆಗಿದೆ.

ನಿಶ್ಚಿತ ನಮಾಝ್ ಎಂದರೆ ಸಮಯ, ರಕಅತ್ ಇತ್ಯಾದಿಗಳು ಪ್ರವಾದಿವರ್ಯರಿಂದ ನಿಶ್ಚಯಿಸಲ್ಪಟ್ಟ ನಮಾಝ್‌ಗಳಾಗಿವೆ. ಅವುಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದು- ಒಂದನೆಯದು, ಫರ್ಳ್ ನಮಾಝ್‌ಗಳ ಜೊತೆಗೆ (ಮೊದಲು ಅಥವಾ ನಂತರ) ಮಾಡುವ ನಮಾಝ್. ಎರಡನೆಯದಾಗಿ ಇತರ ಸಮಯ ಮತ್ತು ಸಂದರ್ಭಗಳಲ್ಲಿ ಮಾಡುವ ನಮಾಝ್.

## ಫರ್ಳ್ ನಮಾಝ್‌ನ ಜತೆಯ ಸುನ್ನತ್‌ಗಳು

ಫರ್ಳ್ ನಮಾಝ್‌ನ ಮೊದಲು ಅಥವಾ ನಂತರ ಮಾಡುವ ಸುನ್ನತ್ ನಮಾಝ್‌ಗಳಲ್ಲಿ ಎರಡು ವಿಧಗಳಿವೆ-

ಒಂದು ರವಾತಿಬ್ ಸುನ್ನತ್(ಮುಅಕ್ಕದಃ) ಇನ್ನೊಂದು ಗೈರು ರವಾತಿಬ್ ಸುನ್ನತ್(ಗೈರು ಮುಅಕ್ಕದಃ)

### ರವಾತಿಬ್ ಸುನ್ನತ್‌ಗಳು

**1. ಫಜ್ರ್‌ನ ಸುನ್ನತ್:** ಫಜ್ರ್‌ನ ಸುನ್ನತ್ ಎರಡು ರಕಅತ್‌ಗಳಾಗಿವೆ. ಅದನ್ನು ಫಜ್ರ್ ನಮಾಝ್‌ನ ಮೊದಲು ನಿರ್ವಹಿಸಬೇಕು. ಇದು ಬಹಳ ಮಹತ್ವಪೂರ್ಣ ಸುನ್ನತ್ ಆಗಿದೆ. ಈ ಬಗ್ಗೆ ಅನೇಕ ಹದೀಸ್‌ಗಳಿವೆ. ಅವುಗಳ ಪೈಕಿ ಎರಡನ್ನು ಇಲ್ಲಿ ಉಲ್ಲೇಖಿಸಲಾಗಿದೆ-

ಪ್ರವಾದಿ ಮುಹಮ್ಮದ್(ಸ) ಈ ರೀತಿ ಹೇಳಿರುವರು:

"ಈ ಎರಡು ರಕಅತ್‌ಗಳು ನನಗೆ ಇಡೀ ಲೋಕಕ್ಕಿಂತ ಹೆಚ್ಚು ಪ್ರಿಯವಾಗಿವೆ."

(ವರದಿ: ಹ. ಆಯಿಶಾ(ರ)- ಅಹ್ಮದ್, ಮುಸ್ಲಿಮ್, ತಿರ್ಮಿದಿ)

"ಪ್ರವಾದಿ(ಸ) ಫಜ್ರ್‌ನ ಸುನ್ನತ್‌ಗಿಂತ ಹೆಚ್ಚು ಯಾವ ಸುನ್ನತ್ ನಮಾಝನ್ನೂ ಪಾಲಿಸುತ್ತಿರಲಿಲ್ಲ." (ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್)

ಫಜ್ರ್‌ನ ಸುನ್ನತ್ ನಮಾಝನ್ನು ಪ್ರವಾದಿ(ಸ) ಬಹಳ ಲಘುವಾಗಿ ನಿರ್ವಹಿಸುತ್ತಿದ್ದರೆಂದು ಅನೇಕ ಹದೀಸ್‌ಗಳಲ್ಲಿದೆ. ಸಮಯಾವಕಾಶವಿದ್ದರೆ ದೀರ್ಘ ಕಿರಾಅತ್ ಮಾಡುವುದು ಆಕ್ಷೇಪಾರ್ಹವಲ್ಲವೆಂದು ಇಮಾಮ್ ಅಬೂ ಹನೀಫಾರ(ರ) ಅಭಿಮತ.

ಫಜ್ರ್‌ನ ಸುನ್ನತ್‌ನಲ್ಲಿ ಪ್ರವಾದಿವರ್ಯರು(ಸ) ಪಠಿಸಿದ ಸೂರಃ ಮತ್ತು ಆಯತ್‌ಗಳನ್ನೇ ಪಠಿಸುವುದು ಉತ್ತಮವಾಗಿದೆ.

"ಪ್ರವಾದಿ(ಸ) ಫಜ್ರ್‌ನ ಸುನ್ನತ್‌ನಲ್ಲಿ 'ಕುಲ್ ಯಾ ಅಯ್ಯುಹಲ್ ಕಾಫಿರೂನ್' ಮತ್ತು 'ಕುಲ್ ಹುವಲ್ಲಾಹು ಅಹದ್' ಪಠಿಸುತ್ತಿದ್ದರು ಹಾಗೂ ಅವುಗಳನ್ನು ಮೆಲುದನಿಯಲ್ಲಿ ಪಠಿಸುತ್ತಿದ್ದರು." (ವರದಿ: ಹ. ಆಯಿಶಾ(ರ)- ಅಹ್ಮದ್, ತಹಾವೀ)

"ಪ್ರವಾದಿ(ಸ) ಫಜ್ರ್‌ನ ಸುನ್ನತ್‌ನಲ್ಲಿ 'ಕೂಲೂ ಆಮನ್ನಾ ಬಿಲ್ಲಾಹಿ ವಮಾ ಉನ್‌ಝಿಲ ಇಲೈನಾ' ಮತ್ತು ಸೂರಃ ಆಲಿ ಇಮ್ರಾನ್‌ನ 'ತಆಲೌ ಇಲಾ ಕಲಿಮತಿವ್ ಸವಾಯಿನ್ ಬೈನನಾ ವಬೈನಕುಮ್' ಎಂಬ ಸೂಕ್ತಗಳನ್ನು ಪಠಿಸುತ್ತಿದ್ದರು."

(ವರದಿ: ಹ. ಇಬ್ನು ಅಬ್ಬಾಸ್(ರ)- ಮುಸ್ಲಿಮ್)

ಫಜ್ರ್‌ನ ಸುನ್ನತ್ ನಮಾಝನ್ನು ಒಂದು ವೇಳೆ ಜಮಾಅತ್‌ಗಿಂತ ಮೊದಲು ನಿರ್ವಹಿಸಲು ಸಾಧ್ಯವಾಗದಿದ್ದರೆ ಅದನ್ನು ಜಮಾಅತ್‌ನ ನಂತರ ನಿರ್ವಹಿಸಬಹುದೆಂದು ಶಾಫಿಈ ಕರ್ಮಶಾಸ್ತ್ರದ ಅಭಿಮತವಾಗಿದೆ. ಆದರೆ ಹನಫೀ ಕ್ರಮದಂತೆ ಫಜ್ರ್‌ನ ಸುನ್ನತ್ ನಮಾಝನ್ನು ಬೆಳಗ್ಗಿನ ಆರಂಭದ ವೇಳೆಯಲ್ಲಿ ಮನೆಯಲ್ಲಿ ನಿರ್ವಹಿಸುವುದು ಉತ್ತಮವಾಗಿದೆ. ಒಬ್ಬನು ಸುನ್ನತ್ ನಮಾಝ್ ಮಾಡಿರಲಿಲ್ಲ ಮತ್ತು ಜಮಾಅತ್ ಆರಂಭವಾಯಿತು ಎಂದಾದರೆ ಸುನ್ನತ್ ನಮಾಝ್ ಮಾಡಿದ ನಂತರ ಜಮಾಅತ್‌ನಲ್ಲಿ ಸೇರಿಕೊಳ್ಳುವುದು ಸಾಧ್ಯವೇ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಜಮಾಅತ್‌ನಲ್ಲಿ ಸೇರಿಕೊಳ್ಳಬಹುದೆಂದಾದರೆ ಸುನ್ನತ್ ನಮಾಝ್ ಮಾಡಿಯೇ ಜಮಾಅತ್‌ಗೆ ಸೇರಿಕೊಳ್ಳಬೇಕು. ಒಂದು ವೇಳೆ ಅದು ಸಾಧ್ಯವಾಗದು ಎಂದು ಕಂಡುಬಂದರೆ ಆತನು ಸುನ್ನತ್ ನೆರವೇರಿಸಬೇಕಾಗಿಲ್ಲ. ಏಕೆಂದರೆ ಫಜ್ರ್‌ನ ಸುನ್ನತ್ ಫರ್ಝ್‌ಗಿಂತ ಮೊದಲೇ ನಿರ್ವಹಿಸುವಂತಹದಾಗಿದ್ದು ಅದನ್ನು ಫಜ್ರ್‌ನ ನಂತರವಾಗಲೀ ಸೂರ್ಯಾಸ್ತಮಾನದ ನಂತರವಾಗಲೀ ನಿರ್ವಹಿಸುವಂತಿಲ್ಲ.

**2. ಝುಹರ್‌ನ ಸುನ್ನತ್:** ಹದೀಸ್‌ಗಳಲ್ಲಿ ಝುಹರ್‌ನ ಸುನ್ನತ್‌ಗಳ ಸಂಖ್ಯೆ ಆರೂ ಇದೆ, ನಾಲ್ಕೂ ಇದೆ. ಕೆಲವು ವರದಿಗಳ ಪ್ರಕಾರ ಝುಹರ್‌ನ ಫರ್ಝ್ ನಮಾಝ್‌ಗಿಂತ ಮುಂಚೆ ಎರಡು ಮತ್ತು ನಂತರ ಎರಡು ರಕಅತ್ ಸುನ್ನತ್‌ಗಳಿವೆ.

"ನನಗೆ ಪ್ರವಾದಿವರ್ಯರು(ಸ) ಹತ್ತು ರಕಅತ್‌ಗಳನ್ನು ನಿರ್ವಹಿಸಿದ ನೆನಪಿದೆ. ಎರಡು ಝುಹರ್‌ಗೆ ಮುಂಚೆ, ಎರಡು ಝುಹರ್‌ನ ನಂತರ. ಎರಡು ಮಗ್ರಿಬ್‌ನ ನಂತರ ತಮ್ಮ ಮನೆಯಲ್ಲಿ. ಎರಡು ಇಶಾದ ನಂತರ ತಮ್ಮ ಮನೆಯಲ್ಲಿ ಮತ್ತು ಎರಡು ಫಜ್ರ್ ನಮಾಝ್‌ಗೆ ಮುಂಚೆ." (ವರದಿ: ಹ. ಇಬ್ನು ಉಮರ್(ರ)- ಬುಖಾರಿ)

ಇನ್ನು ಕೆಲವು ವರದಿಗಳ ಪ್ರಕಾರ ಫರ್ಝ್‌ನ ಮುಂಚೆ ನಾಲ್ಕು ಮತ್ತು ಫರ್ಝ್‌ನ ನಂತರ ಎರಡು ರಕಅತ್‌ಗಳಿವೆ.

"ಪ್ರವಾದಿ(ಸ) ನಾಲ್ಕು ರಕಅತ್ ಝುಹರ್‌ನ ಮುಂಚೆ ಮತ್ತು ಎರಡು ರಕಅತ್ ಝುಹರ್‌ನ ನಂತರ ನಿರ್ವಹಿಸುತ್ತಿದ್ದರು." (ವರದಿ: ಹ. ಆಯಿಶಾ(ರ)- ಮುಸ್ಲಿಮ್, ಅಹ್ಮದ್)

"ಯಾರು ಹಗಲು ರಾತ್ರಿಗಳಲ್ಲಿ ಹನ್ನೆರಡು ರಕಅತ್‌ಗಳನ್ನು ನಿರ್ವಹಿಸುತ್ತಾನೋ ಅವನಿಗಾಗಿ ಸ್ವರ್ಗದಲ್ಲಿ ಒಂದು ಮನೆ ನಿರ್ಮಿಸಲಾಯಿತು. ಝುಹರ್‌ಗೆ ಮುಂಚೆ ನಾಲ್ಕು, ಝುಹರ್‌ನ ನಂತರ ಎರಡು, ಎರಡು ಮಗ್ರಿಬ್‌ನ ನಂತರ, ಎರಡು ಇಶಾದ ನಂತರ ಮತ್ತು ಫಜ್ರ್‌ಗೆ ಮುಂಚೆ ಎರಡು." (ವರದಿ: ಹ. ಉಮ್ಮು ಹಬೀಬಾ(ರ)- ಮುಸ್ಲಿಮ್, ತಿರ್ಮಿದಿ)

ಹನಫೀ ಕರ್ಮಶಾಸ್ತ್ರ ಪ್ರಕಾರ ಝುಹರ್‌ಗೆ ಆರು ರಕಅತ್ ಸುನ್ನತ್ ಮತ್ತು ಶಾಫಿಈ ಕರ್ಮಶಾಸ್ತ್ರ ಪ್ರಕಾರ ನಾಲ್ಕು ರಕಅತ್ ನಿರ್ವಹಿಸಬೇಕು. ಹನಫೀ ಕ್ರಮದಂತೆ ಝುಹರ್‌ಗೆ ಮುಂಚೆ ನಿರ್ವಹಿಸುವ ನಾಲ್ಕು ರಕಅತ್‌ಗಳನ್ನು ಒಂದೇ ಸಲಾಮ್‌ನೊಂದಿಗೆ ಒಟ್ಟಿಗೆ ನಿರ್ವಹಿಸುವುದು ಉತ್ತಮ. ಆದರೆ ಶಾಫಿಈ ಕ್ರಮ ಪ್ರಕಾರ ಎರಡೆರಡು ರಕಅತ್‌ಗಳನ್ನು ಬೇರೆಬೇರೆಯಾಗಿ ನಿರ್ವಹಿಸುವುದೇ ಉತ್ತಮ.

ಝುಹರ್‌ಗೆ ಮುಂಚಿನ ಸುನ್ನತ್ ನಮಾಝ್ ಬಿಟ್ಟು ಹೋದರೆ ಅದನ್ನು ಝುಹರ್‌ನ ನಂತರ ನಿರ್ವಹಿಸಬಹುದಾಗಿದೆ.

"ಪ್ರವಾದಿ(ಸ) ಝುಹರ್‌ಗಿಂತ ಮುಂಚೆ ನಾಲ್ಕು ರಕಅತ್ ಸುನ್ನತ್ ನಿರ್ವಹಿಸದಿದ್ದರೆ ಅದನ್ನು ನಂತರ ನಿರ್ವಹಿಸುತ್ತಿದ್ದರು."

**3. ಮಗ್ರಿಬ್‌ನ ಸುನ್ನತ್:** ಮಗ್ರಿಬ್‌ನ ನಂತರ ಎರಡು ರಕಅತ್‌ಗಳನ್ನು ನಿರ್ವಹಿಸುವುದು ಸುನ್ನತ್ ಆಗಿದೆ. ಅವುಗಳನ್ನು ಮನೆಯಲ್ಲಿ ನಿರ್ವಹಿಸುವುದು ಉತ್ತಮವೆಂದು ಹ. ಅಬ್ದುಲ್ಲಾ ಬಿನ್ ಉಮರ್(ರ) ವರದಿ ಮಾಡಿದ ಹದೀಸ್‌ನಿಂದ ತಿಳಿದು ಬರುತ್ತದೆ.

ಕೆಲವು ವರದಿಗಳ ಪ್ರಕಾರ ಪ್ರವಾದಿ(ಸ) ಫಜ್ರ್‌ನ ಸುನ್ನತ್‌ನಲ್ಲಿ ಪಠಿಸಿದಂತೆ ಮಗ್ರಿಬ್‌ನ ಸುನ್ನತ್‌ನಲ್ಲಿಯೂ 'ಕುಲ್ ಯಾ ಅಯ್ಯುಹಲ್ ಕಾಫಿರೂನ್' ಮತ್ತು 'ಕುಲ್ ಹುವಲ್ಲಾಹು ಅಹದ್' ಪಠಿಸುತ್ತಿದ್ದರು.

**4. ಇಶಾದ ಸುನ್ನತ್:** ಇಶಾ ನಮಾಝ್‌ನ ನಂತರವೂ ಎರಡು ರಕಅತ್ ನಮಾಝ್ ಮಾಡುವುದು ಸುನ್ನತೆ ಮುಅಕ್ಕದಃ ಆಗಿದೆ.

## ರವಾತಿಬ್ ಅಲ್ಲದ ಸುನ್ನತ್

10 ಅಥವಾ 12 ರಕಅತ್ ಮುಅಕ್ಕದಃ ಸುನ್ನತ್‌ಗಳಿಗೆ ಹೊರತಾಗಿಯೂ ಕೆಲವು ಸುನ್ನತ್‌ಗಳಿವೆ:

**1. ಅಸರ್‌ಗೆ ಮುಂಚೆ ಎರಡು ಅಥವಾ ನಾಲ್ಕು ರಕಅತ್‌ಗಳು**

ಈ ಬಗ್ಗೆ ಅನೇಕ ಹದೀಸ್‌ಗಳಿವೆ. ಆ ಪೈಕಿ ಒಂದನ್ನು ಇಲ್ಲಿ ಉಲ್ಲೇಖಿಸುತ್ತೇವೆ:

ಪ್ರವಾದಿ(ಸ) ಹೀಗೆ ಹೇಳಿರುವರು:

"ಅಸರ್‌ಗೆ ಮೊದಲು ನಾಲ್ಕು ರಕಅತ್ ನಮಾಝ್ ಮಾಡುವವನ ಮೇಲೆ ಅಲ್ಲಾಹನು ದಯೆ ತೋರಲಿ." (ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ)

**2. ಮಗ್ರಿಬ್‌ಗೆ ಮುಂಚೆ ಎರಡು ರಕಅತ್‌ಗಳು**

ಪ್ರವಾದಿ(ಸ) ಹೀಗೆ ಹೇಳಿರುವರು:

"ಮಗ್ರಿಬ್‌ಗೆ ಮುಂಚೆ ನಮಾಝ್ ಮಾಡಿರಿ. ಮಗ್ರಿಬ್‌ಗೆ ಮುಂಚೆ ನಮಾಝ್ ಮಾಡಿರಿ ಮತ್ತು ಮೂರನೆಯ ಸಲ ಜನರು ಅದನ್ನು ಸುನ್ನತ್ ಎಂದೇ ಮಾಡದಿರಲಿ ಎಂಬ ಉದ್ದೇಶ ದಿಂದ 'ಇದು ಹಾಗೆ ಮಾಡ ಬಯಸುವವರಿಗಾಗಿದೆ' ಎಂದರು."

(ವರದಿ: ಹ. ಅಬ್ದುಲ್ಲಾ ಬಿನ್ ಮುಗಫ್ಫಲ್(ರ)- ಬುಖಾರಿ)

ಇದುವೇ ಇಮಾಮ್ ಶಾಫಿಈಯವರ(ರ) ಅಭಿಮತ. ಹನಫೀ ಕರ್ಮಶಾಸ್ತ್ರ ಪಂಡಿತರಲ್ಲಿ ಈ ಬಗ್ಗೆ ಭಿನ್ನಮತವಿದೆ. ಆದರೆ ಅವರ ಸರಿಯಾದ ನಿಲುವು ಏನೆಂದರೆ 'ತಕ್‌ಬೀರತು ತ್ತಹ್ರೀಮ್' (ಪ್ರಥಮ ತಕ್ಬೀರ್) ಇಮಾಮ್‌ನ ಜೊತೆ ತಪ್ಪಿ ಹೋಗುವ ಸಂಭವ ಇಲ್ಲದಿದ್ದರೆ ಈ ಎರಡು ರಕಅತ್ ನಿರ್ವಹಿಸುವುದೇ ಉತ್ತಮ. (ಅಲ್ ಕೌಕಬುದ್ದುರ್ರೀ- ಭಾಗ-1, ಪುಟ:103)

ಕೆಲವು ಹದೀಸ್‌ಗಳಲ್ಲಿ ವರದಿಯಾಗಿರುವಂತೆ ಪ್ರವಾದಿವರ್ಯರು(ಸ) ಮಗ್ರಿಬ್‌ನ ನಂತರವೂ (ಎರಡು ರಕಅತ್ ಸುನ್ನತ್ ಮುಅಕ್ಕದಕ್ಕೆ ಹೊರತಾಗಿ) ನಫಿಲ್ ನಮಾಝ್‌ಗಳನ್ನು ಮಾಡುತ್ತಿದ್ದರೆಂದು ತಿಳಿದು ಬರುತ್ತದೆ.

"ಯಾರು ಮಗ್ರಿಬ್ ನಮಾಝ್‌ನ ನಂತರ ಇಪ್ಪತ್ತು ರಕಅತ್‌ಗಳನ್ನು ನಿರ್ವಹಿಸುತ್ತಾನೋ ಅಲ್ಲಾಹನು ಅವನಿಗಾಗಿ ಸ್ವರ್ಗದಲ್ಲಿ ಒಂದು ಮನೆ ನಿರ್ಮಿಸುವನು."

(ವರದಿ: ಹ. ಆಯಿಶಾ(ರ)- ತಿರ್ಮಿದಿ)

ಹ. ಅಮ್ಮಾರ್ ಬಿನ್ ಯಾಸಿರ್‌ರವರು(ರ) ಮಗ್ರಿಬ್‌ನ ನಂತರ ಆರು ರಕಅತ್‌ಗಳನ್ನು ನಿರ್ವಹಿಸುವುದನ್ನು ಅವರ ಪುತ್ರ ಮುಹಮ್ಮದ್(ರ) ಕಂಡರು. ಹ. ಅಮ್ಮಾರ್(ರ) ಹೇಳಿದರು- ನನ್ನ ಪ್ರೀತಿಯ ಪ್ರವಾದಿ(ಸ) ಮಗ್ರಿಬ್‌ನ ನಂತರ ಆರು ರಕಅತ್ ನಿರ್ವಹಿಸುವುದನ್ನು ನಾನು ಕಂಡಿರುವೆನು. ಪ್ರವಾದಿ(ಸ) ಹೀಗೆ ಹೇಳಿದರು: "ಮಗ್ರಿಬ್‌ನ ನಂತರ ಆರು ರಕಅತ್‌ಗಳನ್ನು ನಿರ್ವಹಿಸುವವನ ಎಲ್ಲ ಪಾಪಗಳನ್ನು, ಅವು ಸಮುದ್ರದ ನೊರೆಯಷ್ಟಿದ್ದರೂ ಅಲ್ಲಾಹನು ಕ್ಷಮಿಸಿದನು." (ತಬ್ರಾನಿ, ಹೈಸಮಿ)

ಈ ಹದೀಸ್‌ನ ಆಧಾರದಲ್ಲಿ ಹನಫೀ ಕ್ರಮದಂತೆ ಮಗ್ರಿಬ್‌ನ ನಂತರ ಆರು ರಕಅತ್ ಸುನ್ನತ್ ಗೈರ್ ಮುಅಕ್ಕದಃ ಇದೆ.

"ನಾನು ಪ್ರವಾದಿವರ್ಯರ(ಸ) ಬಳಿಗೆ ಬಂದೆ. ನಾನು ಅವರ ಜತೆ ಮಗ್ರಿಬ್ ನಮಾಝ್ ನಿರ್ವಹಿಸಿದೆ. ಅನಂತರ ಅವರು ಇಶಾದ ತನಕ ನಫಿಲ್ ನಮಾಝ್ ಮಾಡುತ್ತಿದ್ದರು."

(ವರದಿ: ಹ. ಹುದೈಫಾ(ರ)- ನಸಾಈ)

ಈ ವರದಿಗಳ ಪೈಕಿ ಮೊದಲೆರಡು ವರದಿಗಳು ದುರ್ಬಲವಾಗಿದ್ದರೂ ಮಗ್ರಿಬ್ ಮತ್ತು ಇಶಾಗಳ ಮಧ್ಯೆ ನಫಿಲ್ ನಮಾಝ್ ಮಾಡುವುದು ಉತ್ತಮವೆಂದು ಅವುಗಳಿಂದ ತಿಳಿದು ಬರುತ್ತದೆ. (ಫತ್‌ಹುರ್ರಬ್ಬಾನೀ- ಭಾಗ- 4, ಪು: 215)

### 3. ಇಶಾಗಿಂತ ಮೊದಲು ಎರಡು ಅಥವಾ ನಾಲ್ಕು ರಕಅತ್

ಪ್ರವಾದಿ(ಸ) ಹೀಗೆ ಹೇಳಿರುವರು: "ಪ್ರತಿಯೊಂದು ಅದಾನ್ ಮತ್ತು ಇಕಾಮತ್‌ನ ಮಧ್ಯೆ ನಮಾಝ್ ಇದೆ. ಪ್ರತಿಯೊಂದು ಅದಾನ್ ಮತ್ತು ಇಕಾಮತ್‌ನ ಮಧ್ಯೆ ನಮಾಝ್ ಇದೆ. ಮೂರನೆಯ ಸಲ ಪ್ರವಾದಿ(ಸ) ಹೀಗೆ ಹೇಳಿದರು- ಯಾರು ಹೀಗೆ ಮಾಡ ಬಯಸುತ್ತಾನೋ ಅವನಿಗೆ."

(ವರದಿ: ಹ. ಅಬ್ದುಲ್ಲಾ ಬಿನ್ ಮುಗಫ್ಫಲ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ, ನಸಾಈ)

ಹನಫೀ ಕ್ರಮದಂತೆ ಇಶಾಗೆ ಮುಂಚೆ ನಾಲ್ಕು ರಕಅತ್ ಮತ್ತು ಶಾಫಿಈ ಕ್ರಮದಂತೆ ಎರಡು ರಕಅತ್ ನಿರ್ವಹಿಸಬಹುದು.

ಹೆಚ್ಚಿನ ವಿದ್ವಾಂಸರ ಅಭಿಪ್ರಾಯದಂತೆ ಇಶಾದ ಎರಡು ರಕಅತ್ ಸುನ್ನತ್‌ನ ನಂತರ ನಫಿಲ್ ನಮಾಝ್‌ಗಳನ್ನು ಮಾಡುವುದು ಉತ್ತಮವಾಗಿದೆ. ಹನಫೀ ಕರ್ಮಶಾಸ್ತ್ರದಂತೆ ಇಶಾದ ನಂತರ ಎರಡು ರಕಅತ್ ಸುನ್ನತ್ ಮುಅಕ್ಕದಃ ಅಲ್ಲದೆ ನಾಲ್ಕು ರಕಅತ್ ಸುನ್ನತ್ ಗೈರ್ ಮುಅಕ್ಕದಃ ಇವೆ.

ಈ ಕೆಳಗಿನ ಹದೀಸ್‌ಗಳು ಅದಕ್ಕೆ ಆಧಾರವಾಗಿವೆ. "ಪ್ರವಾದಿ(ಸ) ಇಶಾ ನಮಾಝ್‌ನ ನಂತರ ನನ್ನ ಬಳಿಗೆ ಬಂದಾಗಲೆಲ್ಲಾ ನಾಲ್ಕು ಅಥವಾ ಆರು ರಕಅತ್ (ಎರಡು ರಕಅತ್ ಸುನ್ನತ್ ಮುಅಕ್ಕದಃ ಸಹಿತ) ನಮಾಝ್ ಮಾಡುತ್ತಿದ್ದರು."(ವರದಿ: ಹ. ಆಯಿಶಾ(ರ)- ಅಹ್ಮದ್)

"ಒಂದು ರಾತ್ರಿ ನಾನು ನನ್ನ ಮಾತೃ ಸೋದರಿ ಹ. ಮೈಮೂನಾರ(ರ) ಮನೆಯಲ್ಲಿ ಮಲಗಿದ್ದೆ. ಪ್ರವಾದಿ(ಸ) ಇಶಾ ನಮಾಝ್ ಮಾಡಿ ಬಂದು ನಾಲ್ಕು ರಕಅತ್ ನಮಾಝ್ ಮಾಡಿದರು." (ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಅಹ್ಮದ್, ಅಬೂ ದಾವೂದ್, ನಸಾಈ)

◈

# ಜುಮಾ ನಮಾಝ್

ಜುಮಾ ನಮಾಝ್ ಪ್ರತಿಯೊಬ್ಬ ವಯಸ್ಕ ಮುಸ್ಲಿಮನ ಮೇಲೆ ಕಡ್ಡಾಯವಾಗಿದೆ. ಅದು ಕಡ್ಡಾಯವೆಂದು ಕುರ್‌ಆನ್, ಹದೀಸ್ ಮತ್ತು ಸಮುದಾಯದ ಒಮ್ಮತಾಭಿಪ್ರಾಯದಿಂದ ತಿಳಿದು ಬರುತ್ತದೆ. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಿರುವನು:

"ಸತ್ಯವಿಶ್ವಾಸಿಗಳೇ! ಶುಕ್ರವಾರದಂದು ನಮಾಝ್‌ಗಾಗಿ ಕರೆಯಲಾದಾಗ ಅಲ್ಲಾಹನ ಸ್ಮರಣೆಯ ಕಡೆಗೆ ಧಾವಿಸಿರಿ ಮತ್ತು ಕ್ರಯ-ವಿಕ್ರಯಗಳನ್ನು ಬಿಟ್ಟು ಬಿಡಿರಿ."

(ಅಲ್ ಜುಮುಅ : 9)

ಪ್ರವಾದಿ(ಸ) ಹೀಗೆ ಹೇಳಿರುವರು:

"ಲೋಕದಲ್ಲಿ ನಾವು ಬಂದ ಕಾಲವು ಎಲ್ಲರಿಗಿಂತ ನಂತರದ್ದಾಗಿದೆ. ಆದರೆ ನಿರ್ಣಾಯಕ ದಿನದಂದು ನಾವು ಎಲ್ಲರಿಗಿಂತ ಮುಂದೆ ಸಾಗುವವರಾಗಿದ್ದೇವೆ. (ಅರ್ಥಾತ್ ವಿಚಾರಣೆಯಿಂದ ಎಲ್ಲರಿಗಿಂತ ಮೊದಲು ಮುಕ್ತರಾಗುವವರು). ಅವರಿಗೆ (ಅರ್ಥಾತ್ ಯಹೂದಿಗಳು ಮತ್ತು ಕ್ರೈಸ್ತರಿಗೆ) ನಮಗಿಂತ ಮೊದಲು ಗ್ರಂಥ ಲಭಿಸಿದೆ. ನಮಗೆ ಅವರ ನಂತರ ಸಿಕ್ಕಿದೆ. ಈ ದಿನ (ಶುಕ್ರವಾರ)ದ ಗೌರವವನ್ನು ಅವರ ಮೇಲೆ ಕಡ್ಡಾಯಗೊಳಿಸಲಾಗಿತ್ತು. ಆದರೆ ಅವರು ಅದರಲ್ಲಿ ಭಿನ್ನತೆ ಮಾಡಿದರು. ಅಲ್ಲಾಹನು ನಮಗೆ ಅದನ್ನು ಒಪ್ಪುವ ಸೌಭಾಗ್ಯವನ್ನು ದಯಪಾಲಿಸಿರುವನು. ಆದ್ದರಿಂದ ಎಲ್ಲರೂ ನಮಗಿಂತ ಹಿಂದಿರುವರು. ಯಹೂದಿಗಳು ನಾಳೆ (ಶನಿವಾರ)ಯನ್ನು ಗೌರವಿಸುತ್ತಾರೆ ಮತ್ತು ಕ್ರೈಸ್ತರು ನಾಡಿದ್ದನ್ನು(ಆದಿತ್ಯವಾರ) ಗೌರವಿಸುತ್ತಾರೆ." (ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್)

"ಜುಮಾ ನಮಾಝನ್ನು ಗೌರವಿಸದ ಮತ್ತು ಮೂರು ಜುಮಾಗಳನ್ನು ತೊರೆಯುವವನ ಹೃದಯದ ಮೇಲೆ ಅಲ್ಲಾಹನು ಮುದ್ರೆಯೊತ್ತುತ್ತಾನೆ.

(ವರದಿ: ಹ. ಅಬೂ ಜಅದ್ ಝುಮರಿ(ರ)- ಅಬೂ ದಾವೂದ್,

ತಿರ್ಮಿದಿ, ನಸಾಈ, ಇಬ್ನು ಮಾಜಃ)

"ಪ್ರತಿಯೊಬ್ಬ ವಯಸ್ಕ ಮುಸ್ಲಿಮ್ ಪುರುಷನ ಮೇಲೆ ಜುಮಾ ನಮಾಝ್ ಕಡ್ಡಾಯವಾಗಿದೆ." (ವರದಿ: ಹ. ಹಫ್ಸಾ(ರ)- ನಸಾಈ)

ಜುಮಾ ಕಡ್ಡಾಯವಾಗಿದೆ ಎಂಬ ಬಗ್ಗೆ ಮುಸ್ಲಿಮ್ ಸಮುದಾಯದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ.

## ಜುಮಾ ಯಾರಿಗೆ ಕಡ್ಡಾಯವಿಲ್ಲ?

ಮಹಿಳೆಯರು, ಮಸೀದಿಗೆ ಹೋಗಲು ಅಶಕ್ತರಾದ ರೋಗಿಗಳು, ಮಕ್ಕಳು, ಗುಲಾಮರು ಮತ್ತು ಪ್ರಯಾಣಿಕರ ಮೇಲೆ ಜುಮಾ ನಮಾಝ್ ಕಡ್ಡಾಯವಲ್ಲ. ಅಂತೆಯೇ ಶತ್ರುವಿನ ಭಯ, ತೀವ್ರ ಮಳೆ, ಕೆಸರು ಮತ್ತು ತೀವ್ರ ಚಳಿಯಿಂದಾಗಿ ಮಸೀದಿಗೆ ಬರಲು ಸಾಧ್ಯವಿಲ್ಲದವನ ಮೇಲೂ ಜುಮಾ ನಮಾಝ್ ಕಡ್ಡಾಯವಲ್ಲ. ಆದರೆ ಆ ಪೈಕಿ ಮಕ್ಕಳ ಹೊರತು ಇತರೆಲ್ಲರ ಮೇಲೆ ಶುಕ್ರವಾರದಂದೂ ಝುಹರ್ ನಮಾಝ್ ಕಡ್ಡಾಯವಾಗಿದೆ.

ಮಹಿಳೆಯರು ಸ್ವಇಚ್ಛೆಯಿಂದ ಮಸೀದಿಗೆ ಬಂದು ಜುಮಾ ನಮಾಝ್‌ನಲ್ಲಿ ಸೇರಿಕೊಳ್ಳ ಬಯಸಿದರೆ ಅವರಿಗೆ ಅದರ ಅನುಮತಿಯಿದೆ. ಪ್ರವಾದಿವರ್ಯರ(ಸ) ಮತ್ತು ಅಲ್ ಖಿಲಫಾ ಉರ್‍ರಾಶಿದೂನ್‌ರ ಕಾಲದಲ್ಲಿ ಮಹಿಳೆಯರು ಮಸೀದಿಗೆ ಬಂದು ಜುಮಾ ನಮಾಝ್‌ನಲ್ಲಿ ಸೇರಿಕೊಳ್ಳುತ್ತಿದ್ದರೆಂದು ಅನೇಕ ಹದೀಸ್‌ಗಳಿಂದ ತಿಳಿದು ಬರುತ್ತದೆ.

ಹನಫೀ ಕರ್ಮಶಾಸ್ತ್ರದ ಪ್ರಕಾರ ಮಹಿಳೆಯರು ಯುವತಿಯರಾಗಲಿ, ಮುದುಕಿಯರಾಗಲಿ ಮನೆಯಲ್ಲಿದ್ದು ಝುಹರ್ ನಮಾಝ್ ನಿರ್ವಹಿಸುವುದು ಮಸೀದಿಗೆ ಹೋಗಿ ಜುಮಾ ನಮಾಝ್ ಮಾಡುವುದಕ್ಕಿಂತ ಉತ್ತಮವಾಗಿದೆ.

ಇಮಾಮ್ ಶಾಫಿಈಯವರ(ರ) ಪ್ರಕಾರ ಯುವತಿಯರು ಜುಮಾ ನಮಾಝ್‌ಗೆ ಮಸೀದಿಗೆ ಹೋಗುವುದು ಮಕ್ರೂಹ್(ಅನಪೇಕ್ಷಿತ) ಆಗಿದೆ.

ಪ್ರಾಯಶಃ ಈ ಕರ್ಮಶಾಸ್ತ್ರ ವಿಧಿಗಳಿಗೆ ಕಾರಣ ಹ. ಆಯಿಶಾರವರ(ರ) ಈ ಕೆಳಗಿನ ವಚನವಾಗಿರಬೇಕು:

"ಈ ಕಾಲದಲ್ಲಿ ಮಹಿಳೆಯರು ಆರಂಭಿಸಿರುವ ಹೊಸ ಹೊಸ ಕಾರ್ಯಗಳನ್ನು ಪ್ರವಾದಿವರ್ಯರು(ಸ) ಕಾಣುತ್ತಿದ್ದರೆ ಅವರನ್ನು ಮಸೀದಿಗೆ ಹೋಗುವುದರಿಂದ ತಡೆಯುತ್ತಿದ್ದರು- ಬನೂ ಇಸ್ರಾಈಲರ ಮಹಿಳೆಯರನ್ನು ತಡೆದಿರುವಂತೆ."

(ತಿರ್ಮಿದಿ)

## ಜುಮಾದ ಸಮಯ

ಸಹಾಬಿಗಳು ಮತ್ತು ತಾಬಿಈನ್‌ಗಳಲ್ಲಿ ಹೆಚ್ಚಿನವರು ಮತ್ತು ನಾಲ್ಕು ಇಮಾಮರುಗಳ ಪ್ರಕಾರ ಜುಮಾ ನಮಾಝ್‌ನ ಸಮಯವು ಝುಹರ್ ನಮಾಝ್‌ನ ಸಮಯವೇ ಆಗಿದೆ. ಅಂದರೆ ಸೂರ್ಯ ನಡುನೆತ್ತಿಯಿಂದ ಸರಿಯಲಾರಂಭಿಸಿ ಪ್ರತಿಯೊಂದು ವಸ್ತುವಿನ ನೆರಳು ಅದರ ಗಾತ್ರದಷ್ಟೇ ಆಗುವ ತನಕ.

"ಸೂರ್ಯನು ಇಳಿಮುಖವಾದಾಗ ಪ್ರವಾದಿವರ್ಯರು(ಸ) ಜುಮಾ ನಮಾಝ್ ಮಾಡಿಸುತ್ತಿದ್ದರು."

(ವರದಿ: ಹ. ಅನಸ್(ರ)- ಅಹ್ಮದ್, ಬುಖಾರಿ, ಅಬೂ ದಾವೂದ್, ತಿರ್ಮಿದಿ, ಬೈಹಕಿ)

"ನಾವು ಪ್ರವಾದಿವರ್ಯರ(ಸ) ಜತೆ ಜುಮಾ ನಮಾಝ್ ಮಾಡಿ ಮನೆಗೆ ಮರಳುವಾಗ ಗೋಡೆಗಳಿಗೆ ನೆರಳು ಇರುತ್ತಿರಲಿಲ್ಲ."

(ವರದಿ: ಹ. ಸಲ್ಮಾ ಬಿನ್ ಅಕ್ವಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್)

## ಕನಿಷ್ಠ ಸಂಖ್ಯೆ

ಜುಮಾ ನಮಾಝ್‌ಗೆ ಜಮಾಅತ್ ಕಡ್ಡಾಯವಾಗಿದೆ. ಈ ಬಗ್ಗೆ ಎಲ್ಲರಿಗೂ ಸಹಮತವಿದೆ. ಜುಮಾ ನಮಾಝ್ ಒಂಟಿಯಾಗಿ ಮಾಡುವಂತಿಲ್ಲ. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಜುಮಾ ನಮಾಝ್ ಪ್ರತಿಯೊಬ್ಬ ಮುಸ್ಲಿಮನ ಮೇಲೆ ಜಮಾಅತ್ ಸಹಿತ ಕಡ್ಡಾಯವಾಗಿದೆ." (ಅಬೂ ದಾವೂದ್)

ಜುಮಾ ನಮಾಝ್‌ಗೆ ಇರಬೇಕಾದ, ನಮಾಝ್ ಮಾಡುವವರ, ಕನಿಷ್ಠ ಹಾಜರಿಯ ಕುರಿತು ಹದೀಸ್‌ಗಳಲ್ಲಿ ನಿರ್ದಿಷ್ಟವಾಗಿ ತಿಳಿದು ಬರುವುದಿಲ್ಲ. ಹನಫಿ ಫಿಕ್ಹ್ ಪ್ರಕಾರ ಜುಮಾ ನಮಾಝ್‌ಗೆ ಇಮಾಮರನ್ನು ಹೊರತು ಪಡಿಸಿ ಯಾತ್ರಿಕರಲ್ಲದ ಮೂವರು ಪುರುಷರು ಇರಬೇಕು. ಶಾಫಿಈ ಫಿಕ್ಹ್ ಪ್ರಕಾರ ಈ ಸಂಖ್ಯೆಯು 40 ಪುರುಷರು.

## ಜುಮಾ ಎಲ್ಲಿ ನಿರ್ವಹಿಸಬಹುದು?

ಹದೀಸ್‌ನಲ್ಲಿ ಜುಮಾ ನಮಾಝ್‌ಗೆ ಯಾವುದೇ ನಿರ್ದಿಷ್ಟ ಸ್ಥಳವನ್ನು ಗೊತ್ತು ಪಡಿಸಲಾಗಿಲ್ಲ.

ಹನಫೀ ಫಿಕ್ಹ್ ಪ್ರಕಾರ ಹಳ್ಳಿಯಲ್ಲಿ ಜುಮಾ ನಮಾಝ್ ಆಗುವುದಿಲ್ಲ. ಅದು ಕೇವಲ ಪಟ್ಟಣದಲ್ಲಾಗಬೇಕು. ಶಾಫಿಈ ಫಿಕ್ಹ್ ಪ್ರಕಾರ ಅದು ಜುಮಾ ನಮಾಝ್ ಕಡ್ಡಾಯವಾಗಿರುವ ಕನಿಷ್ಠ 40 ಮಂದಿ ಪುರುಷರು ಇರುವಂತಹ ಊರಾಗಿರಬೇಕು.

## ಜುಮಾದ ಎರಡು ಅದಾನ್‌ಗಳು

ಪ್ರವಾದಿವರ್ಯರ(ಸ) ಕಾಲದಲ್ಲಿ ಹಾಗೂ ಖಲೀಫಾ ಅಬೂಬಕರ್ ಮತ್ತು ಉಮರ್ ರವರ(ರ) ಕಾಲದಲ್ಲಿ ಜುಮಾ ನಮಾಝ್‌ಗೆ ಒಂದೇ ಅದಾನ್ ಕೊಡಲಾಗುತ್ತಿತ್ತು. ಅದು ಇಮಾಮ್ ವೇದಿಕೆಗೆ ಏರಿ ಕುಳಿತ ಸಂದರ್ಭದಲ್ಲಾಗುತ್ತಿತ್ತು. ಹ. ಉಸ್ಮಾನ್‌ರವರ(ರ) ಕಾಲದಲ್ಲಿ ಮದೀನಾದ ಜನಸಂಖ್ಯೆಯು ಹೆಚ್ಚಾಯಿತು. ಆಗ ಅವರು ಇನ್ನೊಂದು ಅದಾನ್‌ನ ಕ್ರಮವನ್ನು ಜಾರಿಗೊಳಿಸಿದರು. ಅಂದಿನಿಂದ ಈ ತನಕ ಆ ಕ್ರಮ ಜಾರಿಯಲ್ಲಿದೆ.

ಪ್ರವಾದಿ(ಸ), ಹ. ಅಬೂಬಕರ್(ರ) ಮತ್ತು ಹ. ಉಮರ್‌ರ(ರ) ಕಾಲದಲ್ಲಿ ಮೊದಲನೆಯ ಅದಾನ್ ಇಮಾಮ್ ವೇದಿಕೆಯಲ್ಲಿ ಬಂದು ಕುಳಿತಾಗ ಆಗುತ್ತಿತ್ತು. ಹ. ಉಸ್ಮಾನ್‌ರವರ(ರ) ಕಾಲದಲ್ಲಿ ಜನಸಂಖ್ಯೆ ಹೆಚ್ಚಾದಾಗ ಅವರು ಮೂರನೆಯ ಅದಾನ್‌ನ ಕ್ರಮವನ್ನು ಜಾರಿಗೊಳಿಸಿದರು. ಅದನ್ನು ಝೂರಾ (ಮಸೀದಿಯ ಬಾಗಿಲ ಬಳಿಯಿರುವ ಪೇಟೆಯ ಪಕ್ಕದ ಒಂದು ಉನ್ನತ ಸ್ಥಾನ)ದಲ್ಲಿ ಕೊಡಲಾಗುತ್ತಿತ್ತು.

(ವರದಿ: ಹ. ಸಾಇಬ್ ಬಿನ್ ಯಝೀದ್(ರ)- ಬುಖಾರಿ, ಅಬೂ ದಾವೂದ್, ನಸಾಈ)

ಆ ಕಾಲದಲ್ಲಿ 'ಇಕಾಮತ್' ಅನ್ನೂ ಅದಾನ್ ಎಂದೇ ಹೇಳಲಾಗುತ್ತಿತ್ತು. ಆದ್ದರಿಂದ ಒಂದು ಅದಾನ್‌ನ ಹೆಚ್ಚಳವನ್ನು ಮೂರನೆಯ ಅದಾನ್ ಎಂದು ಹೇಳಲಾಗಿದೆ.

ಹನಫೀ ಕರ್ಮಶಾಸ್ತ್ರ ಪ್ರಕಾರ ಮೊದಲನೆಯ ಅದಾನ್ ಆದ ಕೂಡಲೇ ವ್ಯಾಪಾರ-ವಹಿವಾಟು ನಿಷಿದ್ಧವಾಗಿ ಬಿಡುತ್ತದೆ. ಇತರ ಕರ್ಮಶಾಸ್ತ್ರ ಇಮಾಮರ ಪ್ರಕಾರ ಅದು ಎರಡನೆಯ ಅದಾನ್‌ನ ನಂತರವೇ ನಿಷಿದ್ಧವಾಗುತ್ತದೆ.

## ಜುಮಾ ಖುತ್‌ಬಾದ ವಿಧಿಗಳು

ಜುಮಾ ಖುತ್‌ಬಾಕ್ಕೆ ಎರಡು ಭಾಗಗಳಿವೆ. ಅವುಗಳನ್ನು ಪ್ರಥಮ ಮತ್ತು ದ್ವಿತೀಯ ಖುತ್‌ಬಾ ಎನ್ನಲಾಗುತ್ತದೆ. ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಪ್ರಥಮ ಖುತ್‌ಬಾ ವಾಜಿಬ್(ಕಡ್ಡಾಯ) ಮತ್ತು ದ್ವಿತೀಯ ಖುತ್‌ಬಾ ಸುನ್ನತ್(ಐಚ್ಛಿಕ) ಆಗಿದೆ. ಇಮಾಮ್ ಶಾಫಿಈಯವರ(ರ) ಪ್ರಕಾರ ಎರಡೂ ಖುತ್‌ಬಾಗಳು ವಾಜಿಬ್(ಕಡ್ಡಾಯ) ಆಗಿವೆ.

### ಜುಮಾ ಖುತ್‌ಬಾದ ಬಗೆಗಿರುವ ಕೆಲವು ಅಗತ್ಯ ವಿಧಿಗಳು ಹೀಗಿವೆ-

1) ಪ್ರವಾದಿವರ್ಯರ(ಸ) ಜುಮಾ ಖುತ್‌ಬಾದಲ್ಲಿ ಅಲ್ಲಾಹನ ಸ್ತುತಿ-ಸ್ತೋತ್ರ, ತಮ್ಮ ಪ್ರವಾದಿತ್ವದ ಸಾಕ್ಷ್ಯ, ಜನರಿಗೆ ಉಪದೇಶ, ಪವಿತ್ರ ಕುರ್‌ಆನಿನ ಕೆಲವು ಸೂರಃ ಅಥವಾ ಆಯತ್‌ಗಳ ಪಠಣ ಮತ್ತು ಮುಸ್ಲಿಮರಿಗಾಗಿ ದುಆ(ಪ್ರಾರ್ಥನೆ) ಇರುತ್ತಿತ್ತು.

ಶಾಫಿಈ ಫಿಕ್ಹ್ ಪ್ರಕಾರ ಇವೆಲ್ಲವೂ ಖುತ್‌ಬಾದ ಕಡ್ಡಾಯ ಅಂಗಗಳಾಗಿವೆ. ಹನಫಿ ಫಿಕ್ಹ್ ಪ್ರಕಾರ ಅಲ್ಲಾಹನ ಸ್ತುತಿ-ಸ್ತೋತ್ರ ಮಾತ್ರ ಖುತ್‌ಬಾದ ಕಡ್ಡಾಯ ಅಂಗವಾಗಿದೆ. ಕೇವಲ 'ಅಲ್‌ಹಮ್ದುಲಿಲ್ಲಾಹ್', 'ಲಾ ಇಲಾಹ ಇಲ್ಲಲ್ಲಾಹ್' ಅಥವಾ 'ಸುಬ್‌ಹಾನಲ್ಲಾಹ್' ಎಂದು ಹೇಳುವುದರಿಂದ ಖುತ್‌ಬಾದ ಕಡ್ಡಾಯ ವಿಧಿ ಪೂರ್ಣಗೊಳ್ಳುತ್ತದೆ. ಇತರ ಅಂಶಗಳು ಖುತ್‌ಬಾದ ಸುನ್ನತ್ (ಐಚ್ಛಿಕ)ಗಳಾಗಿವೆ.

ಪ್ರವಾದಿ(ಸ) (ಶುಕ್ರವಾರ ಖುತ್‌ಬಾದಲ್ಲಿ) ತಶಹ್ಹುದ್ ಹೇಳುತ್ತಾ ಹೀಗೆ ವಿವರಿಸುತ್ತಿದ್ದರು:

اَلْحَمْدُ لِلّٰهِ نَسْتَعِينُهٗ وَنَسْتَغْفِرُهٗ وَنَعُوذُ بِاللّٰهِ مِنْ شُرُورِ اَنْفُسِنَا مَنْ يَّهْدِ اللّٰهُ فَلَا مُضِلَّ لَهٗ وَمَنْ يُّضْلِلْ فَلَا هَادِىَ لَهٗ، وَاَشْهَدُ اَنَّ مُحَمَّدًا عَبْدُهٗ وَرَسُولُهٗ، اَرْسَلَهٗ بِالْحَقِّ بَشِيرًا بَيْنَ يَدَىِ السَّاعَةِ وَمَنْ يُّطِعِ اللّٰهَ وَرَسُولَهٗ فَقَدْ رَشَدَ، وَمَنْ يَّعْصِهِمَا فَاِنَّهٗ لَا يَضُرُّ اِلَّا نَفْسَهٗ وَلَا يَضُرُّ اللّٰهَ شَيْئًا

(ابو داؤد)۔

"ಅಲ್‌ಹಮ್ದುಲಿಲ್ಲಾಹಿ ನಸ್‌ತಈನುಹೂ ವ ನಸ್ತಗ್‌ಫಿರುಹೂ, ವನಊದುಬಿಲ್ಲಾಹಿ ಮಿನ್ ಶುರೂರಿ ಅನ್‌ಫುಸಿನಾ ಮಂಯಹ್ದಿಲ್ಲಾಹು ಫಲಾ ಮುದಿಲ್ಲಲಹೂ ವಮನ್‌ಯುದ್‌ಲಿಲ್ ಫಲಾ ಹಾದಿಯಲಹೂ ವಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ ಅರ್‌ಸಲಹೂ ಬಿಲ್ ಹಕ್ಕಿ ಬಶೀರನ್‌ಬ್ಯೆನ ಯುದಯಿಸ್ಸಾಅತಿ ವಮನ್‌ಯುತಿಇಲ್ಲಾಹ ವರಸೂಲಹೂ ಫಕದ್ ರಶದ, ವಮನ್‌ಯಲ್‌ಸಿಹಿಮಾ ಫ ಇನ್ನಹೂ ಲಾ ಯದುರ್ರು ಇಲ್ಲಾ ನಫ್‌ಸಹೂ ವಲಾ ಯದುರ್ರುಲ್ಲಾಹ ಶೈಅನ್."

ಅರ್ಥ: ಸರ್ವಸ್ತುತಿಯೂ ಅಲ್ಲಾಹನಿಗೆ ಮೀಸಲು. ನಾವು ಅವನಿಂದಲೇ ಸಹಾಯ ಯಾಚಿಸುತ್ತೇವೆ. ಅವನಿಂದಲೇ ಕ್ಷಮೆ ಬೇಡುತ್ತೇವೆ. ನಮ್ಮ ಚಿತ್ತಗಳ ಕೆಡುಕಿನಿಂದ ಅಲ್ಲಾಹನ ಅಭಯ ಯಾಚಿಸುತ್ತೇವೆ. ಅಲ್ಲಾಹನು ಯಾರಿಗೆ ಸನ್ಮಾರ್ಗದರ್ಶನ ಮಾಡುತ್ತಾನೋ ಅವನನ್ನಾರೂ ದಾರಿಗೆಡಿಸಲಾರರು. ಅವನು ಯಾರನ್ನು ದಾರಿಗೆಡಿಸುತ್ತಾನೋ ಅವನಿಗೆ ಯಾರೂ ಸನ್ಮಾರ್ಗದರ್ಶನ ಮಾಡಿಸಲಾರರು. ಮುಹಮ್ಮದ್(ಸ) ಅಲ್ಲಾಹನ ದಾಸರೂ ಸಂದೇಶವಾಹಕರೂ ಆಗಿದ್ದಾರೆಂದು ನಾನು ಸಾಕ್ಷ್ಯವಹಿಸುತ್ತೇನೆ. ಅವರನ್ನು ಅಲ್ಲಾಹನು ಕಿಯಾಮತ್‌ಗೆ ಮೊದಲು ಸುವಾರ್ತೆ ನೀಡುವವರಾಗಿ ನೇಮಕ ಮಾಡಿರುವನು. ಅಲ್ಲಾಹ್ ಮತ್ತು ಪ್ರವಾದಿಯನ್ನು ಅನುಸರಿಸಿದವನು ಸನ್ಮಾರ್ಗವನ್ನು ಹೊಂದಿದನು. ಅವರಿಗೆ ಅವಿಧೇಯನಾದವನು ತನಗೆ ತಾನೇ ನಷ್ಟ ಉಂಟು ಮಾಡಿದನು. ಅವನು ಅಲ್ಲಾಹನಿಗೇನೂ ನಷ್ಟ ಉಂಟು ಮಾಡಲಾರನು.

(ವರದಿ: ಹ. ಇಬ್ನು ಮಸ್‌ಊದ್(ರ)- ಅಬೂ ದಾವೂದ್)

"ಅಲ್ಲಾಹನ ಸ್ತುತಿ-ಸ್ತೋತ್ರದೊಂದಿಗೆ ಆರಂಭವಾಗದ ಪ್ರತಿಯೊಂದು ಪ್ರವಚನವೂ ಅಪೂರ್ಣವಾಗಿದೆ."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್, ಅಹ್ಮದ್)

"ಪ್ರವಾದಿ(ಸ) ನಿಂತುಕೊಂಡು ಖುತ್‌ಬಾ(ಪ್ರವಚನ) ನೀಡುತ್ತಿದ್ದರು. ಎರಡು ಖುತ್‌ಬಾಗಳ ಮಧ್ಯೆ ಕುಳಿತುಕೊಳ್ಳುತ್ತಿದ್ದರು. ಅವರು ಕುರ್‌ಆನಿನ ಆಯತ್‌ಗಳನ್ನು ಪಠಿಸುತ್ತಿದ್ದರು ಮತ್ತು ಜನರಿಗೆ ಉಪದೇಶ ಮಾಡುತ್ತಿದ್ದರು."

(ವರದಿ: ಹ. ಜಾಬಿರ್(ರ)- ಮುಸ್ಲಿಮ್, ಅಬೂ ದಾವೂದ್, ನಸಾಈ, ಇಬ್ನು ಮಾಜಃ)

2) ಜುಮಾದ ಖುತ್‌ಬಾವನ್ನು ಮಿಂಬರ್ ಅಥವಾ ಉನ್ನತ ಜಾಗದಲ್ಲಿ ನಿಂತು ನೀಡುವುದು ಮತ್ತು ಎರಡು ಖುತ್‌ಬಾಗಳ ಮಧ್ಯೆ ಸ್ವಲ್ಪ ಹೊತ್ತು ಕುಳಿತುಕೊಳ್ಳುವುದು ಸುನ್ನತ್ ಆಗಿದೆ.

"ಶುಕ್ರವಾರದಂದು ಪ್ರವಾದಿ(ಸ) ನಿಂತುಕೊಂಡು ಖುತ್‌ಬಾ ನೀಡುತ್ತಿದ್ದರು. ಅನಂತರ ಕುಳಿತುಕೊಳ್ಳುತ್ತಿದ್ದರು, ಮತ್ತೆ ಎದ್ದು ನಿಲ್ಲುತ್ತಿದ್ದರು - ಈಗ ಜನರು ಮಾಡುವಂತೆ."

(ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ತಿರ್ಮಿದಿ, ಇಬ್ನು ಮಾಜಃ)

ಪ್ರವಾದಿ(ಸ) ಎಂದೂ ಜುಮಾ ಖುತ್‌ಬಾವನ್ನು ಕುಳಿತುಕೊಂಡು ನೀಡಿರಲಿಲ್ಲ. ಸಹಾಬಿಗಳೆಲ್ಲರೂ ಇದನ್ನೇ ಅನುಸರಿಸಿದರು. ಮೊಟ್ಟಮೊದಲು ಹ. ಮುಆವಿಯಾ(ರ) ಕುಳಿತುಕೊಂಡು ಖುತ್‌ಬಾ ನೀಡಿದರು. ಆಗ ಅವರ ಶರೀರವು ಬಹಳ ದಪ್ಪಗಾಗಿತ್ತು.

ಶಾಫಿಈ ಕ್ರಮದಂತೆ ಖುತ್‌ಬಾಕ್ಕಾಗಿ ನಿಲ್ಲುವುದು ಅದರ ನಿಬಂಧನೆಯಾಗಿದೆ. ಆದರೆ ನಿಂತುಕೊಳ್ಳಲು ಅಸಾಧ್ಯವಾಗುವ ಏನಾದರೂ ಕಾರಣವಿದ್ದರೆ ಕುಳಿತುಕೊಂಡು ಖುತ್‌ಬಾ ನೀಡಬಹುದು. ಹನಫೀ ಕ್ರಮದಂತೆ ನಿಂತುಕೊಂಡು ಖುತ್‌ಬಾ ನೀಡುವುದು ಸುನ್ನತ್ ಆಗಿದೆ. ಎರಡೂ ಖುತ್‌ಬಾಗಳ ಮಧ್ಯೆ ಕುಳಿತುಕೊಳ್ಳುವುದು ಎರಡೂ ಫಿಕ್ಹ್‌ಗಳ ಪ್ರಕಾರ ಸುನ್ನತ್ ಆಗಿದೆ. ಶಾಫಿಈ ಕ್ರಮದಂತೆ ಒಮ್ಮೆ ಉಸಿರಾಡುವಷ್ಟು ಕುಳಿತರೆ ಸಾಕು. ಹನಫೀ ಕ್ರಮದಂತೆ ಮೂರು ಆಯತ್‌ಗಳನ್ನು ಪಠಿಸುವಷ್ಟು ಸಮಯ ಕುಳಿತುಕೊಳ್ಳಬೇಕು.

ನಾಲ್ಕೂ ಮದ್‌ಹಬ್‌ಗಳ ಪ್ರಕಾರ ಪ್ರಥಮ ಖುತ್‌ಬಾ ದ್ವಿತೀಯ ಖುತ್‌ಬಾಗಿಂತ ದೀರ್ಘವಾಗಿರಬೇಕು. ಹನಫೀ ಕ್ರಮದಂತೆ ಖುತ್‌ಬಾ ಆರಂಭಿಸುವುದಕ್ಕೆ ಮುಂಚೆ ಇಮಾಮ್ ಮನಸ್ಸಿನಲ್ಲೇ 'ಅಊದುಬಿಲ್ಲಾಹಿ ಮಿನಶ್ಶೈತಾನಿರ್‍ರಜೀಮ್' ಎಂದು ಹೇಳಬೇಕು. ಅನಂತರ ಜೋರಾಗಿ ಹಮ್ದ್, ಶಹಾದತ್ ಮತ್ತು ಸಲಾತ್ ಹೇಳಬೇಕು ಹಾಗೂ ಜನರಿಗೆ ಉಪದೇಶ ಮಾಡಬೇಕು. ಎರಡನೆಯ ಖುತ್‌ಬಾವನ್ನು ಅಲ್ಲಾಹನ ಸ್ತುತಿಯೊಂದಿಗೆ ಆರಂಭಿಸಬೇಕು. ಪ್ರವಾದಿವರ್ಯರಿಗೆ(ಸ) ಸಲಾತ್ ಹೇಳಬೇಕು ಮತ್ತು ಮುಸ್ಲಿಮರಿಗಾಗಿ(ಪ್ರಾರ್ಥನೆ) ಮಾಡಬೇಕು.

3) "ಖುತ್‌ಬಾ ಸಂಕ್ಷಿಪ್ತವೂ ಸಾರಪೂರ್ಣವೂ ಆಗಿರಬೇಕು. ಪ್ರವಾದಿವರ್ಯರ ನಮಾಝ್ ಮತ್ತು ಅವರ ಖುತ್‌ಬಾ ಮಧ್ಯಮ ತರದ್ದಾಗಿತ್ತು."

**(ವರದಿ: ಹ. ಜಾಬಿರ್ ಬಿನ್ ಸಮುರಃ(ರ)- ಮುಸ್ಲಿಮ್, ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)**

"ನಮಾಝ್ ದೀರ್ಘವಾಗಿರುವುದು ಮತ್ತು ಖುತ್‌ಬಾ ಸಂಕ್ಷಿಪ್ತವಾಗಿರುವುದು ಒಬ್ಬನ ಧರ್ಮದ ತಿಳಿವಳಿಕೆಯ ಸಂಕೇತವಾಗಿದೆ. ಆದ್ದರಿಂದ ನೀವು ನಮಾಝ್ ದೀರ್ಘಗೊಳಿಸಿರಿ ಮತ್ತು ಖುತ್‌ಬಾ ಸಂಕ್ಷಿಪ್ತಗೊಳಿಸಿರಿ."

**(ವರದಿ: ಹ. ಅಮ್ಮಾರ್ ಬಿನ್ ಯಾಸಿರ್(ರ)- ಅಹ್ಮದ್, ಮುಸ್ಲಿಮ್)**

## ಜುಮಾ ನಮಾಝ್‌ನ ವಿಧಿಗಳು:

ಜುಮಾ ನಮಾಝ್ ಎರಡು ರಕಅತ್‌ಗಳಾಗಿವೆ. ಅದರಲ್ಲಿ ಕಿರಾಅತ್ ಜೋರಾಗಿ ಪಠಿಸಬೇಕು. ಈ ವಿಷಯದಲ್ಲಿ ಎಲ್ಲರೂ ಸಹಮತ ಹೊಂದಿರುವರು. ಜುಮಾ ನಮಾಝ್‌ನ ವಿಧಿಗಳು ಈ ಕೆಳಗಿನಂತಿವೆ:

1) ಜುಮಾ ನಮಾಝ್‌ನ ಎರಡು ರಕಅತ್‌ಗಳಲ್ಲಿ ಸೂರಃ ಅಲ್ ಫಾತಿಹಾ ಪಠಿಸಿದ ನಂತರ ಕುರ್‌ಆನಿನ ಯಾವುದಾದರೂ ಭಾಗವನ್ನು ಪಠಿಸಬಹುದು. ಆದರೆ ಪ್ರಥಮ ರಕಅತ್‌ನಲ್ಲಿ ಸೂರಃ ಅಲ್ ಜುಮುಅ ಅಥವಾ ಸೂರಃ ಅಲ್ ಅಲ್‌ಲಾ ಮತ್ತು ದ್ವಿತೀಯ

ರಕಅತ್‌ನಲ್ಲಿ ಸೂರಃ ಅಲ್ ಮುನಾಫಿಕೂನ್ ಅಥವಾ ಸೂರಃ ಅಲ್ ಗಾಷಿಯ ಪಠಿಸುವುದು ಉತ್ತಮವಾಗಿದೆ.

"ಮರ್ವಾನ್, ಹ. ಅಬೂ ಹುರೈರಾರನ್ನು(ರ) ಮದೀನಾದ ಅಧಿಕಾರಿಯಾಗಿ ನೇಮಿಸಿದನು. ಈ ಮಧ್ಯೆ ಹ. ಅಬೂ ಹುರೈರಾ(ರ) ಒಮ್ಮೆ ಮಕ್ಕಾಕ್ಕೆ ಬಂದರು. ಅವರು ಜುಮಾ ದಿವಸ ಪ್ರಥಮ ರಕಅತ್‌ನಲ್ಲಿ ಸೂರಃ ಅಲ್ ಜುಮುಅ ಮತ್ತು ದ್ವಿತೀಯ ರಕಅತ್‌ನಲ್ಲಿ ಸೂರಃ ಅಲ್ ಮುನಾಫಿಕೂನ್ ಪಠಿಸಿದರು. ನಾನು ನಮಾಝ್‌ನ ಬಳಿಕ ಅವರಲ್ಲಿ ಹೀಗೆ ಹೇಳಿದೆ- ಹ. ಅಲೀಯವರು(ರ) ಕೂಫಾದಲ್ಲಿ ಪಠಿಸುತ್ತಿದ್ದ ಸೂರಃಗಳನ್ನೇ ತಾವು ನಮಾಝ್‌ನಲ್ಲಿ ಪಠಿಸಿರುವಿರಿ. ಆಗ ಹ. ಅಬೂ ಹುರೈರಾರವರು(ರ) ಈ ರೀತಿ ಉತ್ತರಿಸಿದರು- ಪ್ರವಾದಿವರ್ಯರು ಜುಮಾ ದಿವಸ ಈ ಎರಡು ಸೂರಃಗಳನ್ನು ಪಠಿಸುವುದನ್ನು ನಾನು ಕೇಳಿದ್ದೇನೆ."

(ವರದಿ: ಹ. ಅಬ್ದುಲ್ಲಾ ಬಿನ್ ಅಬೂ ರಾಫಿಅ್(ರ)- ಮುಸ್ಲಿಮ್, ಅಹ್ಮದ್, ತಿರ್ಮಿದಿ, ಅಬೂ ದಾವೂದ್, ಇಬ್ನು ಮಾಜಃ)

"ಪ್ರವಾದಿ(ಸ) ಎರಡು ಹಬ್ಬಗಳಲ್ಲಿ ಮತ್ತು ಜುಮಾ ನಮಾಝ್‌ನಲ್ಲಿ ಸೂರಃ ಅಲ್ ಅಅ್‌ಲಾ ಮತ್ತು ಸೂರಃ ಅಲ್ ಗಾಷಿಯಾ ಪಠಿಸುತ್ತಿದ್ದರು."

(ವರದಿ: ಹ. ನುಅ್‌ಮಾನ್ ಬಿನ್ ಬಶೀರ್(ರ)- ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜಃ)

2) ಎಷ್ಟು ರಕಅತ್ ಸಿಕ್ಕಿದರೆ ಜುಮಾ ನಮಾಝ್ ಸಿಕ್ಕಿದಂತಾಗುತ್ತದೆ?

ಇಮಾಮ್ ಶಾಫಿಈ ಸಹಿತ ಹೆಚ್ಚಿನ ಕರ್ಮಶಾಸ್ತ್ರ ವಿದ್ವಾಂಸರ ಪ್ರಕಾರ ಯಾರಿಗೆ ಜುಮಾ ನಮಾಝ್‌ನ ಒಂದು ರಕಅತ್ ಸಿಗುತ್ತದೋ ಅವನು ಇನ್ನೊಂದು ರಕಅತ್ ಮಾಡಬೇಕು. ಆದರೆ ಯಾರಾದರೂ ಎರಡನೆಯ ರಕಅತ್‌ನ ರುಕೂಅ್‌ನ ನಂತರ ಬಂದು ಸೇರಿದರೆ ಇಮಾಮ್ ಸಲಾಮ್ ಹೇಳಿದ ನಂತರ ಅವನು ಎದ್ದು ನಿಂತು ನಾಲ್ಕು ರಕಅತ್ ನಿರ್ವಹಿಸಬೇಕು. ಅವನ ನಮಾಝ್ ಝುಹರ್ ನಮಾಝ್ ಆಗಿರುವುದು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾರಿಗೆ ಜುಮಾದ ಎರಡನೆಯ ರಕಅತ್‌ನ ರುಕೂಅ್ ಸಿಕ್ಕಿತೋ ಅವನು ಇನ್ನೊಂದು ರಕಅತ್ ನಿರ್ವಹಿಸಬೇಕು. ಆದರೆ ಯಾರಿಗೆ (ಎರಡನೆಯ ರಕಅತ್‌ನ) ರುಕೂಅ್ ಕೂಡಾ ಸಿಗಲಿಲ್ಲವೋ ಅವನು ನಾಲ್ಕು ರಕಅತ್ ನಿರ್ವಹಿಸಬೇಕು."

(ವರದಿ: ಹ. ಅಬೂ ಹುರೈರಾ(ರ)- ದಾರಕುತ್ನಿ)

ಹನಫೀ ಕರ್ಮಶಾಸ್ತ್ರದ ಪ್ರಕಾರ ಜುಮಾ ನಮಾಝ್‌ನ ಸ್ವಲ್ಪಂಶವಾದರೂ ಸಿಕ್ಕಿದವನಿಗೆ ಜುಮಾದ ಜಮಾಅತ್ ಸಿಕ್ಕಿದಂತಾಗುತ್ತದೆ. ಇಮಾಮ್ ಅತ್ತಹಿಯ್ಯಾತ್‌ಗೆ ಕುಳಿತಾಗ ಬಂದು ಸೇರಿಕೊಂಡರೂ ಇಮಾಮ್ ಸಲಾಮ್ ಹೇಳಿದ ನಂತರ ಆತನು ಎರಡೇ ರಕಅತ್ ನಿರ್ವಹಿಸಿದರೆ ಸಾಕು. ಏಕೆಂದರೆ "ಜಮಾಅತ್‌ನ ಒಂದಂಶವನ್ನು ಪಡೆದವನು ಜಮಾಅತನ್ನು ಪಡೆದಂತೆ" ಎಂಬ ಪ್ರವಾದಿ ವಚನವು ಇತರ ನಮಾಝ್‌ಗಳಂತೆ ಜುಮಾ ನಮಾಝ್‌ಗೂ

ಅನ್ವಯಿಸುತ್ತದೆ ಎಂಬುದು ಅವರ ಅಭಿಪ್ರಾಯ. ಅಹ್ಲೆ ಹದೀಸ್ ಉಲಮಾಗಳೂ ಇದೇ ಅಭಿಪ್ರಾಯದವರಾಗಿದ್ದಾರೆ.

3) ಜುಮಾದ ಮೊದಲು ಮತ್ತು ನಂತರದ ಸುನ್ನತ್ ನಮಾಝ್‌ಗಳು: ಝುಹರ್ ನಂತೆಯೇ ಜುಮಾ ನಮಾಝ್‌ಗಿಂತ ಮೊದಲು ಹನಫೀ ಕ್ರಮದಂತೆ ನಾಲ್ಕು ರಕಅತ್ ಮತ್ತು ಶಾಫಿಈ ಕ್ರಮದಂತೆ ಎರಡು ಅಥವಾ ನಾಲ್ಕು ರಕಅತ್ ಸುನ್ನತ್ ನಿರ್ವಹಿಸಬೇಕು. ಜುಮಾ ನಮಾಝ್‌ನ ನಂತರ ನಾಲ್ಕು ರಕಅತ್ ಅಥವಾ ಎರಡು ರಕಅತ್ ಸುನ್ನತ್ ನಿರ್ವಹಿಸಬೇಕು. ಆದರೆ ಅಹ್ಲೆ ಹದೀಸ್ ಉಲಮಾಗಳ ಪ್ರಕಾರ ಜುಮಾ ನಮಾಝ್‌ಗೆ ಮೊದಲು ಯಾವುದೇ ನಿರ್ದಿಷ್ಟ ಸುನ್ನತ್ ನಮಾಝ್ ಇಲ್ಲ.

## ಶುಕ್ರವಾರದ ಮಹತ್ವ ಮತ್ತು ಪುಣ್ಯ ಕಾರ್ಯಗಳು:

1) ಪ್ರವಾದಿ(ಸ) ಈ ರೀತಿ ಹೇಳಿರುವರು-

"ಸೂರ್ಯ ಉದಿಸುವ ದಿನಗಳ ಪೈಕಿ ಅತ್ಯುತ್ತಮ ದಿನ ಶುಕ್ರವಾರವಾಗಿದೆ. ಅಂದೇ ಆದಮ್‌ರನ್ನು(ಅ) ಸೃಷ್ಟಿಸಲಾಯಿತು. ಅಂದೇ ಅವರು ಸ್ವರ್ಗಕ್ಕೆ ಪ್ರವೇಶಿಸಲ್ಪಟ್ಟರು. ಅಂದೇ ಅಲ್ಲಿಂದ ಹೊರಹಾಕಲ್ಪಟ್ಟರು ಮತ್ತು ಕಿಯಾಮತ್ ಕೂಡಾ ಶುಕ್ರವಾರದಂದೇ ಬರುವುದು."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ)

"ಶುಕ್ರವಾರದಂದು ಒಂದು ಘಳಿಗೆಯಿದೆ. ಆ ಘಳಿಗೆಯಲ್ಲಿ ಪ್ರಾರ್ಥಿಸುವ ಮತ್ತು ಅಲ್ಲಾಹನಿಂದ ಒಳಿತನ್ನು ಬಯಸುವ ಮುಸ್ಲಿಮನಿಗೆ ಅಲ್ಲಾಹನು ಆ ಒಳಿತನ್ನು ದಯಪಾಲಿಸುತ್ತಾನೆ ಮತ್ತು ಆ ಘಳಿಗೆ ಅಸರ್‌ನ ನಂತರವಿದೆ."

(ವರದಿ: ಹ. ಅಬೂ ಸಈದ್(ರ) ಮತ್ತು ಹ. ಅಬೂ ಹುರೈರಾ(ರ)- ಮುಸ್ನದ್ ಅಹ್ಮದ್)

2) ಶುಕ್ರವಾರದ ದಿನರಾತ್ರಿಗಳಲ್ಲಿ ಪ್ರವಾದಿವರ್ಯರ(ಸ) ಮೇಲೆ ಸಲಾತ್ ಹೇಳುವುದು ಬಹಳ ಪುಣ್ಯದಾಯಕವಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಿಮ್ಮ ದಿನಗಳ ಪೈಕಿ ಅತ್ಯುತ್ತಮ ದಿನ ಶುಕ್ರವಾರವಾಗಿದೆ. ಆ ದಿನವೇ ಆದಮ್‌ರ(ಅ) ಸೃಷ್ಟಿ ಮತ್ತು ಅವರ ನಿಧನವಾಯಿತು. ಆ ದಿನವೇ ಕಿಯಾಮತ್ ಬರುವುದು. ಆದ್ದರಿಂದ ಆ ದಿನ ನೀವು ನನ್ನ ಮೇಲೆ ಧಾರಾಳ ಸಲಾತ್ ಹೇಳಿರಿ. ಏಕೆಂದರೆ ನಿಮ್ಮ ಸಲಾತ್‌ಗಳನ್ನು ನನ್ನ ಮುಂದಿಡಲಾಗುವುದು. ಸಹಾಬಿಗಳು ಕೇಳಿದರು- ತಮ್ಮ ಮುಂದೆ ನಮ್ಮ ಸಲಾತ್‌ಗಳನ್ನು ಇಡುವುದು ಹೇಗೆ? ಆಗ ತಾವು ಕುಂಬಾಗಿರಲಿಕ್ಕಿಲ್ಲವೇ? ಆಗ ಪ್ರವಾದಿ(ಸ) ಹೇಳಿದರು- ಪ್ರವಾದಿಗಳ ಶರೀರಗಳನ್ನು ತಿನ್ನದಂತೆ ಅಲ್ಲಾಹನು ಭೂಮಿಗೆ ಅದನ್ನು ಹರಾಮ್ (ನಿಷಿದ್ಧ)ಗೊಳಿಸಿರುವನು."

(ವರದಿ: ಹ. ಔಸ್ ಬಿನ್ ಔಸ್(ರ)- ಅಬೂ ದಾವೂದ್, ನಸಾಈ, ಇಬ್ನು ಮಾಜಃ, ಅಹ್ಮದ್)

"ಶುಕ್ರವಾರ ದಿನ ಮತ್ತು ಶುಕ್ರವಾರ ರಾತ್ರಿ ಆದಾಗ ನನ್ನ ಮೇಲೆ ಧಾರಾಳ ಸಲಾತ್ ಹೇಳಿರಿ." (ಹ. ಸಫ್ವಾನ್ ಬಿನ್ ಸಲೀಮ್(ರ)- ಮುಸ್ನದ್ ಇಮಾಮ್ ಶಾಫಿಈ)

3) ಶುಕ್ರವಾರ ದಿನ ಸ್ನಾನ ಮಾಡುವುದು, ಹಲ್ಲುಜ್ಜುವುದು, ಸುಗಂಧ ದ್ರವ್ಯ ಹಚ್ಚುವುದು ಮತ್ತು ಉತ್ತಮ ಬಟ್ಟೆ ಧರಿಸುವುದು ಪುಣ್ಯದಾಯಕವಾಗಿದೆ. ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರಗಳ ಪ್ರಕಾರ ಅಂದು ಬಿಳಿ ಬಟ್ಟೆ ಉಡುವುದು ಉತ್ತಮ.

ಪ್ರವಾದಿ(ಸ) ಹೀಗೆ ಹೇಳಿರುವರು;

"ಪ್ರತಿಯೊಬ್ಬ ಮುಸ್ಲಿಮನೂ ಶುಕ್ರವಾರದಂದು ಸ್ನಾನ ಮಾಡಬೇಕು, ತನ್ನ ಉತ್ತಮ ಉಡುಪನ್ನು ಧರಿಸಬೇಕು ಮತ್ತು ಆತನ ಬಳಿ ಸುಗಂಧ ದ್ರವ್ಯವಿದ್ದರೆ ಅದನ್ನು ಹಚ್ಚಬೇಕು."

(ವರದಿ: ಹ. ಅಬೂ ಸಈದ್(ರ)- ಬುಖಾರಿ, ಮುಸ್ಲಿಮ್, ಅಹ್ಮದ್)

"ಒಂದು ಶುಕ್ರವಾರ ದಿನ ಪ್ರವಾದಿ(ಸ) ಹೀಗೆ ಹೇಳಿದರು: "ಮುಸ್ಲಿಮರೇ! ಈ ದಿನವನ್ನು ಅಲ್ಲಾಹನು ನಿಮಗೆ ಹಬ್ಬವಾಗಿ ಮಾಡಿರುವನು. ಆದ್ದರಿಂದ ನೀವು ಇಂದು ಸ್ನಾನ ಮಾಡಬೇಕು ಮತ್ತು ಹಲ್ಲುಜ್ಜಬೇಕು." (ವರದಿ: ಹ. ಅಬೂ ಹುರೈರಾ(ರ)- ತಬ್ರಾನಿ)

4) ಶುಕ್ರವಾರದಂದು ಆದಷ್ಟು ಬೇಗ ಮಸೀದಿಗೆ ತಲಪುವುದು ಕೂಡಾ ಪುಣ್ಯ ಕಾರ್ಯವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಶುಕ್ರವಾರ ದಿನ ಜನಾಬತ್‌ನ ಸ್ನಾನದಂತಹ ಸ್ನಾನ ಮಾಡಿ ಮಸೀದಿಗೆ ಹೋದವನು ಒಂದು ಒಂಟೆಯನ್ನು ದಾನ ಮಾಡಿದಂತೆ. ಅನಂತರ ದ್ವಿತೀಯ ಘಳಿಗೆಯಲ್ಲಿ ಹೋದವನು ಒಂದು ದನವನ್ನು ಬಲಿ ನೀಡಿದಂತೆ. ಆ ಬಳಿಕ ಮೂರನೆಯ ಘಳಿಗೆಯಲ್ಲಿ ಹೋದವನು ಕೊಂಬುಳ್ಳ ಒಂದು ಕುರಿಯನ್ನು ಬಲಿ ನೀಡಿದಂತೆ. ತರುವಾಯ ನಾಲ್ಕನೆಯ ಘಳಿಗೆಯಲ್ಲಿ ಹೋದವನು ಒಂದು ಕೋಳಿಯನ್ನು ದಾನ ಮಾಡಿದಂತೆ ಮತ್ತು ಐದನೆಯ ಘಳಿಗೆಯಲ್ಲಿ ಹೋದವನು ಒಂದು ಮೊಟ್ಟೆಯನ್ನು ದಾನ ಮಾಡಿದಂತೆ. ಆ ಬಳಿಕ ಇಮಾಮ್ ಬಂದಾಗ (ಅರ್ಥಾತ್ ಖುತ್‌ಬಾ ಆರಂಭವಾದಾಗ) ದೇವಚರರು ಬಂದು ಖುತ್‌ಬಾ ಆಲಿಸ ಲಾರಂಭಿಸುತ್ತಾರೆ."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ)

5) ಜುಮಾ ದಿವಸ ಖುತ್‌ಬಾ ಆರಂಭವಾಗುವುದಕ್ಕಿಂತ ಮುಂಚೆ ನಫಿಲ್ ನಮಾಝ್ ಮಾಡುವುದು ಪುಣ್ಯದಾಯಕವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾರು ಶುಕ್ರವಾರದಂದು ಸ್ನಾನ ಮಾಡಿ ಜುಮಾ ನಮಾಝ್‌ಗೆ ಬಂದನೋ ಮತ್ತು ತನಗೆ ಸಾಧ್ಯವಿದ್ದಷ್ಟು ನಫಿಲ್ ನಮಾಝ್ ಮಾಡಿದನೋ ಮತ್ತು ಇಮಾಮ್ ಖುತ್‌ಬಾ ಮುಗಿಸುವ ತನಕ ಮೌನವಾಗಿದ್ದು ಗಮನವಿಟ್ಟು ಆಲಿಸಿದನೋ ಅನಂತರ ಅವರ ಹಿಂದೆ

ನಮಾಝ್ ಮಾಡಿದನೋ- ಅವನ ಈ ಶುಕ್ರವಾರದಿಂದ ಬರುವ ಶುಕ್ರವಾರದ ವರೆಗಿನ ಪಾಪಗಳು ಮತ್ತು ಇನ್ನೂ ಮೂರು ದಿನಗಳ ಪಾಪಗಳು ಕ್ಷಮಿಸಲ್ಪಟ್ಟುವು."

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್)

ಖುತ್‌ಬಾ ಆರಂಭವಾದ ಕೂಡಲೇ ಎಲ್ಲಾ ರೀತಿಯ ನಫಿಲ್ ನಮಾಝ್‌ಗಳನ್ನು ಮುಗಿಸಬೇಕು. ಮೇಲಿನ ಹದೀಸ್‌ನಿಂದ ಅದು ವ್ಯಕ್ತವಾಗುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ಇಮಾಮ್ ಮಿಂಬರ್‌ನಲ್ಲಿರುವಾಗ(ಖುತ್‌ಬಾ ಆಗುತ್ತಿರುವಾಗ) ಮಸೀದಿಗೆ ಪ್ರವೇಶಿಸಿದರೆ ಯಾವುದೇ ಮಾತುಕತೆ ಅಥವಾ ನಮಾಝ್ ಮಾಡಬಾರದು. ನಾವು ಖುತ್‌ಬಾ ಮುಗಿಸುವ ತನಕ."

(ಹ. ಇಬ್ನು ಉಮರ್(ರ)- ತಬ್ರಾನಿ)

ಇಮಾಮ್ ಅಬೂ ಹನೀಫಾರ(ರ) ಅಭಿಪ್ರಾಯವೂ ಇದುವೇ ಆಗಿದೆ. ಆದರೆ ಇಮಾಮ್ ಶಾಫಿಈಯವರ(ರ) ಪ್ರಕಾರ ಖುತ್‌ಬಾ ನಡೆಯುತ್ತಿರುವಾಗ ಇತರ ನಫಿಲ್ ನಮಾಝ್‌ಗಳನ್ನು ನಿರ್ವಹಿಸಬಾರದು. ಆದರೆ ತಹಿಯ್ಯತುಲ್ ಮಸ್ಜಿದ್‌ನ ಎರಡು ರಕಅತ್ ನಮಾಝ್ ಮಾಡಬಹುದಾಗಿದೆ.

6) ಶುಕ್ರವಾರದ ಫಜ್ರ್ ನಮಾಝ್‌ನಲ್ಲಿ ಸೂರಃ ಅಸ್ಸಜ್ದ ಮತ್ತು ಸೂರಃ ಅದ್ದಹ್ರ್ ಪಠಿಸುವುದು ಉತ್ತಮವಾಗಿದೆ. "ಶುಕ್ರವಾರ ಫಜ್ರ್ ನಮಾಝ್‌ನಲ್ಲಿ ಪ್ರವಾದಿವರ್ಯರು(ಸ) ಸೂರಃ ಅಸ್ಸಜ್ದಃ ಮತ್ತು ಸೂರಃ ಅದ್ದಹ್ರ್ ಹಾಗೂ ಜುಮಾ ನಮಾಝ್‌ನಲ್ಲಿ ಸೂರಃ ಜುಮುಅ ಮತ್ತು ಸೂರಃ ಮುನಾಫಿಕೂನ್ ಪಠಿಸುತ್ತಿದ್ದರು."

(ವರದಿ: ಹ. ಇಬ್ನು ಅಬ್ಬಾಸ್(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ನಸಾಈ)

◈

# ವಿತ್ರ್ ನಮಾಝ್

ವಿತ್ರ್ ಎಂದರೆ ಬೆಸ ಸಂಖ್ಯೆಯಾಗಿದೆ. ವಿತ್ರ್ ನಮಾಝ್‌ನ ರಕಅತ್‌ಗಳು ಬೆಸ ಸಂಖ್ಯೆಯಲ್ಲಿರುವುದರಿಂದ ಅದನ್ನು ವಿತ್ರ್ ಎನ್ನಲಾಗುತ್ತದೆ.

**1. ಮಹತ್ವ:** ಪ್ರವಾದಿ(ಸ) ವಿತ್ರ್ ನಮಾಝನ್ನು ಬಹಳ ಒತ್ತು ನೀಡಿ ಆಜ್ಞಾಪಿಸಿರುವರು:

"ಅಲ್ಲಾಹನು ನಿಮ್ಮ ಪಾಲಿಗೆ ಕೆಂಪು ಒಂಟೆಗಳಿಗಿಂತ ಉತ್ತಮವಾದ ಒಂದು ನಮಾಝ್‌ನ ಮೂಲಕ ನಿಮಗೆ ಸಹಾಯ ಮಾಡಿರುವನು. ನಾವು ಕೇಳಿದೆವು- ಅಲ್ಲಾಹನ ಪ್ರವಾದಿಗಳೇ! ಅದು ಯಾವ ನಮಾಝ್? ಆಗ ಪ್ರವಾದಿ(ಸ)- ವಿತ್ರ್. ಅದರ ಸಮಯವು ಇಶಾ ನಮಾಝ್‌ನ ನಂತರ ಪ್ರಭಾತ ಉದಯದ ತನಕ ಇದೆ."

**(ವರದಿ: ಹ. ಖಾರಿಜ ಬಿನ್ ಹುದಾಫ(ರ)- ಅಬೂ ದಾವೂದ್, ತಿರ್ಮಿದಿ, ಇಬ್ನು ಮಾಜ:, ಅಹ್ಮದ್)**

"ಓ ಕುರ್‌ಆನ್‌ನವರೇ! ವಿತ್ರ್ ನಿರ್ವಹಿಸಿರಿ. ಅಲ್ಲಾಹನು ವಿತ್ರ್(ಏಕ) ಆಗಿದ್ದು ವಿತ್ರ್ ಅನ್ನು ಅವನು ಇಷ್ಟಪಡುತ್ತಾನೆ."

**(ವರದಿ: ಹ. ಅಲೀ ಬಿನ್ ಅಬೀ ತಾಲಿಬ್(ರ)- ಅಬೂ ದಾವೂದ್, ಇಬ್ನು ಮಾಜ:)**

**2. ವಿತ್ರ್‌ನ ವಿಧಿ:** ಬಹುಸಂಖ್ಯಾತ ಕರ್ಮಶಾಸ್ತ್ರ ಪಂಡಿತರ ಅಭಿಪ್ರಾಯ ಪ್ರಕಾರ ವಿತ್ರ್ ಸುನ್ನತ್ ಆಗಿದೆ. ಇಮಾಮ್ ಶಾಫಿಈ(ರ) ಕೂಡಾ ಇದೇ ಅಭಿಪ್ರಾಯದವರು. ಆದರೆ ಅದು ಸುನ್ನತ್ ನಮಾಝ್‌ಗಳಲ್ಲಿ ಹೆಚ್ಚು ಮಹತ್ವದ್ದಾಗಿದೆ.

ಹನಫೀ ಕರ್ಮಶಾಸ್ತ್ರದ ಪ್ರಕಾರ ವಿತ್ರ್ ನಮಾಝ್ ವಾಜಿಬ್ ಆಗಿದೆ. (ಫರ್ಝ್ ಮತ್ತು ಸುನ್ನತ್‌ನ ಮಧ್ಯೆ)

**3. ವಿತ್ರ್‌ನ ಸಮಯ:** ಮೇಲಿನ ಹದೀಸ್‌ನಿಂದ ತಿಳಿದು ಬರುವಂತೆ ವಿತ್ರ್‌ನ ಸಮಯವು ಇಶಾ ನಮಾಝ್‌ನ ನಂತರ ಫಜ್ರ್ ತನಕ ಇದೆ. ಆದರೆ ರಾತ್ರಿಯ ಅಂತಿಮ ಘಳಿಗೆಗಳಲ್ಲಿ ಫಜ್ರ್‌ನ ಸಮಯವು ಸಮೀಪಿಸಿದಾಗ ಅದನ್ನು ನಿರ್ವಹಿಸುವುದು ಹೆಚ್ಚು ಪುಣ್ಯದಾಯಕವಾಗಿದೆ. ಒಂದು ವೇಳೆ ಯಾರಿಗಾದರೂ ರಾತ್ರಿಯ ಅಂತಿಮ ಘಳಿಗೆಗಳಲ್ಲಿ ಏಳುವ ಕುರಿತು ಭರವಸೆಯಿಲ್ಲದಿದ್ದರೆ ಆತ ಇಶಾ ನಮಾಝ್‌ನ ನಂತರವೇ ಅದನ್ನು ನಿರ್ವಹಿಸುವುದು ಒಳ್ಳೆಯದು.

"ಪ್ರವಾದಿ(ಸ) ವಿತ್ರ್ ನಮಾಝನ್ನು ರಾತ್ರಿಯ ಆರಂಭದಲ್ಲಿ ಅರ್ಧರಾತ್ರಿಯಲ್ಲಿ ಮತ್ತು ಅಂತಿಮ ರಾತ್ರಿಯಲ್ಲಿ ನಿರ್ವಹಿಸುತ್ತಿದ್ದರು."

(ವರದಿ: ಹ. ಅಬೂ ಮಸ್‌ಊದ್ ಅನ್ಸಾರಿ(ರ)- ಮುಸ್ನದ್ ಅಹ್ಮದ್)

ಪ್ರವಾದಿ(ಸ) ಅವರು ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಿಗೆ ರಾತ್ರಿಯ ಕೊನೆಯ ಘಳಿಗೆಯಲ್ಲಿ ಏಳುವ ಭರವಸೆಯಿಲ್ಲವೋ ಅವನು ರಾತ್ರಿಯ ಆರಂಭದಲ್ಲೇ ವಿತ್ರ್ ನಿರ್ವಹಿಸಲಿ. ಯಾರಿಗೆ ರಾತ್ರಿಯ ಅಂತಿಮ ಘಳಿಗೆಯಲ್ಲಿ ಏಳುವ ಭರವಸೆಯಿದೆಯೋ ಅವನು ಅದನ್ನು ರಾತ್ರಿಯ ಅಂತಿಮ ಘಳಿಗೆಯಲ್ಲೇ ನಿರ್ವಹಿಸಲಿ. ಏಕೆಂದರೆ ರಾತ್ರಿಯ ಅಂತಿಮ ಘಳಿಗೆಯ ನಮಾಝ್‌ನಲ್ಲಿ ಮಲಕ್‌ಗಳು ಬರುತ್ತಾರೆ ಮತ್ತು ಅದು ಶ್ರೇಷ್ಠವಾಗಿದೆ."

(ವರದಿ: ಹ. ಜಾಬಿರ್(ರ)- ಅಹ್ಮದ್, ಮುಸ್ಲಿಮ್, ತಿರ್ಮಿದಿ, ಇಬ್ನು ಮಾಜಃ)

**4. ವಿತ್ರ್‌ನ ರಕಅತ್‌ಗಳು:** ಪ್ರವಾದಿವರ್ಯರು(ಸ) ವಿತ್ರ್‌ನಲ್ಲಿ ಒಂದು, ಮೂರು, ಐದು, ಏಳು, ಒಂಭತ್ತು ಮತ್ತು ಹನ್ನೊಂದು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು.

1) ಒಂದು ರಕಅತ್: ಪ್ರವಾದಿ(ಸ) ಹೇಳಿರುವರು: "ರಾತ್ರಿಯ ಅಂತಿಮ ಘಳಿಗೆಯಲ್ಲಿ ಒಂದು ರಕಅತ್ ಇದೆ."

(ವರದಿ: ಹ. ಇಬ್ನು ಉಮರ್ ಮತ್ತು ಇಬ್ನು ಅಬ್ಬಾಸ್(ರ)- ಅಹ್ಮದ್, ಮುಸ್ಲಿಮ್)

2) ಮೂರು ರಕಅತ್‌ಗಳು: "ಪ್ರವಾದಿ(ಸ) ವಿತ್ರ್‌ನಲ್ಲಿ ಮೂರು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು." (ವರದಿ: ಹ. ಅಲೀ(ರ)- ಮುಸ್ನದ್ ಅಹ್ಮದ್)

3) ಐದು ರಕಅತ್‌ಗಳು: "ಪ್ರವಾದಿ(ಸ) ರಾತ್ರಿ ಹದಿಮೂರು ರಕಅತ್ ನಮಾಝ್ ಮಾಡುತ್ತಿದ್ದರು. ಅವುಗಳ ಪೈಕಿ ವಿತ್ರ್ ಕೇವಲ ಐದು ರಕಅತ್‌ಗಳಾಗಿರುತ್ತಿದ್ದುವು. ಅವುಗಳಲ್ಲಿ ಪ್ರವಾದಿ(ಸ) ಕೊನೆಯ ರಕಅತ್‌ಗಿಂತ ಮುಂಚೆ ಕುಳಿತುಕೊಳ್ಳುತ್ತಿರಲಿಲ್ಲ."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

4) ಏಳು ಮತ್ತು ಒಂಭತ್ತು ರಕಅತ್‌ಗಳು:

"ಪ್ರವಾದಿ(ಸ) ರಾತ್ರಿ (ವಿತ್ರ್‌ನ) ಒಂಭತ್ತು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು. ಆ ಪೈಕಿ ಕೇವಲ ಎಂಟನೆಯ ರಕಅತ್‌ನಲ್ಲಿ ಕುಳಿತುಕೊಳ್ಳುತ್ತಿದ್ದರು. ಅಲ್ಲಾಹನ ದಿಕ್ರ್ ಮತ್ತು ದುಆ ಮಾಡುತ್ತಿದ್ದರು. ಅನಂತರ ಸಲಾಮ್ ಹೇಳದೆಯೇ ಎದ್ದು ನಿಲ್ಲುತ್ತಿದ್ದರು. ಆ ಬಳಿಕ ಒಂಭತ್ತನೆಯ ರಕಅತ್ ನಿರ್ವಹಿಸುತ್ತಿದ್ದರು. ಅದರಲ್ಲಿ ಕುಳಿತು ಅತ್ತಹಿಯ್ಯಾತ್ ಪಠಿಸಿ ನಮಗೆ ಕೇಳಿಸುವಂತೆ ಸಲಾಮ್ ಹೇಳುತ್ತಿದ್ದರು. ತರುವಾಯ ಸಲಾಮ್‌ನ ನಂತರ ಎರಡು ರಕಅತ್‌ಗಳನ್ನು ಕುಳಿತುಕೊಂಡು ನಿರ್ವಹಿಸುತ್ತಿದ್ದರು. ಈ ರೀತಿ ಒಟ್ಟು ಹನ್ನೊಂದು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು. ಅವರ ಪ್ರಾಯ ಅಧಿಕವಾಗಿ ವೃದ್ಧಾಪ್ಯ ಬಂದಾಗ ಅವರು ವಿತ್ರ್‌ನಲ್ಲಿ ಏಳು ರಕಅತ್ ನಿರ್ವಹಿಸತೊಡಗಿದರು. ಅವರು ಮೊದಲು ಮಾಡುತ್ತಿದ್ದಂತೆಯೇ

ಮಾಡುತ್ತಿದ್ದರು. (ಇನ್ನೊಂದು ವರದಿಯಲ್ಲಿರುವಂತೆ) ಪ್ರವಾದಿ(ಸ) ವಿತ್ರ್‌ನಲ್ಲಿ ಏಳು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು. ಆರನೆಯ ಮತ್ತು ಏಳನೆಯ ರಕಅತ್‌ನ ಹೊರತು ಇತರ ಯಾವ ರಕಅತ್‌ನಲ್ಲೂ ಕುಳಿತುಕೊಳ್ಳುತ್ತಿರಲಿಲ್ಲ ಮತ್ತು ಏಳನೆಯ ರಕಅತ್‌ನಲ್ಲಿ ಸಲಾಮ್ ಹೇಳುತ್ತಿದ್ದರು." (ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ನಸಾಈ, ಇಬ್ನು ಮಾಜ:)

5) ಹನ್ನೊಂದು ರಕಅತ್‌ಗಳು: ಪ್ರವಾದಿ(ಸ) ಹೇಳಿರುವರು-

"ವಿತ್ರ್‌ನಲ್ಲಿ ಮೂರು ರಕಅತ್‌ಗಳನ್ನು ನಿರ್ವಹಿಸಬೇಡಿರಿ. ವಿತ್ರನ್ನು ಮಗ್ರಿಬ್‌ನಂತೆ ಮಾಡಬೇಡಿರಿ. ವಿತ್ರ್‌ನಲ್ಲಿ ಐದು, ಏಳು, ಒಂಭತ್ತು ಅಥವಾ ಅದಕ್ಕಿಂತ ಹೆಚ್ಚಿನ ರಕಅತ್‌ಗಳನ್ನು ನಿರ್ವಹಿಸಿರಿ." (ವರದಿ: ಹ. ಅಬೂ ಹುರೈರಾ(ರ)- ಮುಹಮ್ಮದ್ ಬಿನ್ ನಸ್ರ್)

ಶಾಫಿಈ ಕ್ರಮದಂತೆ ವಿತ್ರ್‌ನಲ್ಲಿ ಒಂದರಿಂದ ಹನ್ನೊಂದರ ತನಕದ ರಕಅತ್‌ಗಳನ್ನು ನಿರ್ವಹಿಸಬಹುದು. ಒಂದು ರಕಅತ್ ಮಾತ್ರ ನಿರ್ವಹಿಸುವುದು ಒಳ್ಳೆಯದಲ್ಲ. ಕನಿಷ್ಠ ಮೂರು ರಕಅತ್ ನಿರ್ವಹಿಸುವುದು ಉತ್ತಮ. ಇವುಗಳ ಪೈಕಿ ಎರಡು ರಕಅತ್ ನಮಾಝ್ ಮಾಡಿ ಸಲಾಮ್ ಹೇಳಿದ ನಂತರ ಒಂದು ರಕಅತ್ ನಿರ್ವಹಿಸಬೇಕು. ಐದು, ಏಳು, ಒಂಭತ್ತು ಅಥವಾ ಹನ್ನೊಂದು ರಕಅತ್ ನಿರ್ವಹಿಸುವುದಾದರೂ ಕ್ರಮವಾಗಿ ನಾಲ್ಕನೆಯ, ಆರನೆಯ, ಎಂಟನೆಯ ಮತ್ತು ಹತ್ತನೆಯ ರಕಅತ್‌ನಲ್ಲಿ ಮಾತ್ರ ಅತ್ತಹಿಯ್ಯಾತ್ ಮಾಡಿ ಸಲಾಮ್ ಹೇಳಿ ಒಂದು ರಕಅತನ್ನು ಬೇರೆ ನಿರ್ವಹಿಸಬೇಕು.

ಹನಫೀ ಕ್ರಮದಂತೆ ವಿತ್ರ್‌ಗೆ ಕೇವಲ ಮೂರೇ ರಕಅತ್‌ಗಳಿವೆ. ಆ ಮೂರು ರಕಅತ್‌ಗಳನ್ನು ಒಟ್ಟಾಗಿ ನಿರ್ವಹಿಸಬೇಕು. ಎರಡನೆಯ ರಕಅತ್‌ನಲ್ಲಿ ಕುಳಿತು ಅತ್ತಹಿಯ್ಯಾತ್ ಪಠಿಸಬೇಕು. ಆದರೆ ಸಲಾಮ್ ಹೇಳಬಾರದು. ಬದಲಾಗಿ ಎದ್ದು ನಿಂತು ಮೂರನೆಯ ರಕಅತ್ ನಿರ್ವಹಿಸಬೇಕು. ಅದರ ಕೊನೆಯಲ್ಲಿ ಕುಳಿತು ಅತ್ತಹಿಯ್ಯಾತ್, ಸಲಾಮ್ ಮತ್ತು ದುಆ ಪಠಿಸಿ ಸಲಾಮ್ ಹೇಳಬೇಕು.

**5. ವಿತ್ರ್‌ನ ಮೂರು ರಕಅತ್‌ಗಳಲ್ಲಿ ಕ್ರಮವಾಗಿ ಸೂರಃ ಅಲ್ ಅಅ್‌ಲಾ, ಅಲ್ ಕಾಫಿರೂನ್ ಮತ್ತು ಅಲ್ ಇಖ್ಲಾಸ್ ಪಠಿಸುವುದು ಸುನ್ನತ್ ಆಗಿದೆ:**

ಪ್ರವಾದಿ(ಸ) ವಿತ್ರ್‌ನಲ್ಲಿ 'ಸಬ್ಬಿಹಿಸ್ಮ ರಬ್ಬಿಕಲ್ ಅಅ್‌ಲಾ' ,'ಕುಲ್ ಯಾ ಅಯ್ಯುಹಲ್ ಕಾಫಿರೂನ್' ಮತ್ತು 'ಕುಲ್ ಹುವಲ್ಲಾಹು ಅಹದ್' ಪಠಿಸುತ್ತಿದ್ದರು.

(ವರದಿ: ಹ. ಉಬೈ ಬಿನ್ ಕಅಬ್(ರ)- ಅಬೂ ದಾವೂದ್, ಅಹ್ಮದ್, ನಸಾಈ)

**6. ವಿತ್ರ್‌ನಲ್ಲಿ ಕುನೂತ್:**

ಯಾವುದೇ ಸಹೀಹ್ ಹದೀಸ್‌ನಲ್ಲಿ ವಿತ್ರ್‌ನಲ್ಲಿ ಕುನೂತ್ ಓದಬೇಕೆಂಬುದಕ್ಕೆ ಆಧಾರವಿಲ್ಲ. ಆದರೆ ಹ. ಹಸನ್‌ರವರ(ರ) ಒಂದು ವರದಿ ಮಾತ್ರ ಇದೆ. ಅದನ್ನು ಹೆಚ್ಚಿನ ಹದೀಸ್ ವಿದ್ವಾಂಸರು ದುರ್ಬಲವೆಂದಿರುವರು.

ಹನಫೀ ಕರ್ಮಶಾಸ್ತ್ರದ ಪ್ರಕಾರ ವಿತ್ರ್‌ನಲ್ಲಿ ನಿತ್ಯವೂ ಕುನೂತ್ ಪಠಿಸುವುದು ಕಡ್ಡಾಯ(ವಾಜಿಬ್)ವಾಗಿದೆ. ಹ. ಇಬ್ನು ಮಸ್‌ಊದ್‌ರಿಂದ(ರ) ಸಾಬೀತುಗೊಂಡಿರುವ ಈ ದುಆವನ್ನೇ ಹನಫೀಗಳು ಕುನೂತ್‌ನಲ್ಲಿ ಪಠಿಸುತ್ತಾರೆ.

اَللّٰهُمَّ اِنَّا نَسْتَعِينُكَ وَنَسْتَغْفِرُكَ وَنُؤْمِنُ بِكَ وَنَتَوَكَّلُ عَلَيْكَ وَنُثْنِي عَلَيْكَ الْخَيْرَ وَنَشْكُرُكَ وَلَا نَكْفُرُكَ وَنَخْلَعُ وَنَتْرُكُ مَنْ يَّفْجُرُكَ، اَللّٰهُمَّ اِيَّاكَ نَعْبُدُ وَلَكَ نُصَلِّى وَنَسْجُدُ وَاِلَيْكَ نَسْعٰى وَنَحْفِدُ وَنَرْجُو رَحْمَتَكَ وَنَخْشٰى عَذَابَكَ اِنَّ عَذَابَكَ بِالْكُفَّارِ مُلْحِقٌ

**"ಅಲ್ಲಾಹುಮ್ಮ ಇನ್ನಾ ನಸ್ತಈನುಕ ವ ನಸ್‌ತಗ್‌ಫಿರುಕ ವ ನುಅ್‌ಮಿನು ಬಿಕ ವ ನತವಕ್ಕಲು ಅಲೈಕ ವನುಸ್‌ನೀ ಅಲೈಕಲ್ ಖೈರ ವನಷ್ಕುರುಕ ವಲಾ ನಕ್‌ಫುರುಕ ವನಖ್‌ಲಉ ವನತ್‌ರುಕು ಮಂಯಫ್‌ಜುರುಕ. ಅಲ್ಲಾಹುಮ್ಮ ಇಯ್ಯಾಕ ನಅ್‌ಬುದು ವಲಕನುಸಲ್ಲೀ ವನಸ್‌ಜುದು ವ ಇಲೈಕ ನಸ್‌ಆ ವನಹ್‌ಫಿದು ವ ನರ್ಜೂ ರಹ್‌ಮತಕ ವನಖ್‌ಶಾ ಅದಾಬಕ. ಇನ್ನ ಅದಾಬಕ ಬಿಲ್ ಕುಫ್ಫಾರಿ ಮುಲ್‌ಹಿಕ್."**

ಅರ್ಥ: ಓ ಅಲ್ಲಾಹ್! ನಾವು ನಿನ್ನಿಂದ ಸಹಾಯ ಯಾಚಿಸುತ್ತೇವೆ ಮತ್ತು ಕ್ಷಮೆ ಬೇಡುತ್ತೇವೆ. ನಿನ್ನ ಮೇಲೆ ವಿಶ್ವಾಸವಿರಿಸುತ್ತೇವೆ ಮತ್ತು ನಿನ್ನ ಮೇಲೆ ಭರವಸೆ ಇರಿಸುತ್ತೇವೆ. ನಿನ್ನ ಸ್ತುತಿ-ಸ್ತೋತ್ರ ಮಾಡುತ್ತೇವೆ. ನಿನಗೆ ಕೃತಜ್ಞತೆ ಸಲ್ಲಿಸುತ್ತೇವೆ. ನಿನ್ನ ಕೃತಘ್ನರಾಗುವುದಿಲ್ಲ. ನಿನಗೆ ಅವಿಧೇಯತೆ ತೋರುವವನಿಂದ ನಾವು ಬೇರ್ಪಡುವೆವು. ಓ ಅಲ್ಲಾಹ್! ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ. ನಿನಗಾಗಿ ಮಾತ್ರ ನಮಾಝ್ ಮಾಡುತ್ತೇವೆ. ನಿನಗಾಗಿಯೇ ಸುಜೂದ್ ಮಾಡುತ್ತೇವೆ. ನಿನ್ನ ಕಡೆಗೇ ಧಾವಿಸುತ್ತೇವೆ. ನಿನ್ನ ಸೇವೆಗೆ ಹಾಜರಾಗುತ್ತೇವೆ. ನಿನ್ನ ಕರುಣೆಯನ್ನೇ ನಿರೀಕ್ಷಿಸುತ್ತೇವೆ. ನಿನ್ನ ಯಾತನೆಯನ್ನು ಭಯಪಡುತ್ತೇವೆ. ನಿನ್ನ ಯಾತನೆಯಂತೂ ಸತ್ಯನಿಷೇಧಿಗಳಿಗೆ ಸಿಕ್ಕಿಯೇ ತೀರುವುದು.

ಯಾರಿಗಾದರೂ ಈ ದುಆ ನೆನಪಿಲ್ಲದಿದ್ದರೆ ಅವನು ಹೀಗೆ ಪ್ರಾರ್ಥಿಸಬಹುದು: **"ರಬ್ಬನಾ ಆತಿನಾ ಫಿದ್ದುನ್ಯಾ ಹಸನತನ್ ವಫಿಲ್ ಆಖಿರತಿ ಹಸನತನ್ ವಕಿನಾ ಅದಾಬನ್ನಾರ್."**

ಅರ್ಥ: ಓ ನಮ್ಮ ಪ್ರಭೂ! ನಮಗೆ ಇಹಲೋಕದಲ್ಲೂ ಒಳಿತನ್ನು ದಯಪಾಲಿಸು. ಪರಲೋಕದಲ್ಲೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ನರಕದ ಅಗ್ನಿಯಿಂದ ರಕ್ಷಿಸು.

ಶಾಫಿಈ ಕ್ರಮದಂತೆ ವರ್ಷದಲ್ಲಿ ಕೇವಲ ರಮಝಾನ್ ತಿಂಗಳ 16ನೆಯ ರಾತ್ರಿಯಿಂದ ರಮಝಾನ್ ಮುಗಿಯುವ ತನಕ ವಿತ್ರ್ ನಮಾಝ್‌ನಲ್ಲಿ ಕುನೂತ್ ಪಠಿಸಬೇಕು. ಅದರ ದುಆ ಈ ರೀತಿಯಿದೆ:

اَللّٰهُمَّ اهْدِنِى فِى مَنْ هَدَيْتَ، وَعَافِنِى فِى مَنْ عَافَيْتَ، وَ تَوَلَّنِى فِى مَنْ تَوَلَّيْتَ، وَبَارِكْ لِى فِى مَآ اَعْطَيْتَ، وَقِنِى شَرَّ مَا قَضَيْتَ، فَاِنَّكَ تَقْضِى وَلَا يُقْضٰى عَلَيْكَ، اِنَّهُ لَا يَذِلُّ مَنْ وَّالَيْتَ، وَلَا يَعِزُّ مَنْ عَادَيْتَ (سُبْحَانَكَ) تَبَارَكْتَ رَبَّنَا وَتَعَالَيْتَ (وَصَلَّى اللّٰهُ عَلَى النَّبِىِّ)

(احمد، ابوداؤد، ترمذی، نسائی، ابن ماجة)

"ಅಲ್ಲಾಹುಮ್ಮಹ್‌ದಿನೀ ಫೀಮನ್ ಹದೈತ, ವಆಫಿನೀ ಫೀಮನ್ ಆಫೈತ, ವತವಲ್ಲನೀ ಫೀಮನ್ ತವಲ್ಲೈತ, ವಬಾರಿಕ್ ಲೀ ಫೀಮಾ ಅಅ್‌ತೈತ, ವಕಿನೀ ಶರ್‌ರಮಾ ಕದೈತ, ಫಇನ್ನಕ ತಕ್‌ದೀ ವಲಾ ಯುಕ್‌ದಾ ಅಲೈಕ ಇನ್ನಹು ಲಾ ಯದಿಲ್ಲು ಮಂವಾಲೈತ, ವಲಾ ಯಇಝ್ಝು ಮನ್ ಆದೈತ. (ಸುಬ್‌ಹಾನಕ) ತಬಾರಕ್ತ ರಬ್ಬನಾ ವತ ಆಲೈತ (ವಸಲ್ಲಲ್ಲಾಹು ಅಲನ್ನಬಿಯ್ಯಿ.)"

ಅರ್ಥ: ಓ ಅಲ್ಲಾಹ್! ನೀನು ಸನ್ಮಾರ್ಗ ನೀಡಿದ ಜನರ ಜತೆ ನನಗೂ ಸನ್ಮಾರ್ಗ ನೀಡು. ನೀನು ಕ್ಷೇಮವನ್ನು ದಯಪಾಲಿಸಿದ ಜನರ ಜತೆಗೆ ನನಗೂ ಕ್ಷೇಮವನ್ನು ದಯಪಾಲಿಸು. ನೀನು ಸಂರಕ್ಷಕನಾದ ಜನರ ಜತೆಗೆ ನನ್ನ ಸಂರಕ್ಷಕನೂ ಆಗು. ನೀನು ನನಗೆ ದಯಪಾಲಿಸಿರುವ ಅನುಗ್ರಹಗಳಲ್ಲಿ ಸಮೃದ್ಧಿಯನ್ನು ನೀಡು. ನಿನ್ನ ವಿಧಿಯ ಕೇಡಿನಿಂದ ನನ್ನನ್ನು ರಕ್ಷಿಸು. ಏಕೆಂದರೆ ನೀನೇ ತೀರ್ಮಾನ ಮಾಡುವವನಾಗಿರುವಿ. ನಿನ್ನೆದುರು ಯಾರೂ ತೀರ್ಮಾನ ಮಾಡುವವರಿಲ್ಲ. ನೀನು ಯಾರ ರಕ್ಷಕನಾದೆಯೋ ಅವನೆಂದೂ ನಿಂದ್ಯನಾಗಲಾರನು. ನೀನು ಯಾರ ಶತ್ರುವಾದೆಯೋ ಅವನಿಗಾರೂ ಪ್ರತಾಪವನ್ನು ನೀಡಲಾರನು. ಓ ನಮ್ಮ ಪ್ರಭೂ! ನೀನು ಮಂಗಳಮಯನು ಮತ್ತು ಉನ್ನತನು (ಮತ್ತು ಅಲ್ಲಾಹನ ಪ್ರವಾದಿಯ ಮೇಲೆ ಸಲಾತ್ ಮತ್ತು ಸಲಾಮ್ ಇಳಿಸಲಿ.)

(ವರದಿ: ಹ. ಹಸನ್(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ, ಬೈಹಕಿ, ಹಾಕಿಮ್, ದಾರಕುತ್ನಿ, ಇಬ್ನು ಹಿಬ್ಬಾನ್)

## ಕುನೂತನ್ನು ಯಾವಾಗ ಪಠಿಸಬೇಕು?

ಕುನೂತನ್ನು ವಿತ್ರ್‌ನ ಕೊನೆಯ ರಕಅತ್‌ನ ರುಕೂಅ್‌ಗಿಂತ ಮೊದಲು ಮತ್ತು ರುಕೂಅ್‌ನ ನಂತರ ನಿರ್ವಹಿಸಿದ ಬಗ್ಗೆ ಸಹಾಬಿಗಳ ನಡವಳಿಕೆಯಲ್ಲಿ ಮಾದರಿಯಿದೆ.

ಹನಫೀ ಕ್ರಮದಂತೆ, ವಿತ್ರ್‌ನಲ್ಲಿ ಕುನೂತ್ ರುಕೂಅ್‌ಗಿಂತ ಮೊದಲು ಪಠಿಸಬೇಕು. ಶಾಫಿಈ ಕ್ರಮದಂತೆ, ರುಕೂಅ್‌ನ ನಂತರ ಪಠಿಸಬೇಕು.

ಕುನೂತ್‌ಗಾಗಿ ತಕ್ಬೀರ್ ಮತ್ತು ರಫಉಲ್‌ಯದೈನ್ ಮಾಡಿದ ಬಗ್ಗೆ ಕೆಲವು ಸಹಾಬಿಗಳ ನಡವಳಿಕೆಯಲ್ಲಿ ಮಾದರಿಯಿದೆ.

ಹನಫೀ ಕ್ರಮದಂತೆ ಕಿರಾಅತ್‌ನ ನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ 'ತಕ್ಬೀರುಲ್ ಊಲಾ'ದಲ್ಲಿ ಕೈ ಎತ್ತಿದಂತೆ ಎತ್ತಬೇಕು ಮತ್ತು ಪುನಃ ಕಟ್ಟಿಕೊಳ್ಳಬೇಕು. ಕುನೂತ್ ಪಠಿಸಿ 'ಅಲ್ಲಾಹು ಅಕ್ಬರ್' ಎನ್ನುತ್ತಾ ರುಕೂಅ್ ಮಾಡಬೇಕು.

ಶಾಫಿಈ ಕ್ರಮದಂತೆ ರುಕೂಅ್‌ನ ನಂತರ ಎದ್ದು ನಿಂತು 'ಸಮಿಅಲ್ಲಾಹು ಲಿಮನ್ ಹಮಿದಃ' ಹೇಳಿದ ನಂತರ ಕೈ ಎತ್ತಿ ಕುನೂತ್ ಓದಬೇಕು. ಅನಂತರ ಅಲ್ಲಾಹು ಅಕ್ಬರ್ ಎನ್ನುತ್ತಾ ಸುಜೂದ್ ಮಾಡಬೇಕು.

**7. ವಿತ್ರ್‌ನ ನಂತರದ ದುಆ:**

ಪ್ರವಾದಿ(ಸ) ವಿತ್ರ್‌ನ ನಂತರ ಸಲಾಮ್ ಹೇಳಿದ ಬಳಿಕ ಮೂರು ಸಲ ಈ ದುಆ ಪಠಿಸುತ್ತಿದ್ದರು.

سُبْحَانَ الْمَلِكِ الْقُدُّوسِ (بیهقی،حاکم، دارقطنی، ابن حبان)

**"ಸುಬ್‌ಹಾನಲ್ ಮಲಿಕಿಲ್ ಕುದ್ದೂಸ್."**

ಅರ್ಥ: ಸ್ತುತಿ ಮತ್ತು ಪಾವನತೆಯ ಅಧಿಪತಿ ಪರಮ ಪಾವನನಾಗಿರುವನು.

**(ವರದಿ: ಹ. ಉಬೈ ಬಿನ್ ಕಅ್‌ಬ್(ರ)- ಬೈಹಕಿ, ಹಾಕಿಮ್, ದಾರಕುತ್ನಿ, ಇಬ್ನು ಹಿಬ್ಬಾನ್)**

ಹ. ಅಬ್ದುರ್ರಹ್ಮಾನ್ ಬಿನ್ ಅಂಬರಿಯವರ(ರ) ವರದಿಯಲ್ಲಿ ಈ ಕೆಳಗಿನ ಪದಗಳು ಹೆಚ್ಚಿವೆ:

'ಮತ್ತು ಮೂರನೆಯ ಸಲ ಈ ದುಆವನ್ನು ಜೋರಾಗಿ ಹೇಳುತ್ತಿದ್ದರು.'

ದಾರಕುತ್ನಿ ವರದಿ ಮಾಡಿರುವ ದುಆದಲ್ಲಿ ಈ ಹೆಚ್ಚಿನ ಪದಗಳಿವೆ: 'ರಬ್ಬಿಲ್ ಮಲಾಯಿಕತಿ ವರ್‍ರೂಹ್' (ಆತ ಮಲಕ್‌ಗಳ ಮತ್ತು ಜಿಬ್ರೀಲ್‌ನ ಪ್ರಭುವಾಗಿದ್ದಾನೆ)

ಪ್ರವಾದಿ(ಸ) ವಿತ್ರ್‌ನ ಕೊನೆಯಲ್ಲಿ ಈ ದುಆ ಪಠಿಸುತ್ತಿದ್ದರು-

اَللّٰهُمَّ اِنِّیۤ اَعُوذُ بِرِضَاكَ مِنْ سَخَطِكَ وَاَعُوذُبِكَ مِنْكَ، لَآ اُحْصِی
ثَنَاءً عَلَيْكَ، اَنْتَ كَمَآ اَثْنَيْتَ عَلٰی نَفْسِكَ

(ابوداؤد، ترمذی، نسائی، ابن ماجة، احمد)

**"ಅಲ್ಲಾಹುಮ್ಮ ಇನ್ನೀ ಅಊದುಬಿರಿದಾಕ ಮಿನ್ ಸಖತಿಕ ವಅಊದುಬಿಕ ಮಿನ್‌ಕ, ಲಾ ಉಹ್‌ಸೀ ಸನಾಅನ್ ಅಲೈಕ ಅಂತ ಕಮಾ ಅಸ್‌ನೈತ ಅಲಾ ನಫ್‌ಸಿಕ."**

ಅರ್ಥ: ಓ ಅಲ್ಲಾಹ್! ನಾನು ನಿನ್ನ ಕ್ರೋಧದಿಂದ ನಿನ್ನ ಸಂಪ್ರೀತಿಯ ಅಭಯ ಯಾಚಿಸುತ್ತೇನೆ ಮತ್ತು ನಿನ್ನ ಯಾತನೆಯಿಂದ ನಿನ್ನ ಕರುಣೆಯ ಅಭಯ ಯಾಚಿಸುತ್ತೇನೆ. ನಾನು ನಿನ್ನೊಡನೆ ನಿನ್ನ ಕಾರಣದಿಂದಲೇ ಅಭಯ ಯಾಚಿಸುತ್ತೇನೆ. ನಾನು ನಿನ್ನ ಸ್ತುತಿಸ್ತೋತ್ರಗಳನ್ನು ಎಣಿಸಲಾರೆ. ನೀನು ನಿನ್ನನ್ನು ಯಾವ ರೀತಿ ಪ್ರಶಂಸೆ ಮಾಡಿರುವಿಯೋ ಹಾಗೆಯೇ ನೀನಿರುವಿ. (ವರದಿ: ಹ. ಅಲೀ(ರ)- ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ, ಅಹ್ಮದ್)

**8. ಒಂದು ರಾತ್ರಿಯಲ್ಲಿ ಎರಡು ಸಲ ವಿತ್ರ್ ಇಲ್ಲ:**

ಯಾವನು ರಾತ್ರಿ ವಿತ್ರ್ ನಮಾಝ್ ಮಾಡಿ ಮಲಗಿದನೋ ಅವನು ನಿದ್ರೆಯಿಂದ ಎದ್ದು ನಫಿಲ್ ನಮಾಝ್ ಮಾಡಬಯಸುವುದಾದರೆ ಮಾಡಬಹುದು. ಅವನು ಮತ್ತೊಮ್ಮೆ ವಿತ್ರ್ ನಮಾಝ್ ಮಾಡಬೇಕಾಗಿಲ್ಲ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಒಂದು ರಾತ್ರಿಯಲ್ಲಿ ಎರಡು ಸಲ ವಿತ್ರ್ ಇಲ್ಲ."

(ವರದಿ: ಹ. ಅಲೀ(ರ)- ಅಬೂ ದಾವೂದ್, ನಸಾಈ, ತಿರ್ಮಿದಿ)

**9. ವಿತ್ರ್‌ನ ಕಝಾ:**

ಒಬ್ಬನು ವಿತ್ರ್ ನಮಾಝ್ ಬಿಟ್ಟು ಹೋದರೆ ಆತ ಮರುದಿನ ಅದರ ಕಝಾ ಮಾಡಬೇಕು. ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಿಮ್ಮ ಪೈಕಿ ಯಾರಿಗಾದರೂ ವಿತ್ರ್ ನಮಾಝ್ ಮಾಡದ ಸ್ಥಿತಿಯಲ್ಲಿ ಬೆಳಗಾದರೆ ಅಥವಾ ಅವನು ಅದನ್ನು ಮರೆತಿದ್ದರೆ ಅವನಿಗೆ ನೆನಪು ಬಂದಾಗ ಅದನ್ನು ನಿರ್ವಹಿಸಲಿ."

(ವರದಿ: ಹ. ಅಬೂ ಸಈದ್ ಖುದ್ರೀ(ರ)- ಅಬೂ ದಾವೂದ್)

**10. ವಿತ್ರ್‌ನ ಜಮಾಅತ್:**

ಪ್ರವಾದಿ(ಸ) ರಮಝಾನ್‌ನಲ್ಲಿ ವಿತ್ರ್ ನಮಾಝನ್ನು ತರಾವೀಹ್‌ನ ಜೊತೆ ಜಮಾಅತ್ ಸಹಿತ ನಿರ್ವಹಿಸುತ್ತಿದ್ದರು. ಆದ್ದರಿಂದ ರಮಝಾನ್‌ನಲ್ಲಿ ವಿತ್ರ್ ನಮಾಝನ್ನು ಜಮಾಅತ್ ಸಹಿತ ನಿರ್ವಹಿಸುವುದು ಉತ್ತಮವೆಂಬುದು ಎಲ್ಲ ಕರ್ಮಶಾಸ್ತ್ರ ಪಂಡಿತರ ಅಭಿಪ್ರಾಯವಾಗಿದೆ.

**11. ಸಾಮೂಹಿಕ ವಿಪತ್ತುಗಳ ಸಂದರ್ಭದಲ್ಲಿ ಕುನೂತ್ ಪಠಿಸುವುದು:**

ಇಂತಹ ಸಂದರ್ಭಗಳಲ್ಲಿ ಎಲ್ಲ ಫರ್ಝ್ ನಮಾಝ್‌ಗಳ ಕೊನೆಯ ರಕಅತ್‌ನ ನಂತರ ಕುನೂತ್ ಪಠಿಸುವ ಅನುಮತಿಯಿದೆ.

"ಪ್ರವಾದಿ(ಸ) ಒಂದು ತಿಂಗಳ ತನಕ ನಿರಂತರ ಫಜ್ರ್, ಝುಹರ್, ಅಸರ್, ಮಗ್ರಿಬ್ ಮತ್ತು ಇಶಾ ನಮಾಝ್‌ಗಳ ಕೊನೆಯ ರಕಅತ್‌ನ ರುಕೂಅ್‌ನ ನಂತರ ಕುನೂತ್ ಪಠಿಸುತ್ತಿದ್ದರು. ಪ್ರವಾದಿ(ಸ) ಸಲೈಮ್ ಗೋತ್ರದ ಊರಲ್ಲಿ ರಹಲ್, ದಕ್ವಾನ್ ಮತ್ತು ಉಸ್‌ಬಾ ಗೋತ್ರಗಳಿಗೆ ಶಾಪ ಹಾಕುತ್ತಿದ್ದರು ಮತ್ತು ಜನರು ಅವರ ಹಿಂದೆ 'ಆಮೀನ್' ಎನ್ನುತ್ತಿದ್ದರು." (ವರದಿ: ಹ. ಇಬ್ನು ಅಬ್ಬಾಸ್(ರ)- ಅಬೂ ದಾವೂದ್, ಮುಸ್ನದ್ ಅಹ್ಮದ್)

ಹನಫೀ ಕ್ರಮದಂತೆ ಸಾಮೂಹಿಕ ವಿಪತ್ತಿನ ಸಂದರ್ಭಗಳಲ್ಲಿ ಕೇವಲ ಫಜ್ರ್ ನಮಾಝ್‌ನಲ್ಲಿ 'ಕುನೂತ್' ಪಠಿಸಬಹುದಾಗಿದೆ. ಇತರ ನಮಾಝ್‌ಗಳಲ್ಲಿ ಪಠಿಸುವಂತಿಲ್ಲ. ಸಾಮೂಹಿಕ ವಿಪತ್ತಿನ ಸಂದರ್ಭದಲ್ಲೂ ಕುನೂತನ್ನು ರುಕೂಅ್‌ನ ನಂತರ ಪಠಿಸಬೇಕು. ವಿತ್ರ್ ನಮಾಝ್‌ನ ಕುನೂತನ್ನು ರುಕೂಅ್‌ಗಿಂತ ಮೊದಲು ಪಠಿಸಬೇಕು. ಸಾಮೂಹಿಕ ವಿಪತ್ತಿನ ಸಂದರ್ಭದಲ್ಲೂ ಕುನೂತ್ ಕೇವಲ ಜಮಾಅತ್ ಸಹಿತ ನಮಾಝ್‌ಗೆ ಅನ್ವಯವಾಗುತ್ತದೆ. ಏಕಾಂಗಿಯಾಗಿ ನಮಾಝ್ ಮಾಡುವವನಿಗೆ ಅದು ಅನ್ವಯಿಸುವುದಿಲ್ಲ. ಇಮಾಮ್ ಶಾಫಿಈಯವರ ಪ್ರಕಾರ ಸಾಮಾನ್ಯ ದಿನಗಳ ಫಜ್ರ್ ನಮಾಝ್‌ನಲ್ಲೂ ಕುನೂತ್ ಪಠಿಸುವುದು ಒಳ್ಳೆಯದು.

# ತಹಜ್ಜುದ್ ಅಥವಾ ಕಿಯಾಮುಲ್ಲೈಲ್

## 1. ಮಹತ್ವ

ಕುರ್‌ಆನ್ ಮತ್ತು ಹದೀಸ್‌ಗಳೆರಡರಲ್ಲೂ ತಹಜ್ಜುದ್ ನಮಾಝ್‌ಗೆ ಬಹಳ ಮಹತ್ವ ಕೊಡಲಾಗಿದೆ:

ಅಲ್ಲಾಹನು ಹೀಗೆ ಹೇಳಿರುವನು: "ಮತ್ತು ರಾತ್ರಿ ಕಾಲದಲ್ಲಿ ತಹಜ್ಜುದ್ ನಿರ್ವಹಿಸಿರಿ. ಇದು ನಿಮಗೆ ಐಚ್ಛಿಕ ಕರ್ಮ ಆಗಿದೆ. ನಿಮ್ಮ ಪ್ರಭು ನಿಮ್ಮನ್ನು ಪ್ರಶಂಸಿತ ಸ್ಥಾನಕ್ಕೆ ತಲುಪಿಸಲೂಬಹುದು." (ಪವಿತ್ರ ಕುರ್‌ಆನ್, 17:79)

ಇನ್ನೊಂದೆಡೆ ಹೀಗೆ ಹೇಳಲಾಗಿದೆ: "ಆದರೆ ಧರ್ಮನಿಷ್ಠರು ಮಾತ್ರ ಅಂದು ಉದ್ಯಾನಗಳಲ್ಲೂ ಚಿಲುಮೆಗಳಲ್ಲೂ ಇರುವರು. ಅವರ ಪ್ರಭು ಅವರಿಗೆ ದಯಪಾಲಿಸಿದ್ದೆಲ್ಲವನ್ನೂ ಸಂತೋಷದಿಂದ ಸ್ವೀಕರಿಸುತ್ತಿರುವರು. ಅವರು ಆ ದಿನ ಬರುವುದಕ್ಕೆ ಮುಂಚೆ ಸದಾಚಾರಿಗಳಾಗಿದ್ದರು. ರಾತ್ರೆ ಸ್ವಲ್ಪವೇ ನಿದ್ರಿಸು ತ್ತಿದ್ದರು- ಮತ್ತು ಅವರು ರಾತ್ರಿಯ ಕೊನೆಯ ಜಾವಗಳಲ್ಲಿ ಕ್ಷಮಾಯಾಚನೆ ಮಾಡುತ್ತಿದ್ದರು." (ಪವಿತ್ರ ಕುರ್‌ಆನ್, 51:15-18)

ಮತ್ತೊಂದೆಡೆ ಹೀಗಿದೆ:

"ರಹ್ಮಾನನ ನಿಜವಾದ ದಾಸರು ಭೂಮಿಯ ಮೇಲೆ ಸೌಮ್ಯ ನಡಿಗೆ ನಡೆಯುತ್ತಾರೆ. ತಿಳಿಗೇಡಿಗಳು ವ್ಯರ್ಥ ತಕರಾರಿಗೆ ಬಂದಾಗ, 'ನಿಮಗೆ ಸಲಾಮ್' ಎಂದು ಬಿಡುತ್ತಾರೆ. ಅವರು ತಮ್ಮ ಪ್ರಭುವಿನ ಮುಂದೆ ಸಾಷ್ಟಾಂಗವೆರಗುತ್ತಲೂ ನಿಲ್ಲುತ್ತಲೂ ರಾತ್ರಿಗಳನ್ನು ಕಳೆಯುತ್ತಾರೆ." (ಪವಿತ್ರ ಕುರ್‌ಆನ್, 25:63-64)

ನಾಲ್ಕನೆಯ ಕಡೆ ಹೀಗೆ ಹೇಳಲಾಗಿದೆ:

"ನಮ್ಮ ಸೂಕ್ತಗಳನ್ನು ಓದಿ ಹೇಳಿ ಉಪದೇಶಿಸಿದಾಗ ಸಾಷ್ಟಾಂಗವೆರಗುವವರೂ ತಮ್ಮ ಪ್ರಭುವಿನ ಸ್ತುತಿಯೊಂದಿಗೆ ಅವನನ್ನು ಜಪಿಸುವವರೂ ಅಹಂಕಾರ ಪ್ರಕಟಿಸದವರೂ ನಮ್ಮ ಸೂಕ್ತಗಳ ಮೇಲೆ ವಿಶ್ವಾಸವಿರಿಸುತ್ತಾರೆ. ಅವರ ಬೆನ್ನುಗಳು ಹಾಸಿಗೆಗಳನ್ನು ಬಿಟ್ಟಿರುತ್ತವೆ. ತಮ್ಮ ಪ್ರಭುವನ್ನು ಭಯ ಹಾಗೂ ನಿರೀಕ್ಷೆಯೊಂದಿಗೆ ಪ್ರಾರ್ಥಿಸುತ್ತಾರೆ. ನಾವು ಅವರಿಗೆ ದಯಪಾಲಿಸಿರುವ ಜೀವನಾಧಾರದಿಂದ ಖರ್ಚು ಮಾಡುತ್ತಾರೆ. ಮುಂದೆ ಅವರ ಕರ್ಮಗಳಿಗೆ

ಪ್ರತಿಫಲವಾಗಿ ಅವರ ಕಣ್ಮನಗಳನ್ನು ತಣಿಸುವಂತಹ ಯಾವ ಸತ್ಫಲಗಳನ್ನು ಅವರಿಗಾಗಿ ಬಚ್ಚಿಡಲಾಗಿದೆಯೋ ಅದರ ಅರಿವು ಯಾವ ಜೀವಿಗೂ ಇಲ್ಲ." (ಪವಿತ್ರ ಕುರ್‌ಆನ್, 32:15-17)

ಪ್ರವಾದಿವರ್ಯರಲ್ಲಿ(ಸ) ಹೀಗೆ ವಿಚಾರಿಸಲಾಯಿತು: "ಫರ್ಝ್(ಕಡ್ಡಾಯ) ನಮಾಝ್‌ನ ನಂತರ ಯಾವ ನಮಾಝ್ ಅತ್ಯುತ್ತಮವಾಗಿದೆ? ಆಗ ಪ್ರವಾದಿ(ಸ) ಹೇಳಿದರು- ಅರ್ಧ ರಾತ್ರಿಯ ನಮಾಝ್." (ಅರ್ಥಾತ್ ತಹಜ್ಜುದ್)

(ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಪ್ರವಾದಿ(ಸ) ಹೀಗೆ ಹೇಳಿರುವರು:

"ನೀವು ರಾತ್ರಿ ನಮಾಝ್ ಮಾಡಬೇಕು. ಏಕೆಂದರೆ ಇದು ನಿಮಗಿಂತ ಮುಂಚಿನ ಸಜ್ಜನರ ಅಭ್ಯಾಸವಾಗಿದೆ. ನೀವು ನಿಮ್ಮ ಪ್ರಭುವಿಗೆ ನಿಕಟವಾಗುವುದಾಗಿದೆ. ಇದು ನಿಮ್ಮ ಕೆಡುಕುಗಳನ್ನು ಅಳಿಸುವ ಮತ್ತು ನಿಮ್ಮನ್ನು ಪಾಪಗಳಿಂದ ತಡೆಯುವಂತಹದ್ದಾಗಿದೆ."

(ವರದಿ: ಹ. ಅಬೂ ಉಮಾಮ(ರ)- ತಿರ್ಮಿದಿ)

"ಪ್ರವಾದಿ(ಸ) ರಾತ್ರಿ ವೇಳೆ ತಮ್ಮ ಕಾಲುಗಳು ಬಾತು ಹೋಗುವಷ್ಟು ಹೊತ್ತು ನಿಂತು ನಮಾಝ್ ಮಾಡುತ್ತಿದ್ದರು. ಸಹಾಬಿಗಳು ಹೇಳಿದರು- ಪ್ರವಾದಿಗಳೇ! ತಮ್ಮ ಮುಂದಿನ ಮತ್ತು ಹಿಂದಿನ ಎಲ್ಲ ಪಾಪಗಳೂ ಕ್ಷಮಿಸಲ್ಪಟ್ಟಿರುವಾಗ ತಾವು ಹೀಗೇಕೆ ಮಾಡುವಿರಿ? ಆಗ ಪ್ರವಾದಿ(ಸ) ಹೇಳಿದರು- ನಾನು ನನ್ನ ಪ್ರಭುವಿನ ಕೃತಜ್ಞ ದಾಸನಾಗಬೇಡವೆ?"

(ವರದಿ: ಹ. ಮುಗೀರಾ(ರ)- ಬುಖಾರಿ, ಮುಸ್ಲಿಮ್)

## 2. ಶಿಷ್ಟಾಚಾರಗಳು

### i) ಮಲಗುವಾಗ ತಹಜ್ಜುದ್‌ಗೆ ಏಳುವ ಸಂಕಲ್ಪ ಮಾಡುವುದು:

ಪ್ರವಾದಿ(ಸ) ಹೀಗೆ ಹೇಳಿರುವರು: "ರಾತ್ರಿ ಎದ್ದು ನಮಾಝ್ ಮಾಡಬೇಕೆಂಬ ಸಂಕಲ್ಪ ಮಾಡಿ ಮಲಗಿದ ವ್ಯಕ್ತಿ ಬೆಳಗಾಗುವ ವರೆಗೆ ನಿದ್ರೆ ಹೋದರೆ ಅವನ ಕರ್ಮಪತ್ರದಲ್ಲಿ ಅವನು ಯಾವುದರ ಸಂಕಲ್ಪ ಮಾಡಿದ್ದನೋ ಅದನ್ನು ಬರೆಯಲಾಗುವುದು. ಅಲ್ಲಾಹನು ಅವನಿಗೆ ನಿದ್ರೆಯ ಸದಕಾ(ದಾನ) ಮಾಡಿದನು." (ವರದಿ: ಹ. ಅಬೂದ್ದರ್ದಾ(ರ)- ನಸಾಈ, ಇಬ್ನು ಮಾಜಃ)

ಎದ್ದ ನಂತರ ಪ್ರಾರ್ಥಿಸುವುದು:

"ಒಮ್ಮೆ ನಾನು ನನ್ನ ಚಿಕ್ಕಮ್ಮ ಮೈಮೂನಾರ(ರ) ಮನೆಯಲ್ಲಿ ಮಲಗಿದ್ದೆ. ಅಂದು ಪ್ರವಾದಿ(ಸ) ಕೂಡಾ ಅವರ ಮನೆಯಲ್ಲೇ ಇದ್ದರು. ಪ್ರವಾದಿ(ಸ) ಸ್ವಲ್ಪ ಹೊತ್ತು ಮನೆಯವರೊಂದಿಗೆ ಮಾತನಾಡುತ್ತಿದ್ದರು. ಅನಂತರ ಮಲಗಿದರು. ಮೂರನೆಯ ಒಂದು ಭಾಗ ರಾತ್ರಿ ಬಾಕಿ ಇರುವಾಗ ಎದ್ದರು. ಪ್ರವಾದಿ(ಸ) ಆಕಾಶದ ಕಡೆಗೆ ನೋಡಿದರು ಮತ್ತು ಪವಿತ್ರ ಕುರ್‌ಆನಿನ ಈ ಸೂಕ್ತಗಳನ್ನು ಪಠಿಸಿದರು: 'ಇನ್ನ ಫೀ ಖಲ್ಕಿಸ್ಸಮಾವಾತಿ'ಯಿಂದ ಸೂರದ (ಆಲಿ ಇಮ್ರಾನ್) ಕೊನೆಯ ವರೆಗೆ ಪಠಿಸಿದರು."

(ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್)

'ಮುಸ್ಲಿಮ್'ನ ಇನ್ನೊಂದು ವರದಿಯಲ್ಲಿ ಪ್ರವಾದಿ(ಸ) ಎದ್ದ ಮೇಲೆ ಮಿಸ್ವಾಕ್ (ಹಲ್ಲುಜ್ಜುವುದು) ಮಾಡಿದರೆಂದೂ ಅನಂತರ ವುಝೂ ಮಾಡುವಾಗ ಈ ಆಯತ್‌ಗಳನ್ನು ಪಠಿಸುತ್ತಿದ್ದರೆಂದೂ ಇದೆ.

ii) ಪ್ರವಾದಿ(ಸ) ರಾತ್ರಿ ಎದ್ದಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ لَكَ الْحَمْدُ، اَنْتَ نُورُ السَّمٰوٰتِ وَالْاَرْضِ وَمَنْ فِيهِنَّ وَلَكَ الْحَمْدُ اَنْتَ قَيِّمُ السَّمٰوٰتِ وَالْاَرْضِ وَمَنْ فِيهِنَّ وَلَكَ الْحَمْدُ اَنْتَ الْحَقُّ وَوَعْدُكَ الْحَقُّ وَلِقَاءُكَ حَقٌّ، وَالْجَنَّةُ حَقٌّ، وَالنَّارُ حَقٌّ وَالنَّبِيُّونَ حَقٌّ وَ مُحَمَّدٌ حَقٌّ وَالسَّاعَةُ حَقٌّ، اَللّٰهُمَّ لَكَ اَسْلَمْتُ وَبِكَ اٰمَنْتُ ـ وَعَلَيْكَ تَوَكَّلْتُ وَاِلَيْكَ اَنَبْتُ وَبِكَ خَاصَمْتُ وَاِلَيْكَ حَاكَمْتُ فَاغْفِرْلِى مَا قَدَّمْتُ وَمَآ اَخَّرْتُ وَمَآ اَسْرَرْتُ وَمَآ اَعْلَنْتُ اَنْتَ اللّٰهُ لَآاِلٰهَ اِلَّآ اَنْتَ

(بخاری و مسلم)

"ಅಲ್ಲಾಹುಮ್ಮ ಲಕಲ್ ಹಮ್ದು, ಅಂತ ನೂರುಸ್ಸಮಾವಾತಿ ವಲ್ ಅರ್ದಿ ವಮನ್ ಫೀಹಿನ್ನ ವಲಕಲ್ ಹಮ್ದು. ಅಂತ ಕಯ್ಯಿಮುಸ್ಸಮಾವಾತಿ ವಲ್ ಅರ್ದಿ ವಮನ್ ಫೀಹಿನ್ನ ವಲಕಲ್ ಹಮ್ದು ಅಂತಲ್ ಹಕ್ಕು ವವಅ್‌ದುಕಲ್ ಹಕ್ಕು ವಲಿಕಾಉಕ ಹಕ್ಕುನ್ ವಲ್‌ಜನ್ನತು ಹಕ್ಕುನ್. ವನ್ನಾರು ಹಕ್ಕುನ್ ವನ್ನಬಿಯ್ಯೂನ ಹಕ್ಕುನ್ ವಮುಹಮ್ಮದುನ್ ಹಕ್ಕುನ್ ವಸ್ಸಾಅತು ಹಕ್ಕುನ್. ಅಲ್ಲಾಹುಮ್ಮ ಲಕ ಅಸ್ಲಮ್ತು ವಬಿಕ ಆಮನ್ತು ವಅಲೈಕ ತವಕ್ಕಲ್ತು ವಇಲೈಕ ಅನಬ್ತು ವಬಿಕ ಖಾಸಮ್ತು ವ ಇಲೈಕ ಹಾಕಮ್ತು. ಫಗ್‌ಫಿರ್‌ಲೀ ಮಾ ಕದ್ದಮ್ತು ವಮಾ ಅಖ್ಖರ್ತು ವಮಾ ಅಸ್ರರ್ತು ವಮಾ ಅಅ್‌ಲನ್ತು ಅಂತಲ್ಲಾಹು ಲಾಇಲಾಹ ಇಲ್ಲಾ ಅಂತ."

ಅರ್ಥ: ಓ ಅಲ್ಲಾಹ್! ಸ್ತುತಿಯು ನಿನಗಾಗಿಯೇ ಇದೆ. ನೀನು ಭೂಮಿ-ಆಕಾಶಗಳ ಮತ್ತು ಅವುಗಳಲ್ಲಿರುವವುಗಳ ಜ್ಯೋತಿಯಾಗಿರುವೆ. ಸ್ತುತಿಯು ನಿನಗಾಗಿಯೇ ಇದೆ. ನೀನು ಭೂಮಿ-ಆಕಾಶಗಳನ್ನು ಮತ್ತು ಅವುಗಳಲ್ಲಿರುವವುಗಳನ್ನು ನೆಲೆ ನಿಲ್ಲಿಸುವವನಾಗಿರುವೆ. ಸ್ತುತಿಯು ನಿನಗಾಗಿಯೇ ಇದೆ. ನೀನು ಸತ್ಯವಾಗಿರುವೆ. ನಿನ್ನ ವಾಗ್ದಾನವು ಸತ್ಯವಾಗಿದೆ. ನಿನ್ನ ಭೇಟಿಯು ಸತ್ಯವಾಗಿದೆ. ಸ್ವರ್ಗವು ಸತ್ಯವಾಗಿದೆ. ನರಕವು ಸತ್ಯವಾಗಿದೆ. ಪ್ರವಾದಿಗಳು ಸತ್ಯವಾಗಿದ್ದಾರೆ ಮತ್ತು ಮುಹಮ್ಮದ್(ಸ) ಸತ್ಯವಾಗಿದ್ದಾರೆ. ಕಿಯಾಮತ್ ಬರುವುದು ಸತ್ಯವಾಗಿದೆ. ಓ ಅಲ್ಲಾಹ್! ನಾನು ನಿನಗಾಗಿ ನನ್ನನ್ನು ಸಮರ್ಪಿಸಿದೆ. ನಿನ್ನ ಮೇಲೆಯೇ

ವಿಶ್ವಾಸವಿರಿಸಿದೆ. ನಿನ್ನ ಮೇಲೆಯೇ ಭರವಸೆಯನ್ನಿರಿಸಿದೆ. ನಿನ್ನ ಕಡೆಗೇ ನಾನು ಗಮನಹರಿಸಿದೆ. ನಿನ್ನ ಸಹಾಯದಿಂದಲೇ ಸಂವಾದ ಮಾಡುತ್ತೇನೆ. ನಿನ್ನ ಕಡೆಗೇ ನನ್ನ ವ್ಯಾಜ್ಯವನ್ನು ತರುತ್ತೇನೆ. ಆದ್ದರಿಂದ ನಾನು ಹಿಂದೆ ಅಥವಾ ಮುಂದೆ, ರಹಸ್ಯವಾಗಿ ಅಥವಾ ಬಹಿರಂಗವಾಗಿ ಮಾಡಿದ ಎಲ್ಲ ಪಾಪಗಳನ್ನು ಮನ್ನಿಸಿಬಿಡು. ನೀನೇ ಅಲ್ಲಾಹ್! ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ.

(ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್)

iii) ಪ್ರವಾದಿ(ಸ) ಹೇಳಿದರು- ರಾತ್ರಿ ಏಳುವ ವ್ಯಕ್ತಿ ಈ ವಚನಗಳನ್ನು ಪಠಿಸಬೇಕು:

لَآاِلٰهَ اِلَّااللّٰهُ وَحْدَهٗ لَا شَرِيكَ لَهٗ، لَهُ الْمُلْكُ وَلَهُ الْحَمْدُ وَهُوَ عَلٰى كُلِّ شَيْءٍ قَدِيرٌ وَسُبْحَانَ اللّٰهِ وَالْحَمْدُ لِلّٰهِ وَلَآ اِلٰهَ اِلَّا اللّٰهُ وَاللّٰهُ اَكْبَرُ وَلَا حَوْلَ وَلَا قُوَّةَ اِلَّا بِاللّٰهِ۔

"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ಲಹುಲ್‌ಮುಲ್ಕು ವಲಹುಲ್ ಹಮ್ದು ವಹುವ ಅಲಾಕುಲ್ಲಿ ಶೈಇನ್ ಕದೀರ್. ವಸುಬ್‌ಹಾನಲ್ಲಾಹಿ ವಲ್‌ಹಮ್ದು ಲಿಲ್ಲಾಹಿ ವಲಾ ಇಲಾಹ ಇಲ್ಲಲ್ಲಾಹು ವಲ್ಲಾಹು ಅಕ್‌ಬರು ವಲಾ ಹೌಲವಲಾ ಕುವ್ವತ ಇಲ್ಲಾ ಬಿಲ್ಲಾಹ್."

ಅರ್ಥ: ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ. ಅವನಿಗಾರೂ ಪಾಲುದಾರರಿಲ್ಲ. ಸ್ತುತಿ ಮತ್ತು ಆಧಿಪತ್ಯ ಅವನಿಗೇ ಸೇರಿದೆ. ಅವನು ಸರ್ವ ಸಮರ್ಥನಾಗಿರುವನು ಮತ್ತು ಅಲ್ಲಾಹನು ಪಾವನನು. ಸ್ತುತಿ ಅಲ್ಲಾಹನಿಗೇ ಸೇರಿದೆ. ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ. ಅಲ್ಲಾಹನು ಅತ್ಯಂತ ಮಹಾನನು. ಅಲ್ಲಾಹನ ಆಸರೆಯ ಹೊರತು ಯಾವ ಶಕ್ತಿ-ಸಾಮರ್ಥ್ಯವೂ ಇಲ್ಲ.

ತರುವಾಯ ಈ ರೀತಿ ಪ್ರಾರ್ಥಿಸಬೇಕು: "ಅಲ್ಲಾಹುಮ್ಮಗ್‌ಫಿರ್‌ಲೀ (ಓ ಅಲ್ಲಾಹ್! ನನ್ನನ್ನು ಕ್ಷಮಿಸಿಬಿಡು) ಅವನ ಪ್ರಾರ್ಥನೆಯು ಸ್ವೀಕರಿಸಲ್ಪಡುವುದು. ಅವನು ವುಝೂ ಮಾಡಿ ನಮಾಝ್ ಮಾಡಿದರೆ ಅವನ ನಮಾಝ್ ಸ್ವೀಕರಿಸಲ್ಪಡುವುದು."

(ವರದಿ: ಹ. ಉಬಾದಃ ಬಿನ್ ಸಾಮಿತ್(ರ)- ಬುಖಾರಿ)

iv) ಪ್ರವಾದಿ(ಸ) ರಾತ್ರಿ ವೇಳೆ ಎಚ್ಚೆತ್ತಾಗ ಹೀಗೆ ಪ್ರಾರ್ಥಿಸುತ್ತಿದ್ದರು:

لَآ اِلٰهَ اِلَّآ اَنْتَ سُبْحَانَكَ وَاَسْتَغْفِرُكَ لِذَنْبِي وَاَسْأَلُكَ رَحْمَتَكَ۔ اَللّٰهُمَّ زِدْنِي عِلْمًا، وَلَا تُزِغْ قَلْبِي بَعْدَ اِذْ هَدَيْتَنِي وَهَبْ لِي مِنْ لَّدُنْكَ

رَحْـمَةً إِنَّكَ أَنْتَ الْوَهَّابُ اَلْحَمْدُ لِلّٰهِ الَّذِىٓ أَحْيَانَا بَعْدَ مَآ أَمَاتَنَا وَإِلَيْهِ النُّشُورُ (ابوداؤد)

"ಲಾ ಇಲಾಹ ಇಲ್ಲಾ ಅಂತ ಸುಬ್‌ಹಾನಕ ವಅಸ್ತಗ್‌ಫಿರುಕ ಲಿದನ್‌ಬೀ ವ ಅಸ್‌ಅಲುಕ ರಹ್ಮತಕ. ಅಲ್ಲಾಹುಮ್ಮ ಝಿದ್‌ನೀ ಇಲ್ಮನ್ ವಲಾತುಝಿಗ್ ಕಲ್ಬೀ ಬಅ್‌ದ ಇದ್ ಹದೈತನೀ ವಹಬ್‌ಲೀ ಮಿಲ್ಲದುಂಕ ರಹ್ಮತನ್ ಇನ್ನಕ ಅಂತಲ್ ವಹ್ಹಾಬ್. ಅಲ್‌ಹಮ್ದು ಲಿಲ್ಲಾಹಿಲ್ಲದೀ ಅಹ್ಯಾನಾ ಬಅ್‌ದ ಮಾ ಅಮಾತನಾ ವಇಲೈಹಿನ್ನುಶೂರ್."

ಅರ್ಥ: ಓ ಅಲ್ಲಾಹ್ ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನು ಪಾವನನು. ನಾನು ನಿನ್ನಿಂದ ಕ್ಷಮೆ ಯಾಚಿಸುತ್ತೇನೆ ಮತ್ತು ನಿನ್ನಿಂದ ನಿನ್ನ ಕರುಣೆಯನ್ನು ಬೇಡುತ್ತೇನೆ. ಓ ಅಲ್ಲಾಹ್! ನನ್ನ ಜ್ಞಾನವನ್ನು ಹೆಚ್ಚಿಸು. ಒಮ್ಮೆ ಸನ್ಮಾರ್ಗದರ್ಶನ ಮಾಡಿದ ಬಳಿಕ ನನ್ನ ಹೃದಯವನ್ನು ವಕ್ರಗೊಳಿಸದಿರು. ನಿನ್ನ ವತಿಯಿಂದ ನನಗೆ ಕರುಣೆಯನ್ನು ದಯಪಾಲಿಸು. ಖಂಡಿತ ನೀನೇ ದಯಪಾಲಿಸುವವನಾಗಿರುವೆ. ನಮ್ಮನ್ನು ಮರಣದ ಬಳಿಕ ಜೀವಂತಗೊಳಿಸಿದ ಅಲ್ಲಾಹನಿಗೇ ಸರ್ವಸ್ತುತಿ ಮತ್ತು ಕಟ್ಟಕಡೆಗೆ ನಮಗೆ ಅವನ ಕಡೆಗೇ ಮರಳಿ ಹೋಗಲಿಕ್ಕಿದೆ.

(ವರದಿ: ಹ. ಆಯಿಶಾ(ರ)- ಅಬೂ ದಾವೂದ್)

**v) ಮೊದಲ ಎರಡು ರಕಅತ್‌ಗಳನ್ನು ಲಘುವಾಗಿ ನಿರ್ವಹಿಸುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ರಾತ್ರಿ ಎದ್ದರೆ ಆತನು ತನ್ನ ನಮಾಝನ್ನು ಎರಡು ಲಘುವಾದ ರಕಅತ್‌ಗಳೊಂದಿಗೆ ಆರಂಭಿಸಲಿ." (ವರದಿ: ಹ. ಅಬೂ ಹುರೈರಾ(ರ)- ಮುಸ್ಲಿಮ್)

**vi) ಮನೆಯವರನ್ನು ಎಬ್ಬಿಸುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ವ್ಯಕ್ತಿಯೊಬ್ಬನು ರಾತ್ರಿ ಎದ್ದು ತನ್ನ ಮಡದಿಯನ್ನೂ ಎಬ್ಬಿಸಿ ಇಬ್ಬರೂ ಜತೆಗೂಡಿ ನಮಾಝ್ ಮಾಡಿದರೆ ಅವರನ್ನು 'ಅದ್ದಾಕಿರೀನ ವದ್ದಾಕಿರಾತಿ' (ಅಲ್ಲಾಹನನ್ನು ಸ್ಮರಿಸುವ ಪುರುಷರು ಮತ್ತು ಸ್ತ್ರೀಯರು) ಎಂದು ನಮೂದಿಸಲಾಗುವುದು."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್)

**vii) ನಿದ್ರೆ ಬಂದರೆ ನಮಾಝ್ ಮುಗಿಸಿ ನಿದ್ರಿಸುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮಲ್ಲಿ ಯಾರಾದರೂ ರಾತ್ರಿ ಎದ್ದು ಕುರ್‌ಆನ್ ಸರಿಯಾಗಿ ಪಠಿಸಲಾಗದಿದ್ದರೆ ಮತ್ತು ತಾನೇನು ಹೇಳುತ್ತಿರುವೆನೆಂದು ಅವನಿಗೆ ತಿಳಿಯದೆ ಹೋದರೆ ಆತ ಮಲಗಿ ನಿದ್ರಿಸಲಿ."

(ವರದಿ: ಹ. ಆಯಿಶಾ(ರ)- ಮುಸ್ಲಿಮ್)

**viii) ಸಾಧ್ಯವಿದ್ದಷ್ಟು ತಹಜ್ಜುದ್ ನಮಾಝ್ ತಪ್ಪದೆ ನಿರ್ವಹಿಸುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಸಾಮರ್ಥ್ಯಕ್ಕನುಸಾರವಾಗಿಯೇ ಪುಣ್ಯಕಾರ್ಯವನ್ನು ಮಾಡಿರಿ. ಅಲ್ಲಾಹನಾಣೆ! ನೀವು ದಣಿದು ಹೋಗುವ ತನಕ ಅಲ್ಲಾಹನು ದಣಿಯುವುದಿಲ್ಲ."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

"ಪ್ರವಾದಿವರ್ಯರಲ್ಲಿ(ಸ) ವಿಚಾರಿಸಲಾಯಿತು: ಅಲ್ಲಾಹನ ಬಳಿ ಅತ್ಯಂತ ಪ್ರಿಯವಾದ ಕರ್ಮ ಯಾವುದು? ಆಗ ಅವರು ಹೇಳಿದರು- ಕಡಿಮೆಯಾಗಿದ್ದರೂ ತಪ್ಪದೆ ಮಾಡುವಂತಹ ಪುಣ್ಯಕಾರ್ಯ." (ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ನನ್ನನ್ನುದ್ದೇಶಿಸಿ ಹೀಗೆ ಹೇಳಿದರು:

"ಓ ಅಬ್ದುಲ್ಲಾ! ನೀನು ಆತ ರಾತ್ರಿ ನಮಾಝ್ ಮಾಡುತ್ತಿದ್ದ ಮತ್ತು ಆ ಬಳಿಕ ಅದನ್ನು ಬಿಟ್ಟು ಬಿಟ್ಟ ವ್ಯಕ್ತಿಯಂತಾಗಬಾರದು."

(ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)- ಬುಖಾರಿ, ಮುಸ್ಲಿಮ್)

**3. ಸಮಯ**

ತಹಜ್ಜುದ್ ನಮಾಝ್‌ಗೆ ಒಂದು ನಿಶ್ಚಿತ ಸಮಯವಿಲ್ಲ. ಇಶಾ ನಮಾಝ್‌ನ ನಂತರ ಫಜ್ರ್ ನಮಾಝ್‌ನ ಸಮಯ ಆರಂಭವಾಗುವ ತನಕ ಯಾವಾಗಲೂ ತಹಜ್ಜುದ್ ನಮಾಝ್ ಮಾಡಬಹುದಾಗಿದೆ.

"ನಾವು ರಾತ್ರಿಯ ಯಾವ ಭಾಗದಲ್ಲಿ ಬೇಕಾದರೂ ಪ್ರವಾದಿ(ಸ) ಅವರನ್ನು ನಮಾಝ್ ಮಾಡುತ್ತಿರುವುದಾಗಿ ಕಾಣಬಹುದಾಗಿತ್ತು."

(ವರದಿ: ಹ. ಅನಸ್(ರ)- ಬುಖಾರಿ, ಅಹ್ಮದ್, ನಸಾಈ)

ಆದರೆ ತಹಜ್ಜುದ್ ನಮಾಝನ್ನು ರಾತ್ರಿಯ ಅಂತಿಮ ಗಳಿಗೆಗಳಲ್ಲಿ ನಿರ್ವಹಿಸುವುದು ಉತ್ತಮವಾಗಿದೆ.

ಪ್ರವಾದಿ(ಸ) ಹೇಳಿದರು:

"ರಾತ್ರಿಯ ಮೂರನೆಯ ಒಂದಂಶ ಬಾಕಿ ಉಳಿದಿರುವಾಗ ಉನ್ನತನೂ ಮಹಾನನೂ ಆದ ನಮ್ಮ ಪ್ರಭು ಪ್ರಥಮ ಆಕಾಶಕ್ಕೆ ಇಳಿದು ಬಂದು ಹೇಳುತ್ತಾನೆ- ನನ್ನಲ್ಲಿ ಪ್ರಾರ್ಥಿಸುವವರು ಯಾರಾದರೂ ಇರುವರೇ? ನಾನು ಅವರ ಪ್ರಾರ್ಥನೆಯನ್ನು ಸ್ವೀಕರಿಸುವೆನು. ನನ್ನಲ್ಲಿ ಯಾಚಿಸುವವರು ಯಾರಾದರೂ ಇರುವರೇ? ನಾನು ಅವರ ಬೇಡಿಕೆಯನ್ನು ಪೂರ್ತಿಗೊಳಿಸುವೆನು. ನನ್ನಲ್ಲಿ ಕ್ಷಮೆ ಯಾಚಿಸುವವರು ಯಾರಾದರೂ ಇದ್ದಾರೆಯೇ? ನಾನು ಅವರಿಗೆ ಕ್ಷಮೆ ನೀಡುವೆನು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್,
ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

"ನನಗೆ ಅತ್ಯಂತ ಪ್ರಿಯವಾದ ಉಪವಾಸ ವ್ರತ ಹ. ದಾವೂದ್‌ರ(ಅ) ಉಪವಾಸ ವ್ರತವಾಗಿದೆ ಮತ್ತು ನನಗೆ ಅತ್ಯಂತ ಪ್ರಿಯವಾದ ನಮಾಝ್ ಹ. ದಾವೂದ್‌ರ(ಅ) ನಮಾಝ್ ಆಗಿದೆ. ದಾವೂದ್(ಅ) ಅರ್ಧರಾತ್ರಿ ಮಲಗುತ್ತಿದ್ದರು. ಮೂರನೆಯ ಒಂದಂಶ ರಾತ್ರಿ ನಮಾಝ್ ಮಾಡುತ್ತಿದ್ದರು ಮತ್ತು ಆರನೆಯ ಒಂದಂಶ ರಾತ್ರಿ ಮಲಗುತ್ತಿದ್ದರು. ಅದೇ ರೀತಿ ಒಂದು ದಿನ ಉಪವಾಸ ವ್ರತ ಆಚರಿಸುತ್ತಿದ್ದರು ಮತ್ತು ಇನ್ನೊಂದು ದಿನ ಉಪವಾಸ ವ್ರತ ಆಚರಿಸುತ್ತಿರಲಿಲ್ಲ."

(ವರದಿ: ಹ. ಅಬ್ದುಲ್ಲಾ ಬಿನ್ ಅಮ್ರ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ಇಬ್ನು ಮಾಜಃ)

## 4. ರಕಅತ್‌ಗಳು

ತಹಜ್ಜುದ್ ನಮಾಝ್‌ಗೆ ರಕಅತ್‌ಗಳ ಸಂಖ್ಯೆಯೂ ನಿಶ್ಚಿತವಿಲ್ಲ. ವಿತ್ರ್‌ನ ಒಂದು ರಕಅತ್‌ನಿಂದಲೂ ತಹಜ್ಜುದ್‌ನ ನಮಾಝ್ ಆಗುತ್ತದೆ.

"ಪ್ರವಾದಿ(ಸ) ರಾತ್ರಿಯ ನಮಾಝ್‌ನ ಆದೇಶ ನೀಡುತ್ತಾ ಅದರ ಪ್ರೇರಣೆಗಾಗಿ ಹೀಗೆ ಹೇಳಿದರು- ನೀವು ರಾತ್ರಿಯ ನಮಾಝ್ ಮಾಡಬೇಕು. ಒಂದೇ ರಕಅತ್ ಆದರೂ ಸರಿ."

(ವರದಿ: ಹ. ಇಬ್ನು ಅಬ್ಬಾಸ್(ರ)- ತಬ್ರಾನಿ)

ಆದರೆ ವಿತ್ರ್ ಸಹಿತ 11 ರಕಅತ್‌ಗಳನ್ನು ನಿರ್ವಹಿಸುವುದು ಉತ್ತಮವಾಗಿದೆ. ಪ್ರವಾದಿ(ಸ) ಹೆಚ್ಚಾಗಿ 11 ರಕಅತ್‌ಗಳನ್ನು ನಿರ್ವಹಿಸುತ್ತಿದ್ದರೆಂದು ಅನೇಕ ಹದೀಸ್‌ಗಳಿಂದ ತಿಳಿಯುತ್ತದೆ. ಪ್ರವಾದಿವರ್ಯರು(ಸ) ಹದಿಮೂರು, ಒಂಭತ್ತು ಮತ್ತು ಏಳು ರಕಅತ್‌ಗಳನ್ನು ನಿರ್ವಹಿಸಿದ ವರದಿಗಳೂ ಇವೆ.

"ಪ್ರವಾದಿ(ಸ) ಇಶಾ ನಮಾಝ್ ಮತ್ತು ಪ್ರಭಾತ ಉದಯದ ಮಧ್ಯೆ ಹನ್ನೊಂದು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು. ಪ್ರತಿ ಎರಡು ರಕಅತ್‌ಗಳ ನಂತರ ಸಲಾಮ್ ಹೇಳುತ್ತಿದ್ದರು ಮತ್ತು ಕೊನೆಯಲ್ಲಿ ಒಂದು ರಕಅತ್ ವಿತ್ರ್(ಒಂಟಿ) ಮಾಡುತ್ತಿದ್ದರು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

"ನಾನು ಹ. ಆಯಿಶಾರಲ್ಲಿ(ರ) ಪ್ರವಾದಿವರ್ಯರ(ಸ) ರಾತ್ರಿಯ ನಮಾಝ್‌ನ ಕುರಿತು ವಿಚಾರಿಸಿದೆ. ಆಗ ಅವರು ಹೇಳಿದರು: "ಫಜ್ರ್‌ನ ಸುನ್ನತ್‌ಗಳ ಹೊರತು ಏಳು, ಒಂಭತ್ತು ಅಥವಾ ಹನ್ನೊಂದು ರಕಅತ್‌ಗಳು." (ವರದಿ: ಹ. ಮಸ್ರೂಕ್(ರ)- ಬುಖಾರಿ)

ಪ್ರವಾದಿ(ಸ) ತಹಜ್ಜುದ್ ನಮಾಝ್ ಏಳು ರಕಅತ್‌ಗಳಿಗಿಂತ ಕಡಿಮೆ ನಿರ್ವಹಿಸಿದ ಬಗ್ಗೆ ವರದಿಗಳಿಲ್ಲ. ಎರಡೆರಡು ರಕಅತ್‌ಗಳನ್ನು ನಿರ್ವಹಿಸುವುದು ಉತ್ತಮವಾಗಿದೆ. ಏಕೆಂದರೆ ಹೆಚ್ಚಿನ ಹದೀಸ್ ವರದಿಗಳ ಪ್ರಕಾರ ಪ್ರವಾದಿ(ಸ) ರಾತ್ರಿಯ ನಮಾಝ್‌ನ ಪ್ರತಿ ಎರಡು ರಕಅತ್‌ಗಳ ನಂತರ ಸಲಾಮ್ ಹೇಳುತ್ತಿದ್ದರು.

## 5. ಕಿರಾಅತ್

ರಾತ್ರಿಯ ನಮಾಝ್‌ನಲ್ಲಿ ಕಿರಾಅತನ್ನು ಜೋರಾಗಿಯೂ ಮೆಲುದನಿಯಲ್ಲೂ ಮಾಡಬಹುದು. ಆದರೆ ಮಧ್ಯಮ ಸ್ವರದಲ್ಲಿ ಮಾಡುವುದು ಉತ್ತಮವಾಗಿದೆ.

"ಹ. ಆಯಿಶಾರವರಲ್ಲಿ(ರ) ಪ್ರವಾದಿವರ್ಯರ(ಸ) ಕಿರಾಅತ್ ಹೇಗಿರುತ್ತಿತ್ತೆಂದು ವಿಚಾರಿಸಲಾಯಿತು. ಆಗ ಅವರು- ಪ್ರವಾದಿ(ಸ) ಎಲ್ಲ ರೀತಿಯಿಂದಲೂ ಕಿರಾಅತ್ ಮಾಡುತ್ತಿದ್ದರು. ಕೆಲವೊಮ್ಮೆ ಉಚ್ಚ ಸ್ವರದಲ್ಲಿ ಇನ್ನು ಕೆಲವೊಮ್ಮೆ ಮೆಲುದನಿಯಲ್ಲಿ ಎಂದರು." (ಅಬೂ ದಾವೂದ್, ನಸಾಈ, ತಿರ್ಮಿದಿ, ಇಬ್ನು ಮಾಜಃ, ಅಹ್ಮದ್)

"ಪ್ರವಾದಿ(ಸ) ಹ. ಅಬೂಬಕರ್‌ರನ್ನುದ್ದೇಶಿಸಿ(ರ) ಹೇಳಿದರು- ನಾನು ನಿಮ್ಮ ಹತ್ತಿರದಿಂದ ಹಾದು ಹೋದೆ. ನೀವು ಮೆಲುದನಿಯಲ್ಲಿ ಕುರ್‌ಆನ್ ಪಠಿಸುತ್ತಿದ್ದಿರಿ. ಆಗ ಹ. ಅಬೂಬಕರ್(ರ) ಹೇಳಿದರು- ನಾನು ಯಾರೊಂದಿಗೆ ಸಂಭಾಷಣೆ ಮಾಡುತ್ತಿದ್ದೆನೋ ಅವನಿಗೆ ನಾನು ಕೇಳಿಸಿದೆ. ಆಗ ಪ್ರವಾದಿ(ಸ)- ನಿಮ್ಮ ಸ್ವರವನ್ನು ಸ್ವಲ್ಪ ಏರಿಸಿ ಎಂದರು. ಅನಂತರ ಪ್ರವಾದಿ(ಸ)- ಹ. ಉಮರ್‌ರನ್ನುದ್ದೇಶಿಸಿ(ರ) ಹೇಳಿದರು- ನಾನು ನಿಮ್ಮ ಬಳಿಯಿಂದ ಹಾದು ಹೋದೆ. ನೀವು ಕುರ್‌ಆನ್ ಉಚ್ಚ ಸ್ವರದಲ್ಲಿ ಓದುವುದನ್ನು ಕೇಳಿದೆ. ನಾನು ತೂಕಡಿಕೆಯನ್ನು ನೀಗಿಸುತ್ತೇನೆ ಮತ್ತು ಶೈತಾನನನ್ನು ಓಡಿಸುತ್ತೇನೆ ಎಂದು ಹ. ಉಮರ್(ರ) ಉತ್ತರಿಸಿದರು. ಆಗ ಪ್ರವಾದಿ(ಸ)- ನಿಮ್ಮ ಸ್ವರವನ್ನು ಸ್ವಲ್ಪ ತಗ್ಗಿಸಿ ಎಂದು ಆದೇಶಿಸಿದರು."

(ವರದಿ: ಹ. ಅಬೂ ಕತಾದಃ(ರ)- ಅಬೂ ದಾವೂದ್, ತಿರ್ಮಿದಿ)

"ಪ್ರವಾದಿ(ಸ) ಮನೆಯಲ್ಲಿ ನಮಾಝ್ ಮಾಡುವಾಗ ಕೋಣೆಯಲ್ಲಿದ್ದವರಿಗೆ ಕೇಳಿಸುತ್ತಿತ್ತು." (ವರದಿ: ಹ. ಇಬ್ನು ಅಬ್ಬಾಸ್(ರ)- ಅಬೂ ದಾವೂದ್)

## 6. ಕಝಾ

"ಪ್ರವಾದಿವರ್ಯರ(ಸ) ರಾತ್ರಿಯ ನಮಾಝ್ ಬಿಟ್ಟು ಹೋದಾಗ, ಅವರು ದಿನದ ವೇಳೆ ಹನ್ನೆರಡು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು." (ವರದಿ: ಹ. ಆಯಿಶಾ(ರ)- ಮುಸ್ಲಿಮ್)

ಪ್ರವಾದಿ(ಸ) ಹೇಳಿದರು: "ಯಾರಾದರೂ ತನ್ನ ನಿತ್ಯದ ರೂಢಿ (ತಹಜ್ಜುದ್ ನಮಾಝ್ ಇತ್ಯಾದಿ) ಅಥವಾ ಅದರ ಒಂದು ಭಾಗವನ್ನು ತೊರೆದು ನಿದ್ರಿಸಿದರೆ ಮತ್ತು ಅದನ್ನು ಫಜ್ರ್ ಮತ್ತು ಝುಹರ್ ನಮಾಝ್‌ಗಳ ಮಧ್ಯೆ ನಿರ್ವಹಿಸಿದರೆ, ಅವನು ಅದನ್ನು ರಾತ್ರಿಯಲ್ಲೇ, ತನ್ನ ರೂಢಿಯಂತೆ ನಿರ್ವಹಿಸಿದನೆಂದು ಅವನ ಪಾಲಿಗೆ ಬರೆಯಲಾಗುವುದು."

[ವರದಿ: ಹ. ಉಮರ್(ರ)]

◊

# ತರಾವೀಹ್ ಅಥವಾ ಕಿಯಾಮು ರಮಝಾನ್

### 1. ವಿಧಿ

ತರಾವೀಹ್ ಅಥವಾ ಕಿಯಾಮು ರಮಝಾನ್ ಎಲ್ಲ ಸ್ತ್ರೀ ಪುರುಷರ ಮೇಲೆ ಸುನ್ನತೆ ಮುಅಕ್ಕದಃ ಆಗಿದೆ. "ಪ್ರವಾದಿ(ಸ) ಒಂದು ರಾತ್ರಿ ಮಸೀದಿಯಲ್ಲಿ ನಮಾಝ್ ಮಾಡಿದರು. ಅನೇಕ ಜನರು ಅವರ ಜತೆ ಸೇರಿಕೊಂಡರು. ಎರಡನೆಯ ರಾತ್ರಿ ಪ್ರವಾದಿ(ಸ) ನಮಾಝ್ ಮಾಡಿದಾಗ ಜನರು ಇನ್ನೂ ಹೆಚ್ಚಾದರು. ಅನಂತರ ಮೂರನೆಯ ಅಥವಾ ನಾಲ್ಕನೆಯ ರಾತ್ರಿ ಜನರು ಸೇರಿದರು. ಆದರೆ ಪ್ರವಾದಿ(ಸ) ಮನೆಯಿಂದ ಹೊರಡಲಿಲ್ಲ. ಬೆಳಗಾದಾಗ-ನೀವು ಸೇರಿರುವುದನ್ನು ನಾನು ರಾತ್ರಿ ನೋಡಿದೆ. ಆದರೆ ಒಂದು ವಿಷಯ ನನ್ನನ್ನು ಮನೆಯಿಂದ ಹೊರಡುವುದರಿಂದ ತಡೆಯಿತು. ಅದು ಈ ನಮಾಝ್ ನಿಮ್ಮ ಮೇಲೆ ಕಡ್ಡಾಯವಾಗದಿರಲಿ ಎಂಬುದಾಗಿತ್ತು. ಈ ಘಟನೆ ರಮಝಾನ್‌ನಲ್ಲಿ ಸಂಭವಿಸಿತ್ತು."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ಇಬ್ನು ಮಾಜಃ, ಅಹ್ಮದ್, ಮಾಲಿಕ್)

ಪುರುಷರಂತೆ ಸ್ತ್ರೀಯರ ಮೇಲೂ ತರಾವೀಹ್ ನಮಾಝ್ ಸುನ್ನತ್ತಾಗಿದೆ.

"ನಾನು ಪ್ರವಾದಿವರ್ಯರ(ಸ) ಬಳಿ ಹಾಜರಾಗಿ ಕೇಳಿದೆ- ಅಲ್ಲಾಹನ ಪ್ರವಾದಿಗಳೇ! ಇಂದು ರಾತ್ರಿ ಒಂದು ವಿಚಿತ್ರ ಘಟನೆ ನಡೆಯಿತು. ಆಗ ರಮಝಾನ್ ತಿಂಗಳಾಗಿತ್ತು. ಪ್ರವಾದಿ(ಸ) ಅದೇನೆಂದು ವಿಚಾರಿಸಿದರು. ನಾನು ಹೇಳಿದೆ- ನನ್ನ ಮನೆಯಲ್ಲಿ ಕೆಲವು ಸ್ತ್ರೀಯರು ನನಗೆ ಹೇಳಿದರು: ಇಂದು ನಾವು ಕುರ್‌ಆನ್ ಪಠಿಸುವುದಿಲ್ಲ. ನಿಮ್ಮ ಜತೆ ನಮಾಝ್ ಮಾಡುವೆವು. ನಾನು ಅವರಿಗೆ ಎಂಟು ರಕಅತ್ ನಮಾಝ್ ಮಾಡಿಸಿದೆ. ಅನಂತರ ವಿತ್ರ್ ನಮಾಝ್ ಮಾಡಿದೆವು. ಆಗ ಪ್ರವಾದಿ(ಸ) ಏನೂ ಹೇಳಲಿಲ್ಲ. ಅವರು ಆ ಸುನ್ನತ್‌ನ ಬಗ್ಗೆ ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿದರು."

(ವರದಿ: ಹ. ಉಬೈ ಬಿನ್ ಕಅ್‌ಬ್(ರ)- ತಬ್ರಾನಿ, ಅಬೂ ಯಅ್‌ಲಾ)

### 2. ಮಹತ್ವ

ಕಿಯಾಮು ರಮಝಾನ್‌ಗೆ ಬಹಳ ಮಹತ್ವವಿದೆ.

"ರಮಝಾನ್‌ನಲ್ಲಿ ರಾತ್ರಿ ನಮಾಝ್ ಮಾಡುವಂತೆ ಪ್ರವಾದಿ(ಸ) ಜನರನ್ನು ಪ್ರೇರೇಪಿಸುತ್ತಿದ್ದರು. ಆದರೆ ಅವರು ಅದನ್ನು ಆಜ್ಞಾಪಿಸುತ್ತಿರಲಿಲ್ಲ. ಪ್ರವಾದಿ(ಸ) ಹೀಗೆ ಹೇಳುತ್ತಿದ್ದರು- ಯಾವನು ಸತ್ಯವಿಶ್ವಾಸದೊಂದಿಗೆ ಮತ್ತು ಕೇವಲ ಅಲ್ಲಾಹನ ಸಂಪ್ರೀತಿ ಬಯಸುತ್ತಾ ಕಿಯಾಮು ರಮಝಾನ್ ಮಾಡಿದನೋ ಅವನ ಹಿಂದಿನ ಮತ್ತು ಮುಂದಿನ ಎಲ್ಲ ಪಾಪಗಳನ್ನು ಕ್ಷಮಿಸಲಾಯಿತು."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಮಾಲಿಕ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

### 3. ಸಮಯ

ತರಾವೀಹ್‌ನ ಸಮಯವು ಇಶಾ ನಮಾಝ್‌ನ ನಂತರ ಆರಂಭವಾಗಿ ಫಜ್ರ್ ಆರಂಭವಾಗುವ ತನಕವೂ ಇರುತ್ತದೆ. ಅದನ್ನು ರಾತ್ರಿಯ ಕೊನೆಯ ಭಾಗದಲ್ಲಿ ನಿರ್ವಹಿಸುವುದು ಉತ್ತಮ.

### 4. ರಕಅತ್‌ಗಳು

ಪ್ರವಾದಿವರ್ಯರ(ಸ) ಸುನ್ನತ್‌ನ ಪ್ರಕಾರ ಕೆಲವು ವರದಿಗಳಂತೆ ತರಾವೀಹ್‌ಗೆ ಎಂಟು ರಕಅತ್ ಮತ್ತು ಇನ್ನು ಕೆಲವು ವರದಿಗಳ ಪ್ರಕಾರ 20 ರಕಅತ್‌ಗಳಿವೆ.

"ಪ್ರವಾದಿ(ಸ) ರಮಝಾನ್‌ನಲ್ಲಿ ಅಥವಾ ಇತರ ತಿಂಗಳುಗಳಲ್ಲಿ ಹನ್ನೊಂದು ರಕಅತ್ (ವಿತ್ರ್ ಸಮೇತ)ಗಿಂತ ಹೆಚ್ಚು ನಮಾಝ್ ಮಾಡುತ್ತಿರಲಿಲ್ಲ."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

"ಪ್ರವಾದಿ(ಸ) ರಮಝಾನ್‌ನಲ್ಲಿ ಜಮಾಅತ್ ಇಲ್ಲದೆ 20 ರಕಅತ್ ನಮಾಝ್ ಮಾಡುತ್ತಿದ್ದರು."

(ವರದಿ: ಹ. ಇಬ್ನು ಅಬ್ಬಾಸ್(ರ)- ಬೈಹಕಿ)

ಹ. ಉಮರ್(ರ) ತಮ್ಮ ಖಿಲಾಫತ್‌ನ ಕಾಲದಲ್ಲಿ 20 ರಕಅತ್ ತರಾವೀಹನ್ನು ರೂಢಿಗೆ ತಂದರು ಮತ್ತು ಅದೇ ಪದ್ಧತಿಯನ್ನು ಮುಂದಿನವರು ಅಳವಡಿಸಿದರು. ಇಮಾಮ್ ಅಬೂ ಹನೀಫಾ ಮತ್ತು ಇಮಾಮ್ ಶಾಫಿಈಯವರ(ರ) ಪ್ರಕಾರ ತರಾವೀಹ್‌ನ 20 ರಕಅತ್‌ಗಳನ್ನು ನಿರ್ವಹಿಸಬೇಕು.

### 5. ಜಮಾಅತ್

ತರಾವೀಹನ್ನು ಒಬ್ಬಂಟಿಯಾಗಿಯೂ ನಿರ್ವಹಿಸಬಹುದು, ಜಮಾಅತ್ ಸಹಿತವೂ ನಿರ್ವಹಿಸಬಹುದು. ಆದರೆ ಅದನ್ನು ಮಸೀದಿಯಲ್ಲಿ ಜಮಾಅತ್ ಸಹಿತ ನಿರ್ವಹಿಸುವುದು

ಉತ್ತಮ. ಪ್ರವಾದಿ(ಸ) ಸಹಾಬಿಗಳಿಗೆ ಮೂರು ರಾತ್ರಿ ಜಮಾಅತ್‌ನೊಂದಿಗೆ ನಮಾಝ್ ಮಾಡಿಸಿದರು. ಅದು ಸಮುದಾಯದ ಮೇಲೆ ಕಡ್ಡಾಯವಾದೀತೋ ಎಂಬ ಭಯದಿಂದ ನಾಲ್ಕನೆಯ ದಿನ ರಾತ್ರಿ ನಮಾಝ್ ಮಾಡಿಸಲಿಲ್ಲ. ಆದರೆ ಸಹಾಬಿಗಳು ಮಸೀದಿಯಲ್ಲೋ ಮನೆಯಲ್ಲೋ ಒಬ್ಬಂಟಿಯಾಗಿ ಈ ನಮಾಝ್ ಮಾಡುತ್ತಿದ್ದರು. ಹ. ಉಮರ್(ರ) ತಮ್ಮ ಖಿಲಾಫತ್‌ನ ಕಾಲದಲ್ಲಿ ಅವರೆಲ್ಲರನ್ನೂ ಮಸೀದಿಯಲ್ಲಿ ಓರ್ವ ಇಮಾಮರ ಹಿಂದೆ ಒಟ್ಟುಗೂಡಿಸಿದರು. ಏಕೆಂದರೆ ಅನಂತರ ಅದು ಕಡ್ಡಾಯವಾದೀತೆಂಬ ಭಯವಿರಲಿಲ್ಲ. ಈ ಜಮಾಅತನ್ನು ರಾತ್ರಿಯ ಆರಂಭ ವೇಳೆಯಲ್ಲಿ ನಡೆಸಲಾಗುತ್ತಿತ್ತು.

### 6. ಕಿರಾಅತ್

ರಮಝಾನ್‌ನ ರಾತ್ರಿ ನಮಾಝ್‌ನಲ್ಲಿ ಕುರ್‌ಆನ್ ಒಮ್ಮೆ ಓದಿ ಮುಗಿಸುವುದು ಸುನ್ನತ್ ಆಗಿದೆ ಎಂಬುದು ಎಲ್ಲ ಇಮಾಮ್‌ಗಳ ಅಭಿಪ್ರಾಯ.

### 7. ಮಧ್ಯಾವಧಿ

ತರಾವೀಹ್ ನಮಾಝನ್ನು ಎರಡೆರಡು ರಕಅತ್‌ಗಳಾಗಿ ನಿರ್ವಹಿಸುವುದು ಉತ್ತಮ. "ರಾತ್ರಿಯ ನಮಾಝ್ ಎರಡೆರಡು ರಕಅತ್‌ಗಳಾಗಿವೆ" ಎಂದು ಪ್ರವಾದಿ(ಸ) ಹೇಳಿರುವರು.

(ಬುಖಾರಿ, ಮುಸ್ಲಿಮ್)

ಸಹಾಬಿಗಳು ಕೂಡಾ ತರಾವೀಹ್ ನಮಾಝನ್ನು ಎರಡೆರಡು ರಕಅತ್ ಆಗಿಯೇ ನಿರ್ವಹಿಸುತ್ತಿದ್ದರು.

ಪ್ರತಿ ನಾಲ್ಕು ರಕಅತ್‌ಗಳ ಬಳಿಕ ಸ್ವಲ್ಪ ಹೊತ್ತು ಬಿಟ್ಟು ನಮಾಝ್ ಆರಂಭಿಸುವುದು ಉತ್ತಮವಾಗಿದೆ. ಸಹಾಬಿಗಳು ಹೀಗೆಯೇ ಮಾಡುತ್ತಿದ್ದರು. ಅದಕ್ಕಾಗಿಯೇ ಈ ನಮಾಝ್‌ನ ಹೆಸರು ತರಾವೀಹ್ ಎಂದಾಯಿತು.

◈

# ಈದ್ ನಮಾಝ್

ಈದ್ ನಮಾಝ್ ಹನಫೀ ಕ್ರಮದಂತೆ ವಾಜಿಬ್(ಕಡ್ಡಾಯ) ಆಗಿದೆ. ಶಾಫಿಈ ಮತ್ತು ಅಹ್ಲೆ ಹದೀಸ್ ಪ್ರಕಾರ ಅದು ಸುನ್ನತೆ ಮುಅಕ್ಕದಃ ಆಗಿದೆ.

ಪ್ರವಾದಿ(ಸ) ಮದೀನಾಕ್ಕೆ ಹೋದಾಗ ಹಿ.ಶ. 1 ಅಥವಾ 2ರಲ್ಲಿ ಈದ್ ನಮಾಝನ್ನು ಆರಂಭಿಸಿದರು. ಅನಂತರ ಅದನ್ನು ಕೊನೆಯ ತನಕ ಪಾಲಿಸಿದರು. ಜನರಿಗೂ ಅದನ್ನು ಆದೇಶಿಸಿದರು.

"ಪ್ರವಾದಿ(ಸ) ಮಕ್ಕಾದಿಂದ ಮದೀನಾಕ್ಕೆ ತಲುಪಿದಾಗ ಅಲ್ಲಿನ ಜನರು ವರ್ಷದಲ್ಲಿ ಎರಡು ದಿನಗಳನ್ನು ಆಟ-ವಿನೋದಗಳಿಗಾಗಿ ಮೀಸಲಿಟ್ಟಿರುವುದನ್ನು ಕಂಡರು. ಆ ಎರಡು ದಿನಗಳು ಎಂತಹವು ಎಂದು ಅವರು ವಿಚಾರಿಸಿದರು. ಆಗ ಜನರು- ಅಜ್ಞಾನ ಕಾಲದಲ್ಲಿ ನಾವು ಆ ದಿನಗಳಲ್ಲಿ ಆಟವಾಡುತ್ತಿದ್ದೆವು ಮತ್ತು ಸಂತೋಷ ಆಚರಿಸುತ್ತಿದ್ದೆವು ಎಂದು ಹೇಳಿದರು. ಆಗ ಪ್ರವಾದಿ(ಸ) ಹೇಳಿದರು- ಅಲ್ಲಾಹನು ನಿಮಗೆ ಈ ಎರಡು ದಿನಗಳ ಬದಲಿಗೆ ಇವುಗಳಿಗಿಂತ ಉತ್ತಮವಾದ ಎರಡು ದಿನಗಳನ್ನು ನಿಶ್ಚಯಿಸಿರುವನು. ಒಂದು ಈದುಲ್ ಫಿತ್ರ್‌ನ ದಿನ, ಮತ್ತೊಂದು ಈದುಲ್ ಅಝ್‌ಹಾದ ದಿನ." (ವರದಿ: ಹ. ಅನಸ್(ರ)- ಅಬೂ ದಾವೂದ್)

ಈದ್‌ನ ದಿವಸ ಧಾರ್ಮಿಕ ಮಿತಿಯೊಳಗಿದ್ದುಕೊಂಡು ತಿನ್ನುವುದು, ಕುಡಿಯುವುದು, ಆಡುವುದು ಮತ್ತು ಸಂತೋಷ ಆಚರಿಸುವುದು ಉತ್ತಮವಾಗಿದೆ.

"ಒಂದು ಈದ್‌ನ ದಿನ ಇಥಿಯೋಪಿಯಾದ ಜನರು ಪ್ರವಾದಿವರ್ಯರ(ಸ) ಬಳಿ ಆಡುತ್ತಿದ್ದರು. ನಾನು ಪ್ರವಾದಿಯವರ(ಸ) ಹೆಗಲ ಮೇಲಿಂದ ಇಣುಕಿ ನೋಡತೊಡಗಿದೆ. ಆಗ ಪ್ರವಾದಿ(ಸ) ತಮ್ಮ ಹೆಗಲನ್ನು ಬಗ್ಗಿಸಿದರು. ನಾನು ಅವರ ಹೆಗಲ ಮೇಲಿಂದ ನೋಡುತ್ತಲೇ ಇದ್ದೆ - ನಾನು ಮನದಣಿಯೆ ನೋಡಿ ಹಿಂದಿರುಗುವ ತನಕ."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್)

**ಈದ್‌ನ ದಿನದ ವಿಧಿಗಳು:**

**1. ಸ್ನಾನ ಮಾಡಿ ಉತ್ತಮ ಬಟ್ಟೆ ಧರಿಸುವುದು**

"ಪ್ರವಾದಿ(ಸ) ಈದ್‌ನ ದಿನ ತಮ್ಮ ಅತ್ಯುತ್ತಮ ಯಮನ್ ನಿರ್ಮಿತ ಚದ್ದರವನ್ನು ಧರಿಸುತ್ತಿದ್ದರು." (ವರದಿ: ಜಾಫರ್ ಬಿನ್ ಮುಹಮ್ಮದ್(ರ) ತಮ್ಮ ತಾತನಿಂದ- ಶಾಫಿಈ)

"ಹ. ಅಬ್ದುಲ್ಲಾ ಬಿನ್ ಉಮರ್(ರ) ಈದುಲ್ ಫಿತ್ರ್‌ನಂದು ಈದ್‌ಗಾಹ್‌ಗೆ ಹೋಗುವುದಕ್ಕೆ ಮುಂಚೆ ಸ್ನಾನ ಮಾಡುತ್ತಿದ್ದರು."

(ವರದಿ: ನಾಫಿಅ್(ರ)- ಮುವತ್ತಾ ಇಮಾಮ್ ಮಾಲಿಕ್)

**2. ತಿನ್ನುವುದು**

ಈದುಲ್ ಫಿತ್ರ್‌ನ ದಿವಸ ಪ್ರವಾದಿ(ಸ) ಕೆಲವು ಖರ್ಜೂರಗಳನ್ನು ತಿನ್ನುವ ತನಕ ನಮಾಝ್‌ಗೆ ಹೊರಡುತ್ತಿರಲಿಲ್ಲ. ಅವರು ಬೆಸಸಂಖ್ಯೆ (1,3,5,7...)ಯ ಖರ್ಜೂರಗಳನ್ನು ತಿನ್ನುತ್ತಿದ್ದರು. (ವರದಿ: ಹ. ಅನಸ್(ರ)- ಅಹ್ಮದ್, ಬುಖಾರಿ)

"ಈದುಲ್ ಫಿತ್ರ್‌ನ ದಿನ ಪ್ರವಾದಿ(ಸ) ಏನಾದರೂ ತಿನ್ನುವ ತನಕ ನಮಾಝ್‌ಗೆ ಹೋಗುತ್ತಿರಲಿಲ್ಲ. ಈದುಲ್ ಅಝ್‌ಹಾದ ದಿವಸ ಪ್ರವಾದಿ(ಸ) ನಮಾಝ್‌ನಿಂದ ಮರಳುವ ತನಕ ಏನೂ ತಿನ್ನುತ್ತಿರಲಿಲ್ಲ." (ವರದಿ: ಹ. ಬುರೈದಾ(ರ)- ತಿರ್ಮಿದಿ, ಇಬ್ನು ಮಾಜಃ, ಅಹ್ಮದ್)

'ಅಹ್ಮದ್'ನಲ್ಲಿ ಈ ಹೆಚ್ಚಿನ ಪದಗಳಿವೆ. 'ಪ್ರವಾದಿ(ಸ) ಕುರ್ಬಾನಿಯ ಮಾಂಸದಿಂದ ತಿನ್ನುತ್ತಿದ್ದರು.'

**3. ಈದ್ ನಮಾಝ್ ಮೈದಾನದಲ್ಲಿ**

ನಗರದಿಂದ ಹೊರಗೆ ಹೋಗಿ ಮೈದಾನದಲ್ಲಿ ಈದ್ ನಮಾಝ್ ಮಾಡುವುದು ಸುನ್ನತ್ ಆಗಿದೆ. ಪ್ರವಾದಿ(ಸ) ಮದೀನಾದಿಂದ ಹೊರಗೆ ಹೋಗಿ ಈದ್‌ಗಾಹ್‌ನಲ್ಲಿ ಈದ್ ನಮಾಝ್ ನಿರ್ವಹಿಸುತ್ತಿದ್ದರು. ಒಂದು ವೇಳೆ ಮಳೆ ಇದ್ದರೆ ಮಸೀದಿಯಲ್ಲೇ ನಮಾಝ್ ಮಾಡುತ್ತಿದ್ದರು.

"ಒಮ್ಮೆ ಈದ್ ದಿನ ಮಳೆಯಾಗುತ್ತಿತ್ತು. ಆದ್ದರಿಂದ ಪ್ರವಾದಿ(ಸ) ಮಸೀದಿಯಲ್ಲೇ ಜನರಿಗೆ ಈದ್ ನಮಾಝ್ ಮಾಡಿಸಿದರು."

(ವರದಿ: ಹ. ಅಬೂ ಹುರೈರಾ(ರ)- ಅಬೂ ದಾವೂದ್, ನಸಾಈ)

ಇಮಾಮ್ ಅಬೂ ಹನೀಫಾ ಮತ್ತಿತರ ಇಮಾಮರ ಪ್ರಕಾರ ಕಾರಣವಿಲ್ಲದೆ ಈದ್ ನಮಾಝನ್ನು ಮಸೀದಿಯಲ್ಲಿ ನಿರ್ವಹಿಸುವುದು ಮಕ್ರೂಹ್ (ಅನಪೇಕ್ಷಣೀಯ) ಆಗಿದೆ. ಆದರೆ ಇಮಾಮ್ ಶಾಫಿಈಯವರ ಪ್ರಕಾರ ಈದ್ ನಮಾಝ್ ಮಸೀದಿಯಲ್ಲೇ ಮಾಡುವುದು ಉತ್ತಮ. ಮಸೀದಿಯಲ್ಲಿ ಸ್ಥಳಾವಕಾಶವಿಲ್ಲದಾಗ ಮಾತ್ರ ಹೊರಗೆ ನಮಾಝ್ ಮಾಡುವುದು ಸುನ್ನತ್ ಆಗಿದೆ.

**4. ಈದ್‌ಗಾಹ್‌ಗೆ ಕಾಲ್ನಡಿಗೆಯಲ್ಲಿ ಹೋಗುವುದು**

"ಈದ್‌ಗಾಹ್‌ಗೆ ಕಾಲ್ನಡಿಗೆಯಲ್ಲೇ ಹೋಗುವುದು ಮತ್ತು ಹೊರಡುವುದಕ್ಕಿಂತ ಮುಂಚೆ ಏನಾದರೂ ತಿನ್ನುವುದು ಸುನ್ನತ್ ಆಗಿದೆ." (ವರದಿ: ಹ. ಅಲೀ(ರ)- ತಿರ್ಮಿದಿ)

"ಪ್ರವಾದಿ(ಸ) ಈದ್‌ಗಾಹ್‌ಗೆ ಕಾಲ್ನಡಿಗೆಯಲ್ಲೇ ಹೋಗುತ್ತಿದ್ದರು."

(ವರದಿ: ಹ. ಇಬ್ನು ಉಮರ್(ರ)- ಇಬ್ನು ಮಾಜಃ)

**5. ಈದ್‌ಗಾಹ್‌ಗೆ ಹೋಗುವಾಗ ತಕ್ಬೀರ್ ಹೇಳುವುದು**

ಇಬ್ನು ಉಮರ್(ರ) ಈದ್‌ಗಾಹ್ ಕಡೆಗೆ ಹೋಗುವಾಗ ಉಚ್ಚಸ್ವರದಲ್ಲಿ ತಕ್ಬೀರ್ ಹೇಳುತ್ತಿದ್ದರು. ಈದುಲ್ ಫಿತ್ರ್‌ನ ದಿವಸ ಸೂರ್ಯ ಉದಿಸಿದಾಗ ಈದ್‌ಗಾಹ್‌ನಲ್ಲಿ ತಕ್ಬೀರ್ ಹೇಳುತ್ತಿರುತ್ತಿದ್ದರು. ನಮಾಝ್ ಆರಂಭಗೊಳ್ಳುವ ತನಕ ತಕ್ಬೀರ್ ಹೇಳುವುದು ಮುಂದುವರಿಯುತ್ತಿತ್ತು. (ಶಾಫಿಈ)

ಈದ್‌ಗಾಹ್‌ಗೆ ಹೋಗುವಾಗ ಮತ್ತು ಈದ್‌ಗಾಹ್‌ನ ಒಳಗೆ ತಕ್ಬೀರ್ ಹೇಳುವುದು ಎಲ್ಲ ಇಮಾಮ್‌ಗಳ ಪ್ರಕಾರ ಉತ್ತಮವಾಗಿದೆ.

**6. ಹೋಗುವಾಗ ಮತ್ತು ಬರುವಾಗ ರಸ್ತೆ ಬದಲಿಸುವುದು**

ಈದ್‌ಗಾಹ್‌ಗೆ ಒಂದು ರಸ್ತೆಯಿಂದ ಹೋಗಿ ಇನ್ನೊಂದು ರಸ್ತೆಯಿಂದ ಬರುವುದು ಉತ್ತಮ.

"ಪ್ರವಾದಿ(ಸ) ಈದ್‌ನ ದಿನ ಈದ್‌ಗಾಹ್‌ಗೆ ಹೋಗುವಾಗ ಮತ್ತು ಅಲ್ಲಿಂದ ಬರುವಾಗ ರಸ್ತೆ ಬದಲಿಸುತ್ತಿದ್ದರು." (ವರದಿ: ಜಾಬಿರ್(ರ)- ಬುಖಾರಿ)

**7. ಈದ್ ನಮಾಝ್‌ಗೆ ಸ್ತ್ರೀಯರು ಮತ್ತು ಮಕ್ಕಳು**

ಪುರುಷರಲ್ಲದೆ ಸ್ತ್ರೀಯರು ಕೂಡಾ ಈದ್‌ಗಾಹ್‌ಗೆ ತೆರಳಿ ನಮಾಝ್ ಮಾಡುವುದು ಸುನ್ನತ್ ಆಗಿದೆ.

"ನಾನು ಈದುಲ್ ಫಿತ್ರ್ ಅಥವಾ ಈದುಲ್ ಅಝ್‌ಹಾದ ದಿವಸ ಪ್ರವಾದಿಯವರ(ಸ) ಜತೆಗೆ ಹೋದೆ. ಪ್ರವಾದಿ(ಸ) ನಮಾಝ್ ಮಾಡಿಸಿದ ನಂತರ ಖುತ್‌ಬಾ ನೀಡಿದರು. ಬಳಿಕ ಸ್ತ್ರೀಯರ ಬಳಿಗೆ ಹೋಗಿ ಅವರಿಗೆ ಉಪದೇಶ ಮಾಡಿದರು. ಅವರಿಗೆ ದಾನ-ಧರ್ಮದ ಆಜ್ಞೆ ನೀಡಿದರು." (ವರದಿ: ಇಬ್ನು ಅಬ್ಬಾಸ್(ರ)- ಬುಖಾರಿ)

ಈದುಲ್ ಫಿತ್ರ್ ಮತ್ತು ಈದುಲ್ ಅಝ್‌ಹಾದ ದಿವಸ ನಾವು ಸಣ್ಣ ಮಕ್ಕಳನ್ನು, ಯುವತಿಯರನ್ನು ಮತ್ತು ಮುಟ್ಟಾದ ಸ್ತ್ರೀಯರನ್ನೂ ಈದ್‌ಗಾಹ್‌ಗೆ ಕರೆದುಕೊಂಡು ಹೋಗಬೇಕೆಂದು ಪ್ರವಾದಿ(ಸ) ನನಗೆ ಆಜ್ಞಾಪಿಸಿದರು. ಆದರೆ ಮುಟ್ಟಾದ ಸ್ತ್ರೀಯರು ನಮಾಝ್‌ನಿಂದ (ಇತರ ವರದಿಗಳ ಪ್ರಕಾರ ನಮಾಝ್‌ನ ಸ್ಥಳದಿಂದ) ದೂರವಿರಬೇಕು. ಅವರು ಒಳಿತು ಮತ್ತು ಮುಸ್ಲಿಮರ ಪ್ರಾರ್ಥನೆಗಳಲ್ಲಿ ಭಾಗವಹಿಸಬಹುದು. ಆಗ ನಾನು ಕೇಳಿದೆ- ಅಲ್ಲಾಹನ ಪ್ರವಾದಿಗಳೇ! ಕೆಲವು ಮಹಿಳೆಯರ ಬಳಿ ಹೊದ್ದುಕೊಳ್ಳಲು ಚದ್ದರವಿರುವುದಿಲ್ಲ. (ಅವರೇನು ಮಾಡಬೇಕು) ಯಾರ ಬಳಿ ಚದ್ದರವಿಲ್ಲವೋ ಆಕೆಯ ಸೋದರಿ ಆಕೆಯನ್ನು ತನ್ನ ಚದ್ದರದಲ್ಲಿ ಕರೆದುಕೊಂಡು ಹೋಗಬೇಕು."

(ವರದಿ: ಹ. ಉಮ್ಮು ಅತಿಯ್ಯ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ನಸಾಈ, ಇಬ್ನು ಮಾಜಃ, ತಿರ್ಮಿದಿ, ಅಹ್ಮದ್)

ಈದ್‌ನ ದಿನ ಪ್ರವಾದಿ(ಸ) ತಮ್ಮ ಪತ್ನಿಯರನ್ನು ಮತ್ತು ಪುತ್ರಿಯರನ್ನು ಈದ್‌ಗಾಹ್‌ಗೆ ಕರೆದುಕೊಂಡು ಹೋಗುತ್ತಿದ್ದರು.

ಹನಫೀ ಕರ್ಮಶಾಸ್ತ್ರ ಪ್ರಕಾರ ಮಹಿಳೆಯರು ಈದ್‌ಗಾಹ್‌ಗೆ ಹೋಗುವುದು ಮಕ್ರೂಹ್ (ಅನಪೇಕ್ಷಿತ) ಆಗಿದೆ. ಅವರ ಪ್ರಕಾರ ಸ್ತ್ರೀಯರು ಈದ್‌ಗಾಹ್‌ಗೆ ಹೋಗುವ ಆಜ್ಞೆಯು ಅನೂರ್ಜಿತಗೊಂಡಿದೆ. ಏಕೆಂದರೆ ಹ. ಆಯಿಶಾ(ರ) ಹೀಗೆ ಹೇಳಿರುವರು:

"ಈ ಕಾಲದಲ್ಲಿ ಸ್ತ್ರೀಯರು ಆರಂಭ ಮಾಡಿರುವ ಹೊಸ ಹೊಸ ಕಾರ್ಯಗಳನ್ನು ಪ್ರವಾದಿ(ಸ) ಕಂಡಿದ್ದರೆ ಅವರನ್ನು ಮಸೀದಿಗೆ ಹೋಗುವುದರಿಂದ ತಡೆಯುತ್ತಿದ್ದರು - ಬನೂ ಇಸ್ರಾಈಲರ ಸ್ತ್ರೀಯರನ್ನು ತಡೆದಂತೆ." (ತಿರ್ಮಿದಿ)

**8. ಸಮಯ**

ಈದ್ ನಮಾಝ್‌ನ ಸಮಯವು ಸೂರ್ಯನು ಸುಮಾರು ಒಂದೆರಡು ಗಜ ಏರಿದ ನಂತರ ಆರಂಭವಾಗುತ್ತದೆ.

"ಪ್ರವಾದಿ(ಸ) ಈದುಲ್ ಫಿತ್ರ್‌ನ ನಮಾಝನ್ನು ಸೂರ್ಯನು ಎರಡು ಗೇಣಿನಷ್ಟು ಮೇಲೇರಿದಾಗ ನಿರ್ವಹಿಸುತ್ತಿದ್ದರು ಮತ್ತು ಈದುಲ್ ಅಝ್‌ಹಾದ ನಮಾಝ್ ಸೂರ್ಯನು ಒಂದು ಗೇಣಿನಷ್ಟು ಮೇಲೇರಿದಾಗ ಮಾಡಿಸುತ್ತಿದ್ದರು."

(ವರದಿ: ಹ. ಜುಂದುಬ್(ರ)- ಅಹ್ಮದ್ ಬಿನ್ ಹಸನ್ ಅಲ್ ಬನ್ನಾ)

ಈದುಲ್ ಫಿತ್ರ್‌ನ ನಮಾಝ್ ಸ್ವಲ್ಪ ಹೊತ್ತೇರಿದಾಗ ಮತ್ತು ಈದುಲ್ ಅಝ್‌ಹಾದ ನಮಾಝ್ ಬೇಗ ನಿರ್ವಹಿಸುವುದು ಒಳ್ಳೆಯದು. ಸೂರ್ಯನು ಇಳಿಮುಖವಾದಾಗ ಈದ್ ನಮಾಝ್‌ನ ಸಮಯ ಮುಕ್ತಾಯವಾಗುತ್ತದೆ.

**9. ಅದಾನ್ ಮತ್ತು ಇಕಾಮತ್ ಇಲ್ಲ**

"ನಾನು ಅನೇಕ ಸಲ ಪ್ರವಾದಿಯವರ(ಸ) ಹಿಂದೆ ಅದಾನ್ ಮತ್ತು ಇಕಾಮತ್ ಇಲ್ಲದೆಯೇ ಈದ್ ನಮಾಝ್ ನಿರ್ವಹಿಸಿದ್ದೇನೆ."

(ವರದಿ: ಜಾಬಿರ್ ಬಿನ್ ಸಮ್ರಃ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

ಈದ್ ನಮಾಝ್‌ಗೆ ಮುಂಚೆ 'ಅಸ್ಸಲಾತುಲ್ ಜಾಮಿಅಃ' ಎಂದು ಉಚ್ಚ ಸ್ವರದಲ್ಲಿ ಹೇಳುವುದು ಒಳ್ಳೆಯದು.

"ಈದ್‌ನ ದಿನ ಪ್ರವಾದಿ(ಸ) ಅದಾನ್ ಹೇಳುವವರಿಗೆ ಆಜ್ಞಾಪಿಸುತ್ತಿದ್ದರು ಮತ್ತು ಅವರು 'ಅಸ್ಸಲಾತುಲ್ ಜಾಮಿಅಃ' ಎಂದು ಉಚ್ಚಸ್ವರದಲ್ಲಿ ಹೇಳುತ್ತಿದ್ದರು."

(ವರದಿ: ಇಮಾಮ್ ಝುಹರಿ(ರ)- ಇಮಾಮ್ ಶಾಫಿಈ)

ಹನಫೀ ಮತ್ತು ಶಾಫಿಈ ಕ್ರಮದಂತೆಯೂ ಹೀಗೆ ಹೇಳುವುದು ಉತ್ತಮ.

**10. ಸುನ್ನತ್ ನಮಾಝ್ ಇಲ್ಲ**

ಈದ್ ನಮಾಝ್‌ಗೆ ಮುಂಚೆಯಾಗಲಿ, ಅದರ ನಂತರವಾಗಲಿ ಯಾವುದೇ ಸುನ್ನತ್ ನಮಾಝ್ ಪ್ರವಾದಿ(ಸ) ಅಥವಾ ಸಹಾಬಿಗಳಿಂದ ಸಾಬೀತಾಗಿಲ್ಲ.

"ಒಂದು ಈದ್‌ನ ದಿನ ಪ್ರವಾದಿ(ಸ) ಈದ್‌ಗಾಹ್‌ಗೆ ಹೋದರು. ಅವರು ಎರಡು

ರಕಅತ್ ಈದ್‌ನ ನಮಾಝ್ ಮಾಡಿದರು. ಅದರ ಮುಂಚೆಯಾಗಲೀ ನಂತರವಾಗಲೀ ಅವರು ಯಾವುದೇ ನಮಾಝ್ ಮಾಡಲಿಲ್ಲ."

(ವರದಿ: ಹ. ಇಬ್ನು ಅಬ್ಬಾಸ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ, ಅಹ್ಮದ್)

## 11. ರಕಅತ್ ಮತ್ತು ಕಿರಾಅತ್

ಈದ್ ನಮಾಝ್‌ಗೆ ಎರಡು ರಕಅತ್‌ಗಳಿವೆಯೆಂಬುದು ಸರ್ವಸಮ್ಮತ. ಅವುಗಳಲ್ಲಿ ಸೂರಃ ಫಾತಿಹಾದ ನಂತರ ಪ್ರವಾದಿ(ಸ) ಪಠಿಸುತ್ತಿದ್ದ ಯಾವುದಾದರೂ ಸೂರಃ ಪಠಿಸಬೇಕು.

"ಪ್ರವಾದಿ(ಸ) ಎರಡು ಈದ್‌ಗಳ ನಮಾಝ್‌ನಲ್ಲಿ 'ಸಬ್ಬಿಹಿಸ್ಮ ರಬ್ಬಿಕಲ್ ಅಅ್‌ಲಾ' ಮತ್ತು 'ಹಲ್ ಅತಾಕ ಹದೀಸುಲ್ ಗಾಷಿಯ' ಪಠಿಸುತ್ತಿದ್ದರು."

(ವರದಿ: ಹ. ಸಮ್ರಃ(ರ)- ಅಹ್ಮದ್)

"ಪ್ರವಾದಿ(ಸ) ಈದುಲ್ ಫಿತ್ರ್ ಮತ್ತು ಈದುಲ್ ಅಝ್‌ಹಾದ ನಮಾಝ್‌ನಲ್ಲಿ ಏನನ್ನು ಪಠಿಸುತ್ತಿದ್ದರೆಂದು ಹ. ಉಮರ್‌ರವರು(ರ) ಹ. ಅಬೂ ವಾಕಿದ್ ಲೈಸಿಯವರಲ್ಲಿ(ರ) ವಿಚಾರಿಸಿದರು. ಆಗ ಅವರು- ಪ್ರವಾದಿ(ಸ) ಅವುಗಳಲ್ಲಿ ಸೂರಃ ಕಾಫ್ ಮತ್ತು 'ಇಕ್‌ತರಬತಿಸ್ಸಾಅತು' (ಸೂರಃ ಕಮರ್) ಪಠಿಸುತ್ತಿದ್ದರು" ಎಂದು ಉತ್ತರಿಸಿದರು.

(ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ, ಅಹ್ಮದ್)

ಈದ್ ನಮಾಝ್‌ನಲ್ಲಿ ಕಿರಾಅತ್ ಜೋರಾಗಿ ಪಠಿಸುವುದು ಸುನ್ನತ್ ಆಗಿದೆ.

## 12. ಹೆಚ್ಚುವರಿ ತಕ್ಬೀರ್‌ಗಳು

ಈದ್ ನಮಾಝ್‌ನ ಪ್ರಥಮ ರಕಅತ್‌ನಲ್ಲಿ ಕಿರಾಅತ್‌ಗಿಂತ ಮೊದಲು ಏಳು ಹೆಚ್ಚುವರಿ ತಕ್ಬೀರ್ ಮತ್ತು ದ್ವಿತೀಯ ರಕಅತ್‌ನಲ್ಲಿ ಕಿರಾಅತ್‌ಗಿಂತ ಮುಂಚೆ ಐದು ಹೆಚ್ಚುವರಿ ತಕ್ಬೀರ್ ಹೇಳುವುದು ಸುನ್ನತ್ ಆಗಿದೆ.

"ಪ್ರವಾದಿ(ಸ) ಈದ್‌ನ ದಿವಸ ಹನ್ನೆರಡು (ಹೆಚ್ಚುವರಿ) ತಕ್ಬೀರ್‌ಗಳನ್ನು ಹೇಳಿದರು. 7 ತಕ್ಬೀರ್ ಮೊದಲ ರಕಅತ್‌ನಲ್ಲಿ 5 ತಕ್ಬೀರ್ ಎರಡನೆಯ ರಕಅತ್‌ನಲ್ಲಿ. ಪ್ರವಾದಿ(ಸ) ಅದಕ್ಕೆ ಮುಂಚೆಯಾಗಲೀ ನಂತರವಾಗಲೀ ಯಾವುದೇ ನಮಾಝ್ ಮಾಡಲಿಲ್ಲ."

(ವರದಿ: ಹ. ಅಮ್ರ್ ಬಿನ್ ಶುಐಬ್(ರ)- ಅಹ್ಮದ್, ಇಬ್ನು ಮಾಜಃ)

ಇದುವೇ ಇಮಾಮ್ ಶಾಫಿಈಯವರ ಅಭಿಪ್ರಾಯವಾಗಿದೆ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಪ್ರಥಮ ರಕಅತ್‌ನಲ್ಲಿ ಕಿರಾಅತ್‌ಗಿಂತ ಮುಂಚೆ ಮೂರು ಹೆಚ್ಚುವರಿ ತಕ್ಬೀರ್ ಮತ್ತು ದ್ವಿತೀಯ ರಕಅತ್‌ನಲ್ಲಿ ಕಿರಾಅತ್‌ನ ನಂತರ ರುಕೂಅ್‌ಗಿಂತ ಮುಂಚೆ ಮೂರು ಹೆಚ್ಚುವರಿ ತಕ್ಬೀರ್ ಹೇಳಬೇಕು. ಅವರಿಗೆ ಹ. ಇಬ್ನು ಮಸ್‌ಊದ್, ಅಬೂ ಮೂಸಾ, ಅಬೂ ಮಸ್‌ಊದ್ ಅನ್ಸಾರಿಯವರ(ರ) ಅಭಿಪ್ರಾಯವೇ ಆಧಾರವಾಗಿದೆ.

ಹನಫೀ ಮತ್ತು ಶಾಫಿಈ ಕರ್ಮಶಾಸ್ತ್ರ ಪ್ರಕಾರ ಹೆಚ್ಚುವರಿ ತಕ್ಬೀರ್ ಹೇಳುವಾಗ 'ರಫ್‌ಉಲ್ ಯದೈನ್' (ಎರಡು ಕೈಗಳನ್ನು ಎತ್ತುವುದು) ಸುನ್ನತ್ ಆಗಿದೆ.

**13. ಈದ್‌ನ ಖುತ್‌ಬಾ(ಪ್ರವಚನ)**

ಈದ್ ನಮಾಝ್‌ನ ನಂತರ ಇಮಾಮ್ ಜನರಿಗೆ ಖುತ್ಬಾ (ಪ್ರವಚನ) ನೀಡುವುದು ಸುನ್ನತ್ ಆಗಿದೆ.

"ಒಂದು ಈದ್‌ನ ದಿನ ನಾನು ಪ್ರವಾದಿವರ್ಯರ(ಸ) ಜತೆ ಈದ್‌ಗಾಹ್‌ನಲ್ಲಿದ್ದೆ. ಪ್ರವಾದಿ(ಸ) ನಮಾಝ್ ಮುಗಿಸಿದ ಬಳಿಕ ಹೀಗೆ ಹೇಳಿದರು- ನಾನು ಈಗ ಖುತ್‌ಬಾ ನೀಡುತ್ತೇನೆ, ಕುಳಿತುಕೊಳ್ಳ ಬಯಸುವವನು ಕುಳಿತುಕೊಂಡು ಖುತ್‌ಬಾ ಆಲಿಸಲಿ. ಹೋಗ ಬಯಸುವವನು ಹೋಗಲಿ."

(ವರದಿ: ಹ. ಅಬ್ದುಲ್ಲಾ ಬಿನ್ ಸಾಇಬ್(ರ)- ಅಬೂ ದಾವೂದ್, ನಸಾಈ, ಇಬ್ನು ಮಾಜ:)

ಈದ್‌ನ ಖುತ್‌ಬಾ ಸುನ್ನತ್ ಆಗಿದೆ ಎಂಬುದು ಸರ್ವಸಮ್ಮತ ವಿಷಯ. ಈದ್ ನಮಾಝನ್ನು ವಾಜಿಬ್(ಕಡ್ಡಾಯ) ಎಂದು ಪರಿಗಣಿಸುವ ಹನಫೀಗಳು ಕೂಡಾ ಅದನ್ನು ಸುನ್ನತ್ ಎನ್ನುತ್ತಾರೆ.

ಈದ್‌ನ ಖುತ್‌ಬಾವನ್ನು ಎರಡು ಕಂತುಗಳಲ್ಲಿ ನೀಡುವುದು ಸುನ್ನತ್ ಆಗಿದೆ ಎಂಬುದು ಹನಫೀ ಮತ್ತು ಶಾಫಿಈ ವಿದ್ವಾಂಸರ ಅಭಿಮತ.

ಎಲ್ಲ ಖುತ್‌ಬಾಗಳಂತೆ ಈದ್‌ನ ಖುತ್‌ಬಾವನ್ನು 'ಅಲ್ ಹಮ್ದುಲಿಲ್ಲಾಹ್'ದಿಂದ ಆರಂಭಿಸದೆ 'ಅಲ್ಲಾಹು ಅಕ್ಬರ್'ನಿಂದ ಆರಂಭಿಸುವುದು ಮತ್ತು ಮಧ್ಯೆ ಮಧ್ಯೆ ಅನೇಕ ಸಲ ತಕ್ಬೀರ್ ಹೇಳುವುದು ಉತ್ತಮ. ಇಮಾಮ್ ಈದುಲ್ ಫಿತ್ರ್‌ನ ದಿವಸ ಖುತ್‌ಬಾದಲ್ಲಿ ಸದಕತುಲ್ ಫಿತ್ರ್‌ನ ಬಗ್ಗೆ ಮತ್ತು ಈದುಲ್ ಅಝ್‌ಹಾದ ಖುತ್ಬಾದಲ್ಲಿ ಕುರ್ಬಾನಿ ಮತ್ತು ಅಯ್ಯಾಮುತ್ತಶ್ರೀಕ್‌ನಲ್ಲಿ ತಕ್ಬೀರ್ ಹೇಳುವ ಬಗ್ಗೆ ತಿಳಿಸುವುದು ಸುನ್ನತ್ ಆಗಿದೆ. ಈದ್‌ಗೆ ಮೊದಲು ಬರುವ ಜುಮಾದ ಖುತ್ಬಾದಲ್ಲಿ ಈ ಎಲ್ಲ ವಿಷಯಗಳ ಕುರಿತು ತಿಳಿಸುವುದು ಉತ್ತಮವಾಗಿದೆ.

◈

# ಪ್ರಯಾಣಿಕನ ನಮಾಝ್

**1.** ನಾಲ್ಕು ರಕಅತ್‌ಗಳ ನಮಾಝ್‌ನಲ್ಲಿ ಕಸ್ರ್(ಕಡಿತ)

ಅಲ್ಲಾಹನು ಈ ರೀತಿ ಹೇಳಿರುವನು:

"ನೀವು ಪ್ರಯಾಣಕ್ಕೆ ಹೊರಟಾಗ ನಮಾಝನ್ನು 'ಕಸ್ರ್' ಮಾಡಿಕೊಳ್ಳುವುದರಲ್ಲಿ (ಕಡಿತಗೊಳಿಸಿಕೊಳ್ಳುವುದರಲ್ಲಿ) ಅಡ್ಡಿಯಿಲ್ಲ. (ಮುಖ್ಯವಾಗಿ) ಸತ್ಯನಿಷೇಧಿಗಳು ನಿಮ್ಮನ್ನು ಸತಾಯಿಸುವರೆಂಬ ಆಶಂಕೆಯುಂಟಾದಾಗ." (ಪವಿತ್ರ ಕುರ್‌ಆನ್, 4:101)

ಮೇಲ್ನೋಟಕ್ಕೆ ಈ ಆಯತ್‌ನಿಂದ ಕಸ್ರ್ ನಮಾಝ್ ಕೇವಲ 'ಭಯ'ದ ಸಂದರ್ಭದಲ್ಲಿದೆಯೆಂದು ತಿಳಿದು ಬರುತ್ತದೆ. ಆದರೆ ಪ್ರವಾದಿ(ಸ) ಮತ್ತು ಸಹಾಬಿಗಳು(ರ) 'ಭಯ' ಇದ್ದಾಗಲೂ ಇಲ್ಲದಾಗಲೂ ಪ್ರಯಾಣದಲ್ಲಿ ಕಸ್ರ್ ನಮಾಝ್ ಮಾಡಿರುವರು.

"ಒಮ್ಮೆ ನಾನು ಹ. ಉಮರ್ ಬಿನ್ ಖತ್ತಾಬ್‌ರಲ್ಲಿ(ರ) ಹೀಗೆ ವಿಚಾರಿಸಿದೆ- ಜನರು ಈಗಲೂ ಪ್ರಯಾಣದಲ್ಲಿ ಕಸ್ರ್ ನಮಾಝ್ ಮಾಡುತ್ತಿದ್ದಾರೆ. ವಸ್ತುತಃ ಅಲ್ಲಾಹನು ಈ ರೀತಿ ಹೇಳಿರುವನು: 'ನೀವು ಪ್ರಯಾಣಕ್ಕೆ ಹೊರಟಾಗ ನಮಾಝನ್ನು ಕಸ್ರ್ ಮಾಡಿಕೊಳ್ಳುವುದರಲ್ಲಿ ಅಡ್ಡಿಯಿಲ್ಲ. (ಮುಖ್ಯವಾಗಿ) ಸತ್ಯನಿಷೇಧಿಗಳು ನಿಮ್ಮನ್ನು ಸತಾಯಿಸುವರೆಂಬ ಆಶಂಕೆಯುಂಟಾದಾಗ.' ಇಂದು ಈ 'ಭಯ'ದ ವಾತಾವರಣ ಇಲ್ಲವಲ್ಲಾ? ಆಗ ಹ. ಉಮರ್(ರ) ಹೇಳಿದರು- ನಿಮಗೆ ಆಶ್ಚರ್ಯವಾದ ವಿಷಯದಲ್ಲಿ ನನಗೆ ಆಶ್ಚರ್ಯವಾಗಿತ್ತು. ನಾನು ಅದನ್ನು ಪ್ರವಾದಿವರ್ಯರಲ್ಲಿ(ಸ) ಪ್ರಸ್ತಾಪಿಸಿದ್ದೆ. ಆಗ ಅವರು ಹೇಳಿದರು- ಇದು ಅಲ್ಲಾಹನು ನಿಮಗೆ ನೀಡಿರುವ ಒಂದು ಸದಕಾ(ದಾನ) ಆಗಿದೆ. ಆದ್ದರಿಂದ ನೀವು ಆ 'ಸದಕಾ'ವನ್ನು ಸ್ವೀಕರಿಸಿರಿ."

(ವರದಿ: ಹ. ಯಅ್‌ಲಾ ಬಿನ್ ಉಮಯ್ಯಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಮಕ್ಕಾದಲ್ಲಿ ನಮಾಝ್ ಎರಡೆರಡು ರಕಅತ್ ಕಡ್ಡಾಯವಾಗಿತ್ತು. ಪ್ರವಾದಿ(ಸ) ಮದೀನಾಕ್ಕೆ ಆಗಮಿಸಿದಾಗ ಎರಡು ರಕಅತ್‌ಗಳ ಜತೆ ಎರಡು ರಕಅತ್‌ಗಳನ್ನು ಸೇರಿಸಿಕೊಂಡರು. ಮಗ್ರಿಬ್ ನಮಾಝ್‌ನ ಹೊರತು. ಏಕೆಂದರೆ ಅದು ಹಗಲಿನ ವಿತ್ರ್ ಆಗಿದೆ ಮತ್ತು ಫಜ್ರ್‌ನ ಹೊರತು ಏಕೆಂದರೆ ಅದರ ಕಿರಾಅತ್ ದೀರ್ಘವಾಗಿರುತ್ತದೆ. ಆದರೆ

ಪ್ರವಾದಿ(ಸ) ಪ್ರಯಾಣದಲ್ಲಿರುವಾಗ ಮೊದಲಿನಂತೆಯೇ ನಮಾಝ್ ಮಾಡುತ್ತಿದ್ದರು. (ಮಕ್ಕಾದಲ್ಲಿ ಕಡ್ಡಾಯವಾಗಿದ್ದಂತೆ ಎರಡೆರಡು ರಕಅತ್‌ಗಳು)

(ವರದಿ: ಹ. ಆಯಿಶಾ(ರ)- ಅಹ್ಮದ್, ಬೈಹಕಿ, ಇಬ್ನು ಹಿಬ್ಬಾನ್, ಇಬ್ನು ಖುಝೈಮ)

ಪ್ರವಾದಿ(ಸ) ಪ್ರಯಾಣದಲ್ಲಿ ಯಾವಾಗಲೂ ನಮಾಝ್ ಕಸ್ರ್ (ಕಡಿತ) ಮಾಡುತ್ತಿದ್ದರು. ಪ್ರಯಾಣದಲ್ಲಿ ಪ್ರವಾದಿ(ಸ) ನಾಲ್ಕು ರಕಅತ್ ನಮಾಝ್ ಮಾಡಿದ ಕುರಿತು ಯಾವುದೇ ನಂಬಲರ್ಹ ಹದೀಸ್ ವರದಿಗಳಿಲ್ಲ.

"ನಾನು ಪ್ರವಾದಿ(ಸ), ಅಬೂಬಕರ್(ರ), ಉಮರ್(ರ) ಮತ್ತು ಉಸ್ಮಾನ್‌ರವರ(ರ) ಜತೆ ಪ್ರಯಾಣಗಳಲ್ಲಿದ್ದೆ. ಆದರೆ ಅವರು ಎರಡು ರಕಅತ್‌ಗಳಿಗಿಂತ ಅಧಿಕ ನಮಾಝ್ ಮಾಡಿದುದನ್ನು ಎಂದೂ ಕಂಡಿಲ್ಲ." (ವರದಿ: ಹ. ಇಬ್ನು ಉಮರ್(ರ)- ಬುಖಾರಿ, ಮುಸ್ಲಿಮ್)

ಫಜ್ರ್ ಮತ್ತು ಮಗ್ರಿಬ್ ನಮಾಝ್‌ಗಳಲ್ಲಿ 'ಕಸ್ರ್' ಇಲ್ಲ ಎಂಬ ಬಗ್ಗೆ ಒಮ್ಮತಾಭಿಪ್ರಾಯವಿದೆ.

ಹನಫೀ ಕ್ರಮದಂತೆ ಪ್ರಯಾಣದಲ್ಲಿ ಕಸ್ರ್ ಕಡ್ಡಾಯವಾಗಿದೆ. ಆದರೆ ಶಾಫಿಈ ಕ್ರಮದಂತೆ ಅದು ಉತ್ತಮ.

### 2. ಪ್ರಯಾಣದ ದೂರ

ಎಷ್ಟು ದೂರದ ಪ್ರಯಾಣಕ್ಕೆ ಕಸ್ರ್ ಮಾಡಬಹುದೆಂಬುದೂ ಕುರ್‌ಆನ್‌ನಿಂದಾಗಲೀ ಯಾವುದೇ ಸಹೀಹ್ ಹದೀಸ್‌ನಿಂದಾಗಲೀ ಸ್ಪಷ್ಟವಾಗುವುದಿಲ್ಲ.

ಇಮಾಮ್ ಅಬೂ ಹನೀಫಾರ(ರ) ಪ್ರಕಾರ 54 ಮೈಲಿ (86½ ಕಿ.ಮೀ.) ಮತ್ತು ಇಮಾಮ್ ಶಾಫಿಈಯವರ(ರ) ಪ್ರಕಾರ 48 ಮೈಲಿ (77 ಕಿ.ಮೀ.)ಗಳ ಪ್ರಯಾಣಕ್ಕೆ ಕಸ್ರ್ ಮಾಡಬಹುದಾಗಿದೆ.

### 3. ಎಲ್ಲಿಂದ ಕಸ್ರ್ ಮಾಡಬೇಕು?

ಪ್ರವಾದಿ(ಸ) ಯಾವುದೇ ಪ್ರಯಾಣಕ್ಕಾಗಿ ಮದೀನಾ ನಗರದಿಂದ ಹೊರಟ ನಂತರವೇ ಕಸ್ರ್ ಮಾಡುತ್ತಿದ್ದರು.

"ನಾನು ಪ್ರವಾದಿವರ್ಯರ(ಸ) ಜತೆ ಮದೀನಾದಲ್ಲಿ ಝುಹರ್‌ನ ನಾಲ್ಕು ರಕಅತ್‌ಗಳನ್ನು ನಿರ್ವಹಿಸಿದೆ ಮತ್ತು ದುಲ್ ಹುಲೈಫಾಗೆ ತಲುಪಿ ಅಸರ್‌ನ ಎರಡು ರಕಅತ್‌ಗಳನ್ನು ನಿರ್ವಹಿಸಿದೆ. (ದುಲ್ ಹುಲೈಫಾ ಮದೀನಾದಿಂದ 6 ಮೈಲಿ ದೂರದಲ್ಲಿದೆ. ಪ್ರವಾದಿ(ಸ) ಮಕ್ಕಾಗೆ ಹೋಗುವ ದಾರಿಯಲ್ಲಿ ಅಲ್ಲಿಗೆ ತಲುಪಿದ್ದರು)

(ವರದಿ: ಹ. ಅನಸ್(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ)

### 4. ಕಸ್ರ್‌ನ ಅವಧಿ

ಈ ಬಗ್ಗೆ ಯಾವುದೇ ಹದೀಸ್‌ನಲ್ಲಿ ನಿರ್ದಿಷ್ಟವಾಗಿ ತಿಳಿಸಲಾಗಿಲ್ಲ. ಪ್ರವಾದಿ(ಸ) ಪ್ರಯಾಣದಲ್ಲಿರುವಷ್ಟು ಕಾಲ ಕಸ್ರ್ ಮಾಡುತ್ತಿದ್ದರೆಂದು ಮಾತ್ರ ಹದೀಸ್‌ಗಳಿಂದ ತಿಳಿದು

ಬರುತ್ತದೆ. ಈ ಬಗ್ಗೆ ಸಹಾಬಿಗಳಿಗೂ ಒಮ್ಮತಾಭಿಪ್ರಾಯವಿಲ್ಲ.

ಹನಫೀ ಕರ್ಮಶಾಸ್ತ್ರದಂತೆ ಒಬ್ಬನು ಒಂದೆಡೆ ಪ್ರಯಾಣ ಹೋಗಿ ಅಲ್ಲಿ 15 ದಿನ ಅಥವಾ ಅದಕ್ಕಿಂತ ಹೆಚ್ಚಿನ ಅವಧಿ ವಾಸ್ತವ್ಯ ಹೂಡುವುದಿದ್ದರೆ ಅವನು ಅಲ್ಲಿ ಪೂರ್ತಿ ನಮಾಝ್ ಮಾಡಬೇಕು. ಶಾಫಿಈ ಕರ್ಮಶಾಸ್ತ್ರದಂತೆ ಒಬ್ಬನು ಒಂದೆಡೆ ನಾಲ್ಕು ದಿನಗಳು ತಂಗುವ ನಿರ್ಧಾರ ಮಾಡಿದ್ದು ಅವನಿಗೆ 20ಕ್ಕಿಂತ ಹೆಚ್ಚು ನಮಾಝ್‌ಗಳನ್ನು ನಿರ್ವಹಿಸ ಬೇಕಾಗಿದ್ದರೆ ಅವನು ಅಲ್ಲಿ ಪೂರ್ತಿ ನಮಾಝ್ ಮಾಡಬೇಕು.

### 5. ಪ್ರಯಾಣದಲ್ಲಿ ಸುನ್ನತ್ ಮತ್ತು ನಫಿಲ್

ಪ್ರವಾದಿ(ಸ) ಯಾವುದೇ ಪ್ರಯಾಣದಲ್ಲಿ ಫರ್ಝ್ ನಮಾಝ್‌ಗಳ ಮೊದಲು ಅಥವಾ ನಂತರ ಸುನ್ನತ್ ಅಥವಾ ನಫಿಲ್ ನಮಾಝ್ ಮಾಡಿದ ಬಗ್ಗೆ ಯಾವುದೇ ನಂಬಲರ್ಹ ಹದೀಸ್‌ನಲ್ಲಿ ವರದಿಯಾಗಿಲ್ಲ. ಆದರೆ ಪ್ರವಾದಿ(ಸ) ರಾತ್ರಿಯ ವಿತ್ರ್ ಮತ್ತು ಫಜ್ರ್‌ನ ಎರಡು ರಕಅತ್ ಸುನ್ನತನ್ನು ಎಲ್ಲ ಪ್ರಯಾಣದಲ್ಲೂ ನಿರ್ವಹಿಸುತ್ತಿದ್ದರು. ಅವುಗಳನ್ನು ಎಂದೂ ತೊರೆದಿರಲಿಲ್ಲ. (ಝಾದುಲ್ ಮಆದ್)

### 6. ಪ್ರಯಾಣಿಕನು ಜಮಾಅತ್‌ನಲ್ಲಿ ಶಾಮೀಲಾಗುವುದು

ಪ್ರಯಾಣಿಕನು ಜಮಾಅತ್‌ನಲ್ಲಿ ಶಾಮೀಲಾದರೆ ಪೂರ್ತಿ ನಮಾಝ್ ಮಾಡಬೇಕು. ಜಮಾಅತ್‌ನ ಜತೆ ನಮಾಝ್‌ನ ಎಷ್ಟಂಶ ಸಿಕ್ಕಿದರೂ ಸರಿಯೇ.

"ಹ.ಇಬ್ನು ಅಬ್ಬಾಸ್‌ರವರಲ್ಲಿ(ರ) ಹೀಗೆ ಪ್ರಶ್ನಿಸಲಾಯಿತು- ಪ್ರಯಾಣಿಕನು ಒಬ್ಬಂಟಿ ಯಾಗಿ ನಮಾಝ್ ಮಾಡುವಾಗ ಎರಡೇ ರಕಅತ್‌ಗಳನ್ನು ನಿರ್ವಹಿಸುತ್ತಾನೆ. ಅವನು ಮುಕೀಮ್(ಪ್ರಯಾಣದಲ್ಲಿಲ್ಲದವನು)ನ ಹಿಂದೆ ನಮಾಝ್ ಮಾಡುವಾಗ ನಾಲ್ಕು ರಕಅತ್ ಪೂರ್ತಿ ನಮಾಝ್ ಮಾಡುತ್ತಾನೆ. ಇದು ಏಕೆ? ಅವರು ಹೇಳಿದರು- 'ಇದು ಸುನ್ನತ್ ಆಗಿದೆ.' ಇನ್ನೊಂದು ವರದಿಯಲ್ಲಿ ಇದು ಅಬುಲ್ ಕಾಸಿಮ್(ಸ) ಅವರ ಸುನ್ನತ್ ಆಗಿದೆ."

(ಮುಸ್ನದ್ ಅಹ್ಮದ್)

## ಎರಡು ನಮಾಝ್‌ಗಳನ್ನು ಒಟ್ಟಿಗೆ ನಿರ್ವಹಿಸುವುದು

ಈ ಕೆಳಗಿನ ಸಂದರ್ಭಗಳಲ್ಲಿ ಝುಹರ್ ಮತ್ತು ಅಸರ್ ಹಾಗೂ ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಒಟ್ಟಿಗೆ ನಿರ್ವಹಿಸಬಹುದಾಗಿದೆ-

### 1. ಅರಫಾತ್ ಮತ್ತು ಮುಝ್ದಲಿಫಾದಲ್ಲಿ

ವಿದಾಯ ಹಜ್ಜ್‌ನ ವೇಳೆ ಪ್ರವಾದಿ(ಸ) ಅರಫಾತ್‌ನಲ್ಲಿ ಝುಹರ್ ಮತ್ತು ಅಸರ್ ನಮಾಝ್‌ಗಳನ್ನು ಝುಹರ್‌ನ ಸಮಯದಲ್ಲಿ ಹಾಗೂ ಮುಝ್ದಲಿಫಾದಲ್ಲಿ ಮಗ್ರಿಬ್ ಮತ್ತು

ಇಶಾ ನಮಾಝ್‌ಗಳನ್ನು ಇಶಾನ ಸಮಯದಲ್ಲಿ ಒಟ್ಟಿಗೆ ನಿರ್ವಹಿಸಿದ್ದರು. ಆದ್ದರಿಂದ ಇದು ಸುನ್ನತ್ ಆಗಿದೆ ಎಂಬುದು ಸರ್ವಸಮ್ಮತ ವಿಷಯ.

**2.** ಪ್ರಯಾಣದಲ್ಲಿ

ಪ್ರಯಾಣದಲ್ಲಿರುವಾಗ ಅಥವಾ ಎಲ್ಲಿಗಾದರೂ ಪ್ರಯಾಣ ಹೋಗಿ ತಂಗಿದಾಗ ಝುಹರ್ ಮತ್ತು ಅಸರ್ ಹಾಗೂ ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಒಟ್ಟಿಗೆ ನಿರ್ವಹಿಸಬಹುದಾಗಿದೆ.

ಹ. ಇಬ್ನು ಅಬ್ಬಾಸ್(ರ) ಈ ರೀತಿ ಹೇಳಿರುವರು- "ನಾನು ಜನರಿಗೆ ಹೇಳಿದೆ: 'ನಾನು ನಿಮಗೆ ಪ್ರವಾದಿವರ್ಯರ(ಸ) ನಮಾಝ್‌ನ ಕುರಿತು ತಿಳಿಸಲೇ?' ಜನರು ಹೇಳಿದರು: 'ಖಂಡಿತ ತಿಳಿಸಿ.' ನಾನು ಹೇಳಿದೆ- ಪ್ರವಾದಿವರ್ಯರು(ಸ) ಮನೆಯಿಂದ ಹೊರಡುವಾಗಲೇ ಸೂರ್ಯ ಇಳಿ ಮುಖವಾದರೆ ಅವರು ಪ್ರಯಾಣ ಹೊರಡುವುದಕ್ಕೆ ಮುಂಚೆ ಝುಹರ್ ಮತ್ತು ಅಸರ್ ನಮಾಝ್‌ಗಳನ್ನು ಒಟ್ಟಿಗೆ ನಿರ್ವಹಿಸುತ್ತಿದ್ದರು. ಮನೆಯಲ್ಲಿ ಸೂರ್ಯ ಇಳಿಮುಖವಾಗದಿದ್ದರೆ ಪ್ರವಾದಿ(ಸ) ಹೊರಡುತ್ತಿದ್ದರು. ಅಸರ್‌ನ ಸಮಯವಾದಾಗ ಇಳಿದು ಝುಹರ್ ಮತ್ತು ಅಸರ್ ಜತೆಯಾಗಿ ನಿರ್ವಹಿಸುತ್ತಿದ್ದರು. ಅದೇ ರೀತಿ ಮನೆಯಿಂದ ಹೊರಡುವಾಗಲೇ ಸೂರ್ಯ ಮುಳುಗಿದ್ದರೆ ಪ್ರವಾದಿ(ಸ) ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಒಟ್ಟಿಗೆ ನಿರ್ವಹಿಸುತ್ತಿದ್ದರು. ಮನೆಯಿಂದ ಹೊರಡುವಾಗ ಸೂರ್ಯ ಮುಳುಗಿರದಿದ್ದರೆ ಪ್ರವಾದಿ(ಸ) ಹೊರಡುತ್ತಿದ್ದರು. ಇಶಾದ ಸಮಯವಾದಾಗ ಇಳಿದು ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಜತೆಯಾಗಿ ನಿರ್ವಹಿಸುತ್ತಿದ್ದರು.

(ಮುಸ್ನದ್ ಅಹ್ಮದ್, ಶಾಫಿಈ)

ಎರಡು ನಮಾಝ್‌ಗಳನ್ನು ಜತೆಯಾಗಿ ನಿರ್ವಹಿಸುವಾಗ ಒಂದು ಅದಾನ್ ಮತ್ತು ಎರಡು ಇಕಾಮತ್‌ಗಳನ್ನು ಹೇಳುವುದು ಮತ್ತು ಅವೆರಡರ ಮಧ್ಯೆ ಸುನ್ನತ್ ನಮಾಝ್ ನಿರ್ವಹಿಸದಿರುವುದು ಸುನ್ನತ್ ಆಗಿದೆ.

ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಎರಡು ನಮಾಝ್‌ಗಳನ್ನು ಒಟ್ಟಿಗೆ ನಿರ್ವಹಿಸುವ ಅನುಮತಿ ಕೇವಲ ಹಜ್ಜ್‌ನ ವೇಳೆ ಅರಫಾತ್ ಮತ್ತು ಮುಝ್ದಲಿಫಾಗಳಲ್ಲಿದೆ. ಇತರ ಪ್ರಯಾಣಗಳಲ್ಲಿ ಎರಡು ನಮಾಝ್‌ಗಳನ್ನು ಜತೆಯಾಗಿ ನಿರ್ವಹಿಸಬೇಕಾದರೆ ಮೊದಲನೆಯ ನಮಾಝ್‌ನ ಅಂತಿಮ ವೇಳೆ ಮತ್ತು ಎರಡನೆಯ ನಮಾಝ್‌ನ ಆರಂಭದ ವೇಳೆ ಮಾತ್ರ ಅವುಗಳನ್ನು ಜತೆಯಾಗಿ ನಿರ್ವಹಿಸಬಹುದು.

ಇಮಾಮ್ ಶಾಫಿಈಯವರ(ರ) ಪ್ರಕಾರ ಎರಡು ನಮಾಝ್‌ಗಳನ್ನು ಜತೆಯಾಗಿ ನಿರ್ವಹಿಸುವ ಅನುಮತಿಯಿದೆ. ಆದರೆ ಪ್ರತಿಯೊಂದು ನಮಾಝನ್ನು ಅದರ ಸಮಯದಲ್ಲೇ ನಿರ್ವಹಿಸುವುದು ಉತ್ತಮವಾಗಿದೆ.

# ರೋಗಿಯ ನಮಾಝ್

ಒಬ್ಬ ವ್ಯಕ್ತಿ ರೋಗಿಯಾಗಿದ್ದರೆ ಅಥವಾ ಆತನಿಗೆ ನಿಂತುಕೊಂಡು ನಮಾಝ್ ಮಾಡಲು ಸಾಧ್ಯವಾಗದಂತಹ ಕಾರಣವೇನಾದರೂ ಇದ್ದರೆ ಆತನು ಕುಳಿತುಕೊಂಡು ನಮಾಝ್ ಮಾಡಬಹುದಾಗಿದೆ. ಕುಳಿತುಕೊಂಡು ಕೂಡಾ ನಮಾಝ್ ಮಾಡಲು ಸಾಧ್ಯವಿಲ್ಲದಿದ್ದರೆ ಆತ ಕಿಬ್ಲಾಭಿಮುಖವಾಗಿ ಮಲಗಿಕೊಂಡು ನಮಾಝ್ ಮಾಡಬಹುದು ಹಾಗೂ ರುಕೂಅ್ ಮತ್ತು ಸುಜೂದ್‌ಗಳನ್ನು ಸಂಕೇತದಿಂದ ಮಾಡಬಹುದು. ಅಲ್ಲಾಹನು ಈ ರೀತಿ ಆದೇಶಿಸಿರುವನು:

**"ಅವರು ಎದ್ದಾಗಲೂ ಕುಳಿತಾಗಲೂ ಮಲಗಿದಾಗಲೂ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಾರೆ "** **(ಪವಿತ್ರ ಕುರ್‌ಆನ್, 3:191)**

"ನನಗೆ ಮೂಲವ್ಯಾಧಿಯಾಗಿತ್ತು. ನಾನು ಹೇಗೆ ನಮಾಝ್ ಮಾಡಬೇಕೆಂದು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದೆ. ಆಗ ಅವರು ಹೇಳಿದರು: ನಿಂತುಕೊಂಡು ನಮಾಝ್ ಮಾಡಿರಿ. ಅದು ನಿಮ್ಮಿಂದ ಸಾಧ್ಯವಾಗದಿದ್ದರೆ ಕುಳಿತುಕೊಂಡು ನಮಾಝ್ ಮಾಡಿರಿ. ಅದೂ ನಿಮ್ಮಿಂದ ಸಾಧ್ಯವಾಗದಿದ್ದರೆ ನಿಮ್ಮ ಬಲಭಾಗಕ್ಕೆ ಒರಗಿಕೊಂಡು ನಮಾಝ್ ಮಾಡಿರಿ."

**(ವರದಿ: ಹ. ಇಮ್ರಾನ್ ಬಿನ್ ಹುಸೈನ್(ರ)- ಬುಖಾರಿ, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)**

ನಸಾಈಯಲ್ಲಿ ಈ ಪದಗಳು ಹೆಚ್ಚಿವೆ: "ಅದೂ ನಿಮ್ಮಿಂದ ಸಾಧ್ಯವಾಗದಿದ್ದರೆ ನೇರವಾಗಿ ಮಲಗಿ ನಮಾಝ್ ಮಾಡಿರಿ. ಅಲ್ಲಾಹನು ಯಾವ ಜೀವದ ಮೇಲೂ ಅದರ ಶಕ್ತಿಗಿಂತ ಅಧಿಕ ಹೊರೆ ಹೊರಿಸುವುದಿಲ್ಲ."

ಪ್ರವಾದಿ(ಸ) ಈ ರೀತಿ ಹೇಳಿರುವರು: "ರೋಗಿಯು ಅವನಿಗೆ ಸಾಧ್ಯವಿದ್ದರೆ ನಿಂತುಕೊಂಡು ನಮಾಝ್ ಮಾಡಬೇಕು. ಅದು ಅವನಿಂದ ಸಾಧ್ಯವಾಗದಿದ್ದರೆ ಕುಳಿತುಕೊಂಡು ನಮಾಝ್ ಮಾಡಬೇಕು. ಅವನಿಗೆ ಸುಜೂದ್ ಮಾಡಲು ಸಾಧ್ಯವಾಗದಿದ್ದರೆ ತನ್ನ ತಲೆಯಿಂದ ಸಂಕೇತ ಮಾಡಬೇಕು. ತನ್ನ ಸುಜೂದ್‌ನಲ್ಲಿ ತಲೆಯನ್ನು ರುಕೂಅ್‌ಗಿಂತ ಕೆಳಗೆ ಮಾಡಬೇಕು. ಅವನಿಗೆ ಕುಳಿತುಕೊಂಡೂ ನಮಾಝ್ ಮಾಡಲಾಗದಿದ್ದರೆ ಕಿಬ್ಲಾಭಿಮುಖವಾಗಿ ಬಲಭಾಗಕ್ಕೆ ಒರಗಿಕೊಂಡು ನಮಾಝ್ ಮಾಡಬೇಕು. ಬಲಭಾಗಕ್ಕೆ ಒರಗಿಕೊಂಡು ನಮಾಝ್ ಮಾಡಲು ಸಾಧ್ಯವಾಗದಿದ್ದರೆ ನೇರವಾಗಿ ಮಲಗಿ ಕೊಂಡು ಕಾಲುಗಳನ್ನು ಕಿಬ್ಲಾದ ಕಡೆಗೆ ಚಾಚಿಕೊಂಡು ನಮಾಝ್ ಮಾಡಬೇಕು." **(ವರದಿ: ಹ. ಅಲೀ(ರ)- ದಾರಕುತ್ನಿ)**

# ವಾಹನದಲ್ಲಿ ನಮಾಝ್

ವಾಹನ ಅಥವಾ ಹಡಗಿನಲ್ಲಿ ನಿಂತುಕೊಂಡು ನಮಾಝ್ ಮಾಡುವುದು ಸಾಧ್ಯ ವಾಗದಿದ್ದರೆ ಕುಳಿತುಕೊಂಡು ನಮಾಝ್ ಮಾಡಬಹುದಾಗಿದೆ.

"ಹಡಗಿನಲ್ಲಿ ಹೇಗೆ ನಮಾಝ್ ಮಾಡಬೇಕೆಂದು ಒಬ್ಬನು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದನು. ಆಗ ಪ್ರವಾದಿ(ಸ) ಹೇಳಿದರು- ನಿಮಗೆ ಮುಳುಗಿ ಹೋಗುವ ಭಯವಿಲ್ಲದಿದ್ದರೆ ನಿಂತುಕೊಂಡೇ ನಮಾಝ್ ಮಾಡಿರಿ." (ವರದಿ: ಹ. ಇಬ್ನು ಉಮರ್(ರ)- ದಾರಕುತ್ನಿ, ಹಾಕಿಮ್)

## ಸೂರ್ಯಗ್ರಹಣದ ನಮಾಝ್

ಸೂರ್ಯಗ್ರಹಣದ ನಮಾಝ್ ಸ್ತ್ರೀ-ಪುರುಷರಿಬ್ಬರಿಗೂ ಸುನ್ನತ್ ಆಗಿದೆ. ಇದಕ್ಕೆ ಜಮಾಅತ್ ಬೇಕೆಂದಿಲ್ಲ. ಆದರೆ ಇದನ್ನು ಜಮಾಅತ್ ಸಹಿತ ನಿರ್ವಹಿಸುವುದು ಉತ್ತಮ ವಾಗಿದೆ.

ಹನಫೀ ಕರ್ಮಶಾಸ್ತ್ರದಂತೆ ಜುಮಾ ನಮಾಝ್‌ನ ನೇತೃತ್ವ ವಹಿಸುವವನೇ ಈ ನಮಾಝ್‌ನ ಇಮಾಮ್ ಆಗಬೇಕು. ಒಂದು ವೇಳೆ ಆತನಿಲ್ಲದಿದ್ದರೆ ಖಲೀಫಾರ ಅನುಮತಿಯ ಮೇರೆಗೆ ಬೇರೆಯವರು ನಮಾಝ್‌ನ ನೇತೃತ್ವ ವಹಿಸಬಹುದು. ಅನ್ಯಥಾ ಜನರು ಬೇರೆಬೇರೆಯಾಗಿಯೇ ನಿರ್ವಹಿಸಬೇಕು.

ಸೂರ್ಯಗ್ರಹಣದ ನಮಾಝ್‌ಗೆ ಅದಾನ್ ಆಗಲಿ, ಇಕಾಮತ್ ಆಗಲಿ ಇಲ್ಲ. "ಅಸ್ಸಲಾತುಲ್ ಜಾಮಿಅ" ಎಂದು ಕೂಗಿ ಕರೆದು ಜನರನ್ನು ಸೇರಿಸಬೇಕು.

"ಪ್ರವಾದಿಯವರ(ಸ) ಕಾಲದಲ್ಲಿ ಸೂರ್ಯಗ್ರಹಣವಾದಾಗ ಪ್ರವಾದಿ(ಸ) ಒಬ್ಬರನ್ನು ಕಳುಹಿಸಿ 'ಅಸ್ಸಲಾತುಲ್ ಜಾಮಿಅ' ಎಂದು ಜನರನ್ನು ಮಸೀದಿಯತ್ತ ಕರೆ ತರಬೇಕೆಂದು ಹೇಳಿದರು." (ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

ಸೂರ್ಯಗ್ರಹಣದ ನಮಾಝ್‌ಗೆ ಎರಡು ರಕಅತ್‌ಗಳಿವೆ. ಪ್ರತಿ ರಕಅತ್‌ನಲ್ಲಿ ಎರಡೆರಡು ರುಕೂಅ್ ಮತ್ತು ಎರಡೆರಡು ಕಿಯಾಮ್‌ಗಳಿವೆ. ಇದು ಅನೇಕ ಹದೀಸ್‌ಗಳಿಂದ ತಿಳಿದು ಬರುವ ಕ್ರಮವಾಗಿದೆ. ಇಮಾಮ್ ಶಾಫಿಈ(ರ) ಇದನ್ನೇ ಅಳವಡಿಸಿದ್ದಾರೆ. ಆದರೆ ಇಮಾಮ್ ಅಬೂ ಹನೀಫಾರವರ(ರ) ಪ್ರಕಾರ ಸೂರ್ಯಗ್ರಹಣದ ನಮಾಝನ್ನು ನಾಲ್ಕು ರಕಅತ್ ಒಂದೇ ಸಲಾಮ್‌ನೊಂದಿಗೆ ನಿರ್ವಹಿಸುವುದು ಉತ್ತಮವಾಗಿದೆ.

"ಪ್ರವಾದಿಯವರ(ಸ) ಕಾಲದಲ್ಲಿ ಸೂರ್ಯಗ್ರಹಣವಾದಾಗ ಪ್ರವಾದಿ(ಸ) ಮಸೀದಿಯ ಕಡೆಗೆ ಹೋದರು. 'ಅಲ್ಲಾಹು ಅಕ್ಬರ್' ಹೇಳುತ್ತಾ ನಮಾಝ್ ಆರಂಭಿಸಿದರು. ಜನರು ಅವರ ಹಿಂದೆ ಸಾಲಾಗಿ ನಿಂತು ನಮಾಝ್ ಮಾಡಿದರು. ಪ್ರವಾದಿ(ಸ) ದೀರ್ಘ ಕಿರಾಅತ್ ಮಾಡಿದರು. ನಂತರ 'ಅಲ್ಲಾಹು ಅಕ್ಬರ್' ಎನ್ನುತ್ತಾ ದೀರ್ಘ ರುಕೂಅ್ ಮಾಡಿದರು. ಅದು ಪ್ರಥಮ ಕಿರಾಅತ್‌ಗಿಂತ ಕಡಿಮೆಯಿತ್ತು. ಅನಂತರ ಪ್ರವಾದಿ(ಸ) ತಲೆ ಎತ್ತಿದರು ಹಾಗೂ ಸಮಿಅಲ್ಲಾಹು ಲಿಮನ್ ಹಮಿದಃ, ರಬ್ಬನಾ ಲಕಲ್‌ಹಮ್ದ್ ಎನ್ನುತ್ತಾ ನಿಂತರು. ನಂತರ ಅವರು ದ್ವಿತೀಯ ಸಲ ದೀರ್ಘ ಕಿರಾಅತ್ ಮಾಡಿದರು. ಅದು ಪ್ರಥಮ ಕಿರಾಅತ್‌ಗಿಂತ ಕಡಿಮೆಯಿತ್ತು. ಬಳಿಕ ಅವರು 'ಅಲ್ಲಾಹು ಅಕ್ಬರ್' ಎನ್ನುತ್ತಾ ರುಕೂಅ್ ಮಾಡಿದರು. ಅದು

ಪ್ರಥಮ ರುಕೂಅ್‌ಗಿಂತ ಕಡಿಮೆಯಿತ್ತು. ತರುವಾಯ ಅವರು 'ಸಮಿಅಲ್ಲಾಹು ಲಿಮನ್ ಹಮಿದಃ , ರಬ್ಬನಾ ಲಕಲ್ ಹಮ್ದ್' ಎಂದು ಹೇಳಿದರು ಅನಂತರ ಸುಜೂದ್ ಮಾಡಿದರು. ಬಳಿಕ ಎರಡನೆಯ ರಕಅತ್‌ನಲ್ಲೂ ಹೀಗೆಯೇ ಮಾಡಿದರು. ಈ ರೀತಿ ಅವರು ನಾಲ್ಕು ರುಕೂಅ್ ಮತ್ತು ನಾಲ್ಕು ಸುಜೂದ್‌ಗಳನ್ನು ಪೂರ್ತಿಗೊಳಿಸಿದರು. ನಮಾಝ್ ಮುಗಿಯುವುದಕ್ಕಿಂತ ಮುಂಚೆ ಗ್ರಹಣವು ಮುಗಿದಿತ್ತು. ಅನಂತರ ಅವರು ಜನರಿಗೆ ಖುತ್‌ಬಾ(ಪ್ರವಚನ) ನೀಡಿದರು. ಅಲ್ಲಾಹನ ಸ್ತುತಿಸ್ತೋತ್ರಗಳನ್ನು ಪಠಿಸಿದ ಬಳಿಕ ಹೀಗೆಂದರು-ಸೂರ್ಯ ಮತ್ತು ಚಂದ್ರರು ಅಲ್ಲಾಹನ ಕುರುಹುಗಳ ಪೈಕಿ ಎರಡು ಕುರುಹುಗಳಾಗಿವೆ. ಯಾರದೇ ಜನನ ಅಥವಾ ಮರಣದಿಂದ ಅವುಗಳಿಗೆ ಗ್ರಹಣ ಹಿಡಿಯುವುದಿಲ್ಲ. ಅವುಗಳಿಗೆ ಗ್ರಹಣ ಹಿಡಿದಿರುವುದನ್ನು ನೀವು ಕಂಡಾಗ ಅಲ್ಲಾಹನನ್ನು ಭಯಪಡುತ್ತಾ ನಮಾಝ್‌ನ ಕಡೆಗೆ ಧಾವಿಸಿರಿ."

(ವರದಿ: ಹ. ಆಯಿಶಾ(ರ)- ಬುಖಾರಿ, ಮುಸ್ಲಿಮ್)

ಸೂರಃ ಫಾತಿಹಾ ಪ್ರತಿಯೊಂದು ಕಿರಾಅತ್‌ನಲ್ಲೂ ಕಡ್ಡಾಯವಾಗಿದೆ

ಸೂರ್ಯ ಗ್ರಹಣದ ನಮಾಝ್‌ನ ಸಮಯವು ಗ್ರಹಣ ಹಿಡಿದು ಅದು ಬಿಡುವ ತನಕ ಇರುತ್ತದೆ. ಅದರಲ್ಲಿ ಕಿರಾಅತ್ ಜೋರಾಗಿಯೂ ರಹಸ್ಯವಾಗಿಯೂ ಪಠಿಸಬಹುದಾಗಿದೆ. ಆದರೆ ಹನಫೀ ಮತ್ತು ಶಾಫಿಈ ಕ್ರಮದಂತೆ ಕಿರಾಅತ್ ರಹಸ್ಯವಾಗಿ ಪಠಿಸುವುದು ಉತ್ತಮವಾಗಿದೆ.

ನಮಾಝ್ ಮುಗಿದ ಬಳಿಕ ಖುತ್‌ಬಾ(ಪ್ರವಚನ) ನೀಡುವುದು ಉತ್ತಮವಾಗಿದೆ. ಇಮಾಮ್ ಶಾಫಿಈಯವರ ಪ್ರಕಾರ ಖುತ್‌ಬಾ(ಪ್ರವಚನ) ನೀಡುವುದು ಸೂರ್ಯಗ್ರಹಣ ನಮಾಝ್‌ನ ನಿಬಂಧನೆಗಳಲ್ಲೊಂದಾಗಿದೆ. ಆದರೆ ಹನಫೀ ಕ್ರಮದಂತೆ ಖುತ್‌ಬಾ ನೀಡಬೇಕಾಗಿಲ್ಲ.

ಚಂದ್ರಗ್ರಹಣದ ವೇಳೆಯೂ ಸೂರ್ಯಗ್ರಹಣದಂತೆ ನಮಾಝ್ ಮಾಡಬೇಕಾಗಿದೆ.

## ಇಸ್ತಿಖಾರದ ನಮಾಝ್

ಒಬ್ಬನು ಯಾವುದಾದರೂ ಒಂದು ಧರ್ಮಸಮ್ಮತ ಕಾರ್ಯ ಮಾಡಬಯಸಿದಾಗ ಅದನ್ನು ಮಾಡಬೇಕೋ ಬೇಡವೋ ಎಂಬ ದ್ವಂದ್ವಕ್ಕೆ ಒಳಗಾಗುತ್ತಾನೆ. ಅಂಥವನು ಫರ್ಝ್ ನಮಾಝ್‌ಗಳ ಹೊರತು ರಾತ್ರಿ ಅಥವಾ ಹಗಲಿನ ಯಾವುದೇ ಸಮಯದಲ್ಲಿ ಎರಡು ರಕಅತ್ ನಮಾಝ್ ಮಾಡಬೇಕು. ಅದು ಫರ್ಝ್ ನಮಾಝ್‌ಗಳ ಜತೆಗಿರುವ ಸುನ್ನತ್ ನಮಾಝ್ ಅಥವಾ ತಹಿಯ್ಯತುಲ್ ಮಸ್ಜಿದ್‌ನ ಸುನ್ನತ್ ನಮಾಝ್ ಕೂಡಾ ಆಗಬಹುದು. ಅನಂತರ ಅಲ್ಲಾಹನ ಸ್ತುತಿ-ಸ್ತೋತ್ರ ಮತ್ತು ಪ್ರವಾದಿವರ್ಯರ(ಸ) ಮೇಲೆ ಸಲಾತ್ ಹೇಳಿದ ಬಳಿಕ ಈ ದುಆ ಪಠಿಸಬೇಕು.

ಪ್ರವಾದಿವರ್ಯರು(ಸ) ನಮಗೆ ಎಲ್ಲ ಕೆಲಸಗಳಲ್ಲಿ (ಅದು ಸಾಮಾನ್ಯವಾಗಿದ್ದರೂ-ವಿಶೇಷವಾಗಿದ್ದರೂ) ಇಸ್ತಿಖಾರದ ದುಆವನ್ನು ಪವಿತ್ರ ಕುರ್‌ಆನಿನ ಆಯತನ್ನು ಕಲಿಸುವಂತೆ ಕಲಿಸುತ್ತಿದ್ದರು. ಅವರು ಹೀಗೆ ಹೇಳುತ್ತಿದ್ದರು- ನಿಮ್ಮ ಪೈಕಿ ಒಬ್ಬ ವ್ಯಕ್ತಿಗೆ ಯಾವುದಾದರೂ

ಸಮಸ್ಯೆ ಎದುರಾದರೆ ಅವನು ಫರ್ಝ್ ನಮಾಝ್‌ಗಳ ಹೊರತು ಎರಡು ರಕಅತ್ ನಮಾಝ್ ಮಾಡಬೇಕು ಮತ್ತು ಈ ದುಆ ಪಠಿಸಬೇಕು:

اَللّٰهُمَّ اِنِّىٓ اَسْتَخِيرُكَ بِعِلْمِكَ وَاَسْتَقْدِرُكَ بِقُدْرَتِكَ وَ اَسْأَلُكَ مِنْ فَضْلِكَ الْعَظِيمِ، فَاِنَّكَ تَقْدِرُ وَلَآ اَقْدِرُ وَتَعْلَمُ وَلَآ اَعْلَمُ وَاَنْتَ عَلَّامُ الْغُيُوبِ۔ اَللّٰهُمَّ اِنْ كُنْتَ تَعْلَمُ اَنَّ هٰذَاالْاَمْرَ خَيْرٌ لِّى فِى دِينِى وَمَعَاشِى وَعَاقِبَةِ اَمْرِى، فَاقْدِرْهُ لِى وَيَسِّرْهُ لِى ثُمَّ بَارِكْ لِى فِيهِ، وَاِنْ كُنْتَ تَعْلَمُ اَنَّ هٰذَاالْاَمْرَ شَرٌّ لِّى فِى دِينِى وَمَعَاشِى وَعَاقِبَةِ اَمْرِى، فَاصْرِفْهُ عَنِّى وَاصْرِفْنِى عَنْهُ وَاقْدِرْلِىَ الْخَيْرَ حَيْثُ كَانَ ثُمَّ اَرْضِنِى بِهِ۔

"ಅಲ್ಲಾಹುಮ್ಮ ಇನ್ನೀ ಅಸ್ತಖೀರುಕ ಬಿ ಇಲ್ಮಿಕ ವ ಅಸ್ತಕ್‌ದಿರುಕ ಬಿ ಕುದ್‌ರತಿಕ ವ ಅಸ್‌ಅಲುಕ ಮಿನ್ ಫದ್‌ಲಿಕಲ್ ಅಝೀಮ್. ಫ ಇನ್ನಕ ತಕ್‌ದಿರು ವಲಾ ಅಕ್‌ದಿರು ವತಲ್‌ಲಮು ವಲಾ ಅಲ್‌ಲಮು ವ ಅಂತ ಅಲ್ಲಾಮುಲ್ ಗುಯೂಬ್. ಅಲ್ಲಾಹುಮ್ಮ ಇನ್ ಕುಂತ ತಲ್‌ಲಮು ಅನ್ನ ಹಾದಲ್ ಅಮ್ರ ಖೈರುಲ್ಲೀ ಫೀ ದೀನೀ ವ ಮಆಷೀ ವ ಆಕಿಬತಿ ಅಮ್ರಿ. ಫಕ್‌ದಿರ್‌ಹು ಲೀ ವಯಸ್ಸಿರ್‌ಹು ಲೀ ಸುಮ್ಮ ಬಾರಿಕ್ ಲೀ ಫೀಹಿ. ವಇನ್ ಕುಂತ ತಲ್‌ಲಮು ಅನ್ನ ಹಾದಲ್ ಅಮ್ರ ಶರ್ರುಲ್ಲೀ ಫೀ ದೀನೀ ವ ಮಆಷೀ ವ ಆಕಿಬತಿ ಅಮ್ರಿ. ಫಸ್ರಿಫ್‌ಹು ಅನ್ನೀ ವಸ್ರಿಫ್ನೀ ಅನ್‌ಹು ವಕ್‌ದಿರ್ ಲಿಯಲ್ ಖೈರ ಹೈಸು ಕಾನ ಸುಮ್ಮ ಅರ್‌ದಿನೀ ಬಿಹೀ."

ಅರ್ಥ: ಓ ಅಲ್ಲಾಹ್, ನಾನು ನಿನ್ನ ಜ್ಞಾನದ ಮೂಲಕ ನಿನ್ನಿಂದ ಒಳಿತನ್ನು ಬೇಡುತ್ತೇನೆ. ನಿನ್ನ ಸಾಮರ್ಥ್ಯದ ಮೂಲಕ ಸಾಮರ್ಥ್ಯವನ್ನು ಬೇಡುತ್ತೇನೆ. ನಾನು ನಿನ್ನಿಂದ ನಿನ್ನ ಮಹಾನ್ ಅನುಗ್ರಹವನ್ನು ಬೇಡುತ್ತೇನೆ. ಏಕೆಂದರೆ ನೀನು ಸಾಮರ್ಥ್ಯ ಉಳ್ಳವನು. ನಾನು ಸಾಮರ್ಥ್ಯ ಉಳ್ಳವನಲ್ಲ, ನೀನು ತಿಳಿದವನು, ನಾನು ತಿಳಿದವನಲ್ಲ. ನೀನೇ ಪರೋಕ್ಷ ಕಾರ್ಯಗಳನ್ನು ತಿಳಿದವನಾಗಿರುತ್ತಿ. ಓ ಅಲ್ಲಾಹ್! ನಿನ್ನ ಜ್ಞಾನದ ಪ್ರಕಾರ ಈ ಕಾರ್ಯವು ನನ್ನ ಪಾಲಿಗೆ ನನ್ನ ಧರ್ಮ, ನನ್ನ ಅರ್ಥ ಮತ್ತು ನನ್ನ ಪರಿಣಾಮದ ದೃಷ್ಟಿಯಿಂದ ಒಳಿತಾಗಿದ್ದರೆ ಇದನ್ನು ನನ್ನ ಪಾಲಿಗೆ ವಿಧಿಸು. ಅದನ್ನು ನನಗೆ ಸುಲಭಗೊಳಿಸು. ಅದರಲ್ಲಿ ನನಗೆ ಸಮೃದ್ಧಿಯನ್ನು ದಯಪಾಲಿಸು. ಒಂದು ವೇಳೆ ನಿನ್ನ ಜ್ಞಾನದ ಪ್ರಕಾರ ಈ ಕಾರ್ಯವು ನನ್ನ ಪಾಲಿಗೆ ನನ್ನ ಧರ್ಮ, ನನ್ನ ಅರ್ಥ ಮತ್ತು ನನ್ನ ಪರಿಣಾಮದ ದೃಷ್ಟಿಯಿಂದ ಕೆಟ್ಟದ್ದಾಗಿದ್ದರೆ ಅದನ್ನು ನನ್ನಿಂದ ಮತ್ತು ನನ್ನನ್ನು ಅದರಿಂದ ದೂರ ಸರಿಸು. ನನ್ನ ಪಾಲಿಗೆ ಎಲ್ಲಿ ಒಳಿತಿದ್ದರೂ

ಅದನ್ನು ನನಗೆ ವಿಧಿಸು ಮತ್ತು ಅದರಲ್ಲಿ ನನಗೆ ಸಂತೃಪ್ತಿಯನ್ನು ದಯಪಾಲಿಸು. 'ಹಾದಲ್ ಅಮ್ರ್' ಎನ್ನುವಾಗ ಅವನು ತನ್ನ ಬೇಡಿಕೆಯ ಹೆಸರೆತ್ತಬೇಕು.

(ವರದಿ: ಹ. ಜಾಬಿರ್(ರ)- ಬುಖಾರಿ, ಅಬೂ ದಾವೂದ್, ತಿರ್ಮಿದಿ, ಅಹ್ಮದ್, ನಸಾಈ, ಇಬ್ನು ಮಾಜ:)

ಇಸ್ತಿಖಾರದ ನಮಾಝ್‌ನಲ್ಲಿ ಯಾವುದೇ ಸೂರಃವನ್ನು ಪಠಿಸಬಹುದಾಗಿದೆ. ಹನಫೀ ಕ್ರಮದಂತೆ ಸೂರಃ 'ಕಾಫಿರೂನ್' ಮತ್ತು 'ಕುಲ್‌ಹುವಲ್ಲಾಹ್' ಪಠಿಸುವುದು ಉತ್ತಮವಾಗಿದೆ.

ಇಮಾಮ್ ನವವೀಯವರು(ರ) ಹೀಗೆ ಹೇಳಿರುವರು: ಇಸ್ತಿಖಾರ ಮಾಡಿದ ಬಳಿಕ ತನ್ನ ಕಾರ್ಯದ ಬಗ್ಗೆ ಯಾವ ಕಡೆಗೆ ಮನ ಒಲಿಯುತ್ತದೋ ಆ ರೀತಿ ಮಾಡಬೇಕು. ಮೊದಲೇ ಮನಸ್ಸಿನಲ್ಲಿ ಮಾಡಿಕೊಂಡ ನಿರ್ಧಾರದ ಮೇಲೆ ಭರವಸೆ ಇಡಬಾರದು ಅಥವಾ ಅವನ ಮನದಲ್ಲಿ ಯಾವುದಾದರೂ ಬಯಕೆಯಿದ್ದರೆ ಅದರ ಮೇಲೂ ಭರವಸೆ ಇಡಬಾರದು. ಶುದ್ಧ ಮನಸ್ಸು ಮತ್ತು ಶುದ್ಧ ಸಂಕಲ್ಪದೊಂದಿಗೆ ಅಲ್ಲಾಹನ ಮುಂದೆ ಇಸ್ತಿಖಾರ ಮಾಡಬೇಕು ಮತ್ತು ತನ್ನ ಕಾರ್ಯವನ್ನು ಪೂರ್ಣವಾಗಿ ಅಲ್ಲಾಹನಿಗೆ ಒಪ್ಪಿಸಿ ಬಿಡಬೇಕು.

## ಬಯಕೆಯ ನಮಾಝ್

"ಪ್ರವಾದಿ(ಸ) ಈ ರೀತಿ ಹೇಳಿರುವರು- ಪೂರ್ಣ ನಿಷ್ಠೆಯೊಂದಿಗೆ ವುಝೂ ಮಾಡಿ ಎರಡು ರಕಅತ್ ನಮಾಝ್ ಮಾಡುವವನ, ಎಲ್ಲ ಬೇಡಿಕೆಗಳನ್ನು ಅಲ್ಲಾಹನು ಕೂಡಲೇ ಆಗಲ್ಲಿ ತಡವಾಗಿಯಾಗಲಿ ಈಡೇರಿಸುವನು."

(ವರದಿ: ಹ. ಅಬುದ್ದರ್ದಾ(ರ)- ಮುಸ್ನದ್ ಅಹ್ಮದ್)

ಪ್ರವಾದಿ(ಸ) ಹೀಗೆ ಹೇಳಿರುವರು- "ಒಬ್ಬ ವ್ಯಕ್ತಿ ಅಲ್ಲಾಹನಿಂದ ಅಥವಾ ಯಾವನೇ ಮನುಷ್ಯನಿಂದ ತನ್ನ ಯಾವುದೇ ಬೇಡಿಕೆಯನ್ನು ಪೂರೈಸ ಬಯಸುವುದಾದರೆ ಅವನು ಚೆನ್ನಾಗಿ ವುಝೂ ಮಾಡಿ ಎರಡು ರಕಅತ್ ನಮಾಝ್ ಮಾಡಬೇಕು. ಅನಂತರ ಅಲ್ಲಾಹನ ಸ್ತುತಿ ಸ್ತೋತ್ರ ಹಾಗೂ ಪ್ರವಾದಿವರ್ಯರ(ಸ) ಮೇಲೆ ಸಲಾತ್ ಹೇಳಿದ ಬಳಿಕ ಈ ದುಆ ಪಠಿಸಬೇಕು."

لَا اِلٰـهَ اِلَّا اللّٰهُ الْحَلِيمُ الْكَرِيمُ سُبْحَانَ اللّٰهِ رَبِّ الْعَرْشِ الْعَظِيمِ اَلْحَمْدُ لِلّٰــهِ رَبِّ الْعٰـلَـمِيـنَ اَسْـأَلُكَ مُـوجِبَاتِ رَحْمَتِكَ وَعَزَائِمَ مَغْفِرَتِكَ وَالْغَنِيمَةَ مِنْ كُلِّ بِرٍّ وَالسَّلَامَةَ مِنْ كُلِّ اِثْمٍ، لَا تَدَعْ لِى ذَنْبًا اِلَّا غَفَرْتَهٗ وَلَا هَـمًّـا اِلَّا فَـرَّجْتَـهٗ وَلَا حَـاجَةً هِـىَ لَكَ رِضًا اِلَّا قَضَيْتَهَا يَا اَرْحَمَ الرَّاحِمِينَ

(ترمذی)

"ಲಾ ಇಲಾಹ ಇಲ್ಲಲ್ಲಾಹುಲ್ ಹಲೀಮುಲ್ ಕರೀಮ್. ಸುಬ್‌ಹಾನಲ್ಲಾಹಿ ರಬ್ಬಿಲ್ ಅರ್ಶಿಲ್ ಅಳೀಮ್. ಅಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್. ಅಸ್‌ಅಲುಕ ಮೂಜಿಬಾತಿ ರಹ್ಮತಿಕ ವ ಅಝ್ಞಾಇಮ ಮಗ್ಫಿರತಿಕ ವಲ್ ಗನೀಮತ ಮಿನ್‌ಕುಲ್ಲಿ ಬಿರ್ರಿನ್ ವಸ್ಸಲಾಮತ ಮಿನ್‌ಕುಲ್ಲಿ ಇಸ್ಮಿನ್. ಲಾ ತದಉ ಲೀ ದಂಬನ್ ಇಲ್ಲಾ ಗಫರ್ತಹೂ ವಲಾ ಹಮ್ಮನ್ ಇಲ್ಲಾ ಫರ್ರಜ್ತಹೂ ವಲಾ ಹಾಜತನ್ ಹಿಯ ಲಕ ರಿದನ್ ಇಲ್ಲಾ ಕದೈತಹಾ ಯಾ ಅರ್‌ಹಮರ್ರಾಹಿಮೀನ್."

ಅರ್ಥ: ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಸಂಯಮಿಯೂ ಕರುಣಾಮಯಿಯೂ ಆಗಿರುವನು. ಮಹಾನ್ ವಿಶ್ವಸಿಂಹಾಸನದ ಒಡೆಯನಾದ ಅಲ್ಲಾಹನು ಪರಮ ಪಾವನನು. ಸರ್ವಸ್ತುತಿಯೂ ಸರ್ವಲೋಕಗಳ ಪರಿಪಾಲಕನಾದ ಅಲ್ಲಾಹನಿಗೆ. ಓ ಅಲ್ಲಾಹ್! ನಾನು ನಿನ್ನ ಕರುಣೆ ಮತ್ತು ಕ್ಷಮೆಗೆ ಹೇತುವಾಗುವಂತಹ ಕಾರ್ಯಗಳನ್ನು ಮಾಡುವ ಸೌಭಾಗ್ಯವನ್ನು ಬೇಡುತ್ತೇನೆ. ನಾನು ನಿನ್ನಿಂದ ನಿನ್ನ ಅನುಸರಣೆ ಮಾಡುವ ಮತ್ತು ಎಲ್ಲ ಪಾಪಗಳಿಂದ ದೂರ ಉಳಿಯುವ ಸೌಭಾಗ್ಯವನ್ನು ಬೇಡುತ್ತೇನೆ. ನನ್ನ ಪಾಪಗಳೆಲ್ಲವನ್ನೂ ಕ್ಷಮಿಸು. ನನ್ನ ಎಲ್ಲ ಚಿಂತೆಗಳನ್ನೂ ನೀಗಿಸು. ನಿನ್ನ ಸಂತೃಪ್ತಿಯಿರುವಂತಹ ನನ್ನ ಎಲ್ಲ ಆಶೆಗಳನ್ನೂ ಈಡೇರಿಸು. ಓ ಅತ್ಯಧಿಕ ಕರುಣೆ ತೋರುವವನೇ! ನನ್ನ ಪ್ರಾರ್ಥನೆಯನ್ನು ಸ್ವೀಕರಿಸು.

(ವರದಿ: ಹ. ಅಬ್ದುಲ್ಲಾ ಬಿನ್ ಅಬೀ ಔಫಾ(ರ)- ತಿರ್ಮಿದಿ)

## ಮಳೆಗಾಗಿ ನಮಾಝ್

ಅನಾವೃಷ್ಟಿಯ ಕಾಲದಲ್ಲಿ ಮಳೆಗಾಗಿ ಪ್ರಾರ್ಥಿಸುವ ಮೂರು ಕ್ರಮಗಳು ಪ್ರವಾದಿ(ಸ) ಅವರಿಂದ ಉಲ್ಲೇಖಗೊಂಡಿದೆ.

**1. ದುಆ:**

"ಓರ್ವ ಹಳ್ಳಿಯ ವ್ಯಕ್ತಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾಗಿ ಈ ರೀತಿ ಅರಿಕೆ ಮಾಡಿದ: ನಾನು ಅನಾವೃಷ್ಟಿಯಿಂದ ಕುಡಿಯಲು ನೀರಿಲ್ಲದೆ ಮತ್ತು ಜಾನುವಾರುಗಳು ಬಲಹೀನವಾಗಿ ಬಾಲವನ್ನು ಅಲ್ಲಾಡಿಸಲಾರದ ಸ್ಥಿತಿಯಲ್ಲಿರುವ ಒಂದು ಊರಿನಿಂದ ಬಂದಿರುವೆನು." ಆಗ ಪ್ರವಾದಿ(ಸ) ಮಿಂಬರ್ (ಮಸೀದಿಯಲ್ಲಿರುವ ವೇದಿಕೆ)ನ ಮೇಲೇರಿ ಅಲ್ಲಾಹನ ಸ್ತುತಿ ಮತ್ತು ಪ್ರವಾದಿವರ್ಯರ(ಸ) ಮೇಲೆ ಸಲಾಮ್ ಹೇಳಿದ ನಂತರ ಈ ರೀತಿ ಪ್ರಾರ್ಥಿಸಿದರು :

اَللّٰهُمَّ اسْقِنَا غَيْثًا مُّغِيثًا مَرِيئًا مَرِيعًا طَبَقًا غَدَقًا عَاجِلًا غَيْرَ رَائِثٍ

"ಅಲ್ಲಾಹುಮ್ಮಸ್‌ಕಿನಾ ಗೈಸಮ್ಮುಗೀಸನ್ ಮರೀಅನ್ ಮರೀಆ ತಬಕನ್ ಗದಕನ್ ಆಜಿಲನ್ ಗೈರ ರಾಯಿಸಿನ್."

ಅರ್ಥ: ಓ ಅಲ್ಲಾಹ್! ನಮ್ಮ ಮೇಲೆ ಮಳೆ ಸುರಿಸು, ಉತ್ತಮ ಮಳೆ! ಉತ್ತಮ ಪರಿಣಾಮದ ಮಳೆ! ಭೂಮಿಯನ್ನು ಹಚ್ಚ ಹಸಿರುಗೊಳಿಸುವ ಮಳೆ! ಪರಿಪೂರ್ಣ ಮಳೆ! ಕೂಡಲೇ ಸುರಿಯುವ ಮತ್ತು ವಿಳಂಬವಿಲ್ಲದ ಮಳೆ!

ಅನಂತರ ಪ್ರವಾದಿ(ಸ) ಮಿಂಬರ್‌ನಿಂದ ಕೆಳಗಿಳಿದರು. ಆ ಬಳಿಕ ಎಲ್ಲ ಕಡೆಗಳಿಂದ ಬಂದ ವ್ಯಕ್ತಿಗಳೂ 'ನಮ್ಮಲ್ಲಿ ಒಳ್ಳೆಯ ಮಳೆಯಾಗಿದೆ' ಎಂದೇ ಹೇಳುತ್ತಿದ್ದರು.

(ವರದಿ: ಹ. ಇಬ್ನು ಅಬ್ಬಾಸ್(ರ) - ಇಬ್ನು ಮಾಜಃ, ಅಬೂ ಅವಾನಾ)

**2. ಜುಮಾ ದಿವಸ ಇಮಾಮ್ ಖುತ್‌ಬಾದಲ್ಲಿ ದುಆ ಮಾಡುವುದು ಮತ್ತು ಜನರು ಅದಕ್ಕೆ ಆಮೀನ್ ಹೇಳುವುದು:**

"ಪ್ರವಾದಿ(ಸ) ಒಮ್ಮೆ ಶುಕ್ರವಾರ ದಿನ ಮಿಂಬರ್‌ನಲ್ಲಿ ನಿಂತು ಖುತ್‌ಬಾ (ಪ್ರವಚನ) ನೀಡುತ್ತಿದ್ದರು. ಒಬ್ಬ ವ್ಯಕ್ತಿ ಮಸೀದಿಯೊಳಗೆ ಪ್ರವೇಶಿಸಿ ಹೀಗೆ ಹೇಳಿದನು: ಪ್ರವಾದಿವರ್ಯರೇ! ಸೊತ್ತು-ಜಾನುವಾರುಗಳು ನಾಶವಾದುವು ಮತ್ತು ಜೀವನೋಪಾಯದ ಮಾರ್ಗಗಳೆಲ್ಲಾ ಮುರಿದು ಬಿದ್ದುವು. (ಅರ್ಥಾತ್ ಬಡತನ ವ್ಯಾಪಿಸಿದೆ ಮತ್ತು ಮಾರಾಟಕ್ಕಾಗಿ ಪೇಟೆಗೊಯ್ಯಲು ಯಾವ ವಸ್ತುವೂ ಇಲ್ಲ.) ಅಲ್ಲಾಹನಲ್ಲಿ ಮಳೆಗಾಗಿ ಪ್ರಾರ್ಥಿಸಿರಿ. ಪ್ರವಾದಿ(ಸ) ಕೈಯೆತ್ತಿ ಪ್ರಾರ್ಥಿಸಿದರು: "ಅಲ್ಲಾಹುಮ್ಮಗ್‌ಸಿನಾ - ಅಲ್ಲಾಹುಮ್ಮಗ್‌ಸಿನಾ" (ಓ ಅಲ್ಲಾಹ್! ನಮ್ಮ ಮೇಲೆ ಮಳೆ ಸುರಿಸು.) ಅಲ್ಲಾಹನಾಣೆ! ಆಗ ಆಕಾಶದಲ್ಲಿ ಯಾವುದೇ ರೀತಿಯ ಮೋಡವಿರಲಿಲ್ಲ. ನಮ್ಮ ಮತ್ತು ಸಲಅ್ ಪರ್ವತದ ಮಧ್ಯೆ ಯಾವುದೇ ಮನೆಯೂ ಇರಲಿಲ್ಲ. (ಮೋಡ ಕಾಣುವುದಕ್ಕೆ ಯಾವುದೇ ತಡೆಯಿರಲಿಲ್ಲ) ಅಷ್ಟರಲ್ಲಿ ಪರ್ವತದ ಹಿಂದೆ ಗುರಾಣಿಯಂತಹ ಒಂದು ಮೋಡ ಏಳುವುದು ಕಂಡಿತು. ಅದು ನಮ್ಮ ಮೇಲೆ ಬಂದು ವ್ಯಾಪಿಸಿತು ಮತ್ತು ಮಳೆಯಾಯಿತು. ಅಲ್ಲಾಹನಾಣೆ! ಆ ಬಳಿಕ ಒಂದು ವಾರದ ತನಕ ನಾವು ಸೂರ್ಯನನ್ನು ಕಂಡಿರಲಿಲ್ಲ. ತರುವಾಯ ಮುಂದಿನ ಶುಕ್ರವಾರ ಪ್ರವಾದಿ(ಸ) ಮಿಂಬರ್‌ನ ಮೇಲೆ ಪ್ರವಚನ ನೀಡುತ್ತಿದ್ದಾಗ ಅದೇ ವ್ಯಕ್ತಿ ಮಸೀದಿಯ ಅದೇ ಬಾಗಿಲ ಮೂಲಕ ಪ್ರವೇಶಿಸಿ ಈ ರೀತಿ ಹೇಳಿದರು- ಪ್ರವಾದಿವರ್ಯರೇ! ಸೊತ್ತು ಮತ್ತು ಜಾನುವಾರುಗಳು ನಾಶವಾದುವು. ಎಲ್ಲ ಜೀವನೋಪಾಯದ ಮಾರ್ಗಗಳೂ ಮುರಿದು ಬಿದ್ದುವು. ಮಳೆ ನಿಲ್ಲಲಿಕ್ಕಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಿರಿ. ಪ್ರವಾದಿ(ಸ) ತಮ್ಮ ಎರಡೂ ಕೈಗಳನ್ನೆತ್ತಿ ಈ ರೀತಿ ಪ್ರಾರ್ಥಿಸಿದರು:

اَللّٰهُمَّ حَوَالَيْنَا وَلَا عَلَيْنَا اَللّٰهُمَّ عَلَى الْاٰكَامِ وَالظِّرَابِ وَبُطُونِ الْاَوْدِيَةِ وَمَنَابِتِ الشَّجَرِ

"ಅಲ್ಲಾಹುಮ್ಮ ಹವಾಲೈನಾ ವಲಾ ಅಲೈನಾ ಅಲ್ಲಾಹುಮ್ಮ ಅಲಲ್ ಆಕಾಮಿ ವ ಳಿರಾಬಿ ವ ಬುತೂನಿಲ್ ಔದಿಯತಿ ವಮನಾಬಿತಿಶ್ಶಜರಿ."

ಅರ್ಥ: ಓ ಅಲ್ಲಾಹ್! ನಮ್ಮ ಮೇಲೆ ಮಳೆಸುರಿಸಬೇಡ. ನಮ್ಮ ಪರಿಸರದಲ್ಲಿ ಮಳೆ ಸುರಿಸು. ಓ ಅಲ್ಲಾಹ್! ಬೆಟ್ಟ-ಗುಡ್ಡಗಳ, ಕಣಿವೆಗಳ ಮತ್ತು ವೃಕ್ಷಗಳು ಮೊಳೆಯುವ ಸ್ಥಳಗಳಲ್ಲಿ ಮಳೆ ಸುರಿಸು."

ಆಗಲೇ ಮಳೆ ನಿಂತಿತು. ನಾವು ಮಸೀದಿಯಿಂದ ಹೊರ ಬಂದಾಗ ಬಿಸಿಲು ಹರಡಿತ್ತು.

(ವರದಿ: ಹ. ಅನಸ್(ರ)- ಬುಖಾರಿ, ಮುಸ್ಲಿಮ್)

**3. ನಗರದಿಂದ ಹೊರಗೆ ಹೋಗಿ ನಮಾಝ್ ಮಾಡುವುದು:**

"ಒಂದು ದಿನ ಪ್ರವಾದಿ(ಸ) ಅಲ್ಲಾಹನಲ್ಲಿ ಮಳೆಗಾಗಿ ಪ್ರಾರ್ಥಿಸಲಿಕ್ಕೆ ನಗರದಿಂದ ಹೊರಗೆ ಹೋದರು. ಅಲ್ಲಿ ಅವರು ಯಾವುದೇ ಅದಾನ್ ಮತ್ತು ಇಕಾಮತ್ ಇಲ್ಲದೆ ನಮಗೆ ಎರಡು ರಕಅತ್ ನಮಾಝ್ ಮಾಡಿಸಿದರು. ಅನಂತರ ಖುತ್‌ಬಾ(ಪ್ರವಚನ) ನೀಡಿದರು ಮತ್ತು ಅಲ್ಲಾಹನಲ್ಲಿ ಪ್ರಾರ್ಥಿಸಿದರು. ತಮ್ಮ ಎರಡೂ ಕೈಗಳನ್ನೆತ್ತಿಕೊಂಡು ಕಿಬ್ಲಾಭಿಮುಖವಾಗಿ ನಿಂತರು. ತಮ್ಮ ಚದ್ದರದ ಬಲತುದಿಯನ್ನು ಎಡಭಾಗಕ್ಕೆ ಮತ್ತು ಎಡತುದಿಯನ್ನು ಬಲಭಾಗಕ್ಕೆ ಮಾಡಿಕೊಂಡರು."

(ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಇಬ್ನು ಮಾಜಃ, ಬೈಹಕಿ)

"ಪ್ರವಾದಿ(ಸ) ಮಳೆಗಾಗಿ ಪ್ರಾರ್ಥಿಸಲು ಜನರೊಂದಿಗೆ ನಗರದ ಹೊರಗೆ ಹೋದರು. ಅವರಿಗೆ ಎರಡು ರಕಅತ್ ನಮಾಝ್ ಮಾಡಿಸಿದರು. ಅದರಲ್ಲಿ ಕಿರಾಅತ್ ಉಚ್ಚ ಸ್ವರದಲ್ಲಿ ಪಠಿಸಿದರು."

(ವರದಿ: ಹ. ಅಬ್ದುಲ್ಲಾ ಬಿನ್ ಝೈದ್ ಮಾಝುನಿ(ರ)- ಬುಖಾರಿ, ಮುಸ್ಲಿಮ್, ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

"ಪ್ರವಾದಿ(ಸ) ಅತ್ಯಂತ ಭಯ-ಭಕ್ತಿ ಮತ್ತು ವಿನಯದೊಂದಿಗೆ ತಮ್ಮ ಸಾಮಾನ್ಯ ಉಡುಗೆ ತೊಟ್ಟು ನಗರದಿಂದ ಹೊರಗೆ ಹೋದರು ಮತ್ತು ಈದ್‌ನ ನಮಾಝ್ ಮಾಡುವಂತೆ ಎರಡು ರಕಅತ್ ನಮಾಝ್ ಮಾಡಿದರು ಮತ್ತು ನಿಮ್ಮ ಈ ಖುತ್‌ಬಾ (ಜುಮಾ ದಿವಸ ನಮಾಝ್‌ಗಿಂತ ಮುಂಚೆ ಖುತ್‌ಬಾ ನೀಡುವಂತೆ) ನೀಡಲಿಲ್ಲ."

(ವರದಿ: ಹ. ಇಬ್ನು ಅಬ್ಬಾಸ್(ರ)- ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)

ಮಳೆಗಾಗಿ ಈದ್ ನಮಾಝ್‌ನಂತೆ ಎರಡು ರಕಅತ್ ನಮಾಝ್ ಮಾಡುವುದು ಇಮಾಮ್ ಶಾಫಿಈಯವರ(ರ) ಪ್ರಕಾರ ಸುನ್ನತೆ ಮುಅಕ್ಕದಃ ಆಗಿದೆ. ಅದರಲ್ಲಿ ಕಿರಾಅತ್ ಉಚ್ಚ ಸ್ವರದಲ್ಲಿ ಓದಬೇಕು. ಸಾಮಾನ್ಯ ತಕ್ಬೀರ್‌ಗಳ ಹೊರತಾಗಿ ಪ್ರಥಮ ರಕಅತ್‌ನಲ್ಲಿ ಏಳು ಮತ್ತು ದ್ವಿತೀಯ ರಕಅತ್‌ನಲ್ಲಿ ಐದು ಹೆಚ್ಚುವರಿ ತಕ್ಬೀರ್‌ಗಳನ್ನು ಹೇಳಬೇಕು. ಅದಕ್ಕಾಗಿ

ಇಮಾಮರು ಯಾವುದಾದರೊಂದು ದಿನ ಮತ್ತು ಸಮಯ ನಿಗದಿಪಡಿಸಿ ಜನರೊಂದಿಗೆ ನಗರದ ಹೊರಗೆ ಹೋಗುವುದು ಸುನ್ನತ್ ಆಗಿದೆ. ಈ ನಮಾಝ್‌ನ ಮೊದಲು ಮತ್ತು ನಂತರ ಅಲ್ಲಾಹನ ದಿಕ್ರ್ ಮಾಡುವುದು ಮತ್ತು ಕೈಗಳನ್ನು ಕವಚಿ ಎತ್ತಿ ಹಿಡಿದು ತೌಬಾ(ಪಶ್ಚಾತ್ತಾಪ), ಇಸ್ತಿಗ್‌ಫಾರ್ ಮತ್ತು ದುಆ ಪಠಿಸುವುದು ಸುನ್ನತ್ ಆಗಿದೆ. ನಮಾಝ್‌ಗಿಂತ ಮುಂಚೆ ಅಥವಾ ನಂತರ ಇಮಾಮ್ ಖುತ್‌ಬಾ ನೀಡುವುದು ಸುನ್ನತ್ ಆಗಿದೆ.

# ದುಹಾ ನಮಾಝ್

**ಮಹತ್ವ:**

ದುಹಾ ನಮಾಝ್‌ನ ಮಹತ್ವವು ಅನೇಕ ಹದೀಸ್‌ಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.

"ನನ್ನ ಹಬೀಬ್ (ಆಪ್ತ ಸ್ನೇಹಿತ) ನನಗೆ ಮೂರು ವಿಷಯಗಳನ್ನು ಉಪದೇಶಿಸಿರುವರು- ಪ್ರತಿ ತಿಂಗಳು ಮೂರು ದಿನ ಉಪವಾಸ, ದುಹಾದ ಎರಡು ರಕಅತ್ ನಮಾಝ್ ಮತ್ತು ಮಲಗುವುದಕ್ಕೆ ಮುಂಚೆ ವಿತ್ರ್ ನಮಾಝ್."

(ವರದಿ: ಹ. ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್)

ಮುಸ್ಲಿಮ್‌ನ ಇನ್ನೊಂದು ವರದಿಯಲ್ಲಿ ಈ ಕೆಳಗಿನ ಪದಗಳು ಹೆಚ್ಚಿವೆ:

'ಪ್ರತಿದಿನ ದುಹಾದ ಎರಡು ರಕಅತ್‌ಗಳು.'

**ವಿಧಿ:**

ದುಹಾ ನಮಾಝ್ ಸುನ್ನತ್ ಆಗಿದೆ. ಪುಣ್ಯದ ಬಯಕೆಯಿಂದ ಅದನ್ನು ನಿರ್ವಹಿಸುವವನಿಗೆ ಪುಣ್ಯವಿದೆ. ನಿರ್ವಹಿಸದವನ ಮೇಲೆ ಪಾಪವಿಲ್ಲ.

"ಪ್ರವಾದಿ(ಸ) ದುಹಾ ನಮಾಝ್ ಮಾಡುತ್ತಿದ್ದರು. ಅವರು ಇನ್ನು ಅದನ್ನು ತೊರೆಯಲಾರರು ಎಂದು ನಾವು ಹೇಳ ತೊಡಗುತ್ತಿದ್ದೆವು. ಮತ್ತೆ ಪ್ರವಾದಿ(ಸ) ಅದನ್ನು ತೊರೆಯುತ್ತಿದ್ದರು. ಅವರು ಇನ್ನು ಅದನ್ನು ನಿರ್ವಹಿಸಲಾರರು ಎಂದು ನಾವು ಹೇಳ ತೊಡಗುತ್ತಿದ್ದೆವು."

(ವರದಿ: ಹ. ಅಬೂ ಸಈದ್ ಅಲ್ ಖುದ್ರೀ(ರ)- ತಿರ್ಮಿದಿ)

**ಸಮಯ:**

ದುಹಾ ನಮಾಝ್ ಸೂರ್ಯನು ಒಂದು ಗೇಣಿನಷ್ಟು ಮೇಲೇರಿದ ನಂತರ ನಿರ್ವಹಿಸಬಹುದು. ಅದರ ಸಮಯ ಮಧ್ಯಾಹ್ನದ ತನಕ ಇರುತ್ತದೆ. ಸೂರ್ಯನು ಸಾಕಷ್ಟು ಮೇಲೇರಿ ಬಿಸಿಲಲ್ಲಿ ತಾಪ ಬಂದಾಗ ಅದನ್ನು ನಿರ್ವಹಿಸುವುದು ಉತ್ತಮ.

"ಒಮ್ಮೆ ಪ್ರವಾದಿ(ಸ) ಕುಬಾ ವಾಸಿಗಳ ಬಳಿಗೆ ಹೋದರು. ಜನರು ದುಹಾ ನಮಾಝ್ ನಿರ್ವಹಿಸುತ್ತಿರುವುದನ್ನು ಕಂಡರು. ಆಗ ಹೇಳಿದರು- ಅಲ್ಲಾಹನ ಕಡೆಗೆ ಒಲಿಯುವವರ

ನಮಾಝ್(ದುಹಾ ನಮಾಝ್) ಒಂಟೆಮರಿಗಳ ಕಾಲು ಬಿಸಿಯಾಗುವ ಸಮಯದಲ್ಲಿ ನಿರ್ವಹಿಸಬೇಕು. (ಅರ್ಥಾತ್- ಭೂಮಿ ಕಾವೇರಿದಾಗ)"

(ವರದಿ: ಹ. ಝೈದ್ ಬಿನ್ ಅರ್ಖಮ್(ರ)- ಅಹ್ಮದ್, ಮುಸ್ಲಿಮ್, ತಿರ್ಮಿದಿ)

**ರಕಅತ್‌ಗಳು:**

ದುಹಾ ನಮಾಝ್ ಕನಿಷ್ಠ ಎರಡು ರಕಅತ್ ನಿರ್ವಹಿಸಬೇಕು. ಅದಕ್ಕೆ ಗರಿಷ್ಠ ಮಿತಿಯಿಲ್ಲ. ಪ್ರವಾದಿ(ಸ) ಹೆಚ್ಚೆಂದರೆ 8 ರಕಅತ್ ನಿರ್ವಹಿಸುತ್ತಿದ್ದರು. ಹನ್ನೆರಡು ರಕಅತ್ ನಿರ್ವಹಿಸಬಹುದೆಂದು ಹೇಳಿದ್ದರು.

"ಮಕ್ಕಾ ವಿಜಯದ ದಿನ ಪ್ರವಾದಿ(ಸ) ನಮ್ಮ ಮನೆಗೆ ಬಂದರು. ಸ್ನಾನ ಮಾಡಿ ಎಂಟು ರಕಅತ್ ನಮಾಝ್ ಮಾಡಿದರು. ಇಷ್ಟು ಲಘುವಾದ ನಮಾಝನ್ನು ನಾನು ಕಂಡಿರಲಿಲ್ಲ. ಆದರೆ ಪ್ರವಾದಿ(ಸ) ರುಕೂಅ್ ಮತ್ತು ಸುಜೂದ್ ಪೂರ್ಣವಾಗಿ ನಿರ್ವಹಿಸುತ್ತಿದ್ದರು." ಇನ್ನೊಂದು ವರದಿಯಲ್ಲಿ ಈ ಪದಗಳಿವೆ: "ಮತ್ತು ಇದು ದುಹಾ ನಮಾಝ್ ಆಗಿತ್ತು."

(ವರದಿ: ಹ. ಉಮ್ಮು ಹಾನಿ(ರ)- ಬುಖಾರಿ, ಮುಸ್ಲಿಮ್)

"ಒಬ್ಬನು ದುಹಾ ನಮಾಝ್ ಹನ್ನೆರಡು ರಕಅತ್ ನಿರ್ವಹಿಸಿದರೆ ಅಲ್ಲಾಹನು ಅವನಿಗಾಗಿ ಸ್ವರ್ಗದಲ್ಲಿ ಬಂಗಾರದ ಮನೆಯನ್ನು ನಿರ್ಮಿಸುತ್ತಾನೆ."

(ವರದಿ: ಹ. ಅನಸ್(ರ)- ತಿರ್ಮಿದಿ, ಇಬ್ನು ಮಾಜಃ)

## ಮರೆವಿನ ಸುಜೂದ್

ನಮಾಝ್‌ನಲ್ಲಿ ಮರೆವು ಉಂಟಾದರೆ ಮಾಡುವ ಹೆಚ್ಚುವರಿ ಸುಜೂದ್‌ಗೆ 'ಸಜದತುಸ್ಸಹೂ' ಎನ್ನುತ್ತಾರೆ. ಅದು ಎರಡು ಸುಜೂದ್‌ಗಳಾಗಿವೆ. ಪ್ರವಾದಿವರ್ಯರೂ(ಸ) ಕೆಲವೊಮ್ಮೆ ನಮಾಝ್‌ನಲ್ಲಿ ಮರೆಯುತ್ತಿದ್ದರು. ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಾನೂ ಒಬ್ಬ ಮನುಷ್ಯನಾಗಿರುವೆ. ನೀವು ಮರೆಯುವಂತೆ ನಾನೂ ಮರೆತು ಬಿಡುತ್ತೇನೆ. ಆದ್ದರಿಂದ ನಾನು ಮರೆತಾಗಲೆಲ್ಲಾ ನೀವು ನನಗೆ ನೆನಪಿಸಿರಿ."

(ಬುಖಾರಿ, ಮುಸ್ಲಿಮ್, ಅಬೂ ದಾವೂದ್, ಅಹ್ಮದ್, ನಸಾಈ, ಇಬ್ನು ಮಾಜಃ)

"ಮನುಷ್ಯನು ತನ್ನ ನಮಾಝ್‌ನಲ್ಲಿ ಹೆಚ್ಚು-ಕಡಿಮೆ ಮಾಡಿದರೆ ಅವನು ಎರಡು ಸುಜೂದ್‌ಗಳನ್ನು ಮಾಡಲಿ."

(ವರದಿ: ಹ. ಇಬ್ನು ಮಸ್‌ಊದ್(ರ)- ಮುಸ್ಲಿಮ್)

**ಸಮಯ:**

ಮರೆವಿನ ಸುಜೂದನ್ನು ನಮಾಝ್‌ನ ಕೊನೆಯಲ್ಲಿ ಸಲಾಮ್ ಹೇಳುವುದಕ್ಕೆ ಮೊದಲು ಅಥವಾ ನಂತರ ಮಾಡಬಹುದಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನಿಮ್ಮ ಪೈಕಿ ಯಾರಾದರೂ ನಮಾಝ್‌ನಲ್ಲಿ ಮರೆತರೆ ಮತ್ತು ಅವನಿಗೆ ತಾನು ಮೂರು ರಕಅತ್ ನಮಾಝ್ ಮಾಡಿರುವೆನೋ ಅಥವಾ ನಾಲ್ಕು ರಕಅತ್ ನಿರ್ವಹಿಸಿರುವೆನೋ ಎಂಬ ಬಗ್ಗೆ ಸಂಶಯ ಉಂಟಾದರೆ ಅವನು ತನ್ನ ಸಂಶಯವನ್ನು ದೂರೀಕರಿಸಿ ದೃಢನಿಶ್ಚಯ ಮಾಡಿಕೊಳ್ಳಬೇಕು ಮತ್ತು ಸಲಾಮ್‌ಗಿಂತ ಮುಂಚೆ ಎರಡು ಸುಜೂದ್ ಮಾಡಬೇಕು. ಈ ರೀತಿ ಅವನು ಐದು ರಕಅತ್ ನಿರ್ವಹಿಸಿದ್ದರೆ ಅವನ ನಮಾಝ್ 'ಶುಫಅ್' ಆಗುವುದು. ಒಂದು ವೇಳೆ ನಾಲ್ಕು ರಕಅತ್ ನಿರ್ವಹಿಸಿದ್ದರೆ ಅವನ ನಮಾಝ್ ಪೂರ್ಣವಾಗುವುದು ಮತ್ತು ಶೈತಾನನಿಗೆ ಅವಮಾನವಾಗುವುದು."

(ವರದಿ: ಹ. ಅಬೂ ಸಈದ್ ಖುದ್ರೀ(ರ)- ಅಹ್ಮದ್, ಮುಸ್ಲಿಮ್, ಅಬೂ ದಾವೂದ್)

ಇಮಾಮ್ ಅಬೂ ಹನೀಫಾರ(ರ) ಪ್ರಕಾರ ಮರೆವಿನ ಸುಜೂದ್ ಒಂದು ಕಡೆ ಸಲಾಮ್ ಹೇಳಿದ ನಂತರ ಮಾಡಬೇಕು.

ಶಾಫಿಈ ಕ್ರಮದಂತೆ ಅತ್ತಹಿಯ್ಯಾತ್ ಮುಗಿಸಿದ ನಂತರ ಸಲಾಮ್‌ಗಿಂತ ಮುಂಚೆ ಮರೆವಿನ ಸುಜೂದ್ ಮಾಡಬೇಕು.

**ಕ್ರಮ:**

ಮರೆವಿನ ಸುಜೂದ್ ಸಲಾಮ್‌ಗಿಂತ ಮುಂಚೆ ಮಾಡುವುದಾದರೆ ಕೊನೆಯ ರಕಅತ್‌ನಲ್ಲಿ ಅತ್ತಹಿಯ್ಯಾತ್, ಸಲಾಮ್ ಮತ್ತು ದುಆದ ನಂತರ ಎರಡು ಸುಜೂದ್ ಮಾಡಬೇಕು. ಎರಡೂ ಸುಜೂದ್‌ಗೆ ಹೋಗುವಾಗ ಮತ್ತು ಸುಜೂದ್‌ನಿಂದ ಏಳುವಾಗ 'ಅಲ್ಲಾಹು ಅಕ್ಬರ್' ಎಂದು ಹೇಳಬೇಕು. ಎರಡೂ ಸುಜೂದ್‌ಗಳ ನಂತರ ಸಲಾಮ್ ಹೇಳಬೇಕು. ಇದುವೇ ಶಾಫಿಈ ಕ್ರಮ.

ಹನಫೀ ಕ್ರಮದ ಪ್ರಕಾರ ಮರೆವಿನ ಸುಜೂದ್ ಸಲಾಮ್‌ನ ನಂತರ ಮಾಡುವುದಾದರೆ ಅತ್ತಹಿಯ್ಯಾತ್‌ನ ನಂತರ ಬಲಗಡೆಗೆ ತಿರುಗಿ ಒಂದು ಸಲಾಮ್ ಹೇಳಬೇಕು. ಅನಂತರ ಎರಡು ಸುಜೂದ್‌ಗಳನ್ನು ಮಾಡಬೇಕು. ಆ ಬಳಿಕ ಕುಳಿತು ಅತ್ತಹಿಯ್ಯಾತ್, ಸಲಾತ್ ಮತ್ತು ದುಆ ಪಠಿಸಿ ಎರಡೂ ಕಡೆಗೆ ಸಲಾಮ್ ಹೇಳಬೇಕು.

## ತಿಲಾವತ್(ಕುರ್‌ಆನ್ ಪಠನ)ನ ಸುಜೂದ್

ಪವಿತ್ರ ಕುರ್‌ಆನಿನ ಕೆಲವು ಆಯತ್‌ಗಳನ್ನು ಪಠಿಸಿದವನು ಮತ್ತು ಅದನ್ನು ಆಲಿಸಿದವನು ಸುಜೂದ್ ಮಾಡಬೇಕೆಂದಿದೆ. ಇದಕ್ಕೆ 'ತಿಲಾವತ್‌ನ ಸುಜೂದ್' ಎನ್ನುತ್ತಾರೆ.

**ವಿಧಿ:**

ಹೆಚ್ಚಿನ ಕರ್ಮಶಾಸ್ತ್ರ ಪಂಡಿತರ ಪ್ರಕಾರ ತಿಲಾವತ್‌ನ ಸುಜೂದ್ ಕುರ್‌ಆನ್ ಓದುವವನ ಮೇಲೂ ಕೇಳುವವನ ಮೇಲೂ ಸುನ್ನತ್ ಆಗಿದೆ. ಮಾಡಿದರೆ ಪುಣ್ಯದಾಯಕ, ಮಾಡದಿದ್ದರೆ

ಪಾಪವಿಲ್ಲ. ಆದರೆ ಇಮಾಮ್ ಅಬೂ ಹನೀಫಾರ(ರ) ಪ್ರಕಾರ ತಿಲಾವತ್‌ನ ಸುಜೂದ್ ಪಠಿಸುವವನ ಮೇಲೂ ಆಲಿಸುವವನ ಮೇಲೂ ವಾಜಿಬ್(ಕಡ್ಡಾಯ) ಆಗಿದೆ.

**ಮಹತ್ವ:**

ತಿಲಾವತ್‌ನ ಸುಜೂದ್‌ಗೆ ಬಹಳ ಮಹತ್ವವಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮನುಷ್ಯನು ಕುರ್‌ಆನ್ ಪಠಿಸುತ್ತಾ ಸುಜೂದ್‌ನ ಸ್ಥಾನಕ್ಕೆ ತಲುಪಿ ಸುಜೂದ್ ಮಾಡಿದರೆ ಶೈತಾನನು ಅಳುತ್ತಾ ಈ ರೀತಿ ಗೊಣಗುತ್ತಾ ಹೋಗುವನು- ಅಯ್ಯೋ ದುರದೃಷ್ಟವೇ, ಅವನಿಗೆ ಸುಜೂದ್‌ನ ಆಜ್ಞೆ ಸಿಕ್ಕಿತು. ಅವನು ಸುಜೂದ್ ಮಾಡಿದನು. ಆದ್ದರಿಂದ ಅವನ ಪಾಲಿಗೆ ಸ್ವರ್ಗವಿದೆ. ನನಗೆ ಸುಜೂದ್‌ನ ಆಜ್ಞೆ ಸಿಕ್ಕಿತು. ನಾನು ಮಾಡಲಿಲ್ಲ, ನನ್ನ ಪಾಲಿಗೆ ಅಗ್ನಿಯಿದೆ." (ವರದಿ: ಹ. ಅಬೂ ಹುರೈರಾ(ರ)- ಅಹ್ಮದ್, ಮುಸ್ಲಿಮ್, ಇಬ್ನು ಮಾಜಃ)

**ನಿಬಂಧನೆಗಳು:**

ಕರ್ಮಶಾಸ್ತ್ರ ವಿದ್ವಾಂಸರ ಪ್ರಕಾರ ತಿಲಾವತ್‌ನ ಸುಜೂದ್‌ಗೂ ನಮಾಝ್‌ನಂತೆಯೇ ನಗ್ನತೆ ಮರೆಸುವುದು, ಕಿಬ್ಲಾಭಿಮುಖವಾಗಿರುವುದು ಮತ್ತು ವುಝೂ ಮಾಡಿರುವುದು ಕಡ್ಡಾಯವಾಗಿದೆ.

ಸುಜೂದ್ ಮಾಡುವಾಗ ಮತ್ತು ಸುಜೂದ್‌ನಿಂದ ಏಳುವಾಗ 'ಅಲ್ಲಾಹು ಅಕ್ಬರ್' ಎನ್ನುವುದು ಸುನ್ನತ್ ಆಗಿದೆ.

**ದುಆ:**

ಹದೀಸ್‌ಗಳಲ್ಲಿ ತಿಲಾವತ್‌ನ ಸುಜೂದ್‌ನ ಎರಡು ದುಆಗಳು ವರದಿಯಾಗಿವೆ-

ಪ್ರವಾದಿ(ಸ) ಕುರ್‌ಆನಿನ ಸುಜೂದ್‌ನಲ್ಲಿ ಈ ದುಆ ಪಠಿಸುತ್ತಿದ್ದರು:

سَجَدَ وَجْهِیَ لِلَّذِی خَلَقَهٗ وَشَقَّ سَمْعَهٗ وَبَصَرَهٗ بِحَوْلِهٖ وَقُوَّتِهٖ فَتَبَارَكَ اللّٰهُ اَحْسَنُ الْخَالِقِینَ (احمد، ابوداؤد، ترمذی، نسائی، حاکم)

"ಸಜದಃ ವಜ್ಹಿಯ ಲಿಲ್ಲದೀ ಖಲಕಹೂ ವಶಕ್ಕ ಸಮ್‌ಅಹೂ ವ ಬಸರಹೂ ಬಿಹೌಲಿಹೀ ವ ಕುವ್ವತಿಹೀ ಫತಬಾರಕಲ್ಲಾಹು ಅಹ್ಸನುಲ್ ಖಾಲಿಕೀನ್."

ಅರ್ಥ: ನನ್ನ ಮುಖವು ಅದನ್ನು ಸೃಷ್ಟಿಸಿದ ಅದರ ಕಿವಿಗಳನ್ನು ಮಾಡಿದ ಕಣ್ಣುಗಳನ್ನಿಟ್ಟ ಆ ಪಾವನ ಅಸ್ತಿತ್ವದ ಮುಂದೆ ಸುಜೂದ್ ಮಾಡುತ್ತದೆ. ಇದೆಲ್ಲವೂ ಅವನ ಅನುಗ್ರಹ ಮತ್ತು ಶಕ್ತಿಯಿಂದಾಗಿದೆ. ಅಲ್ಲಾಹನ ಅಸ್ತಿತ್ವವು ಪರಮ ಪಾವನವಾಗಿದೆ. ಅವನು ಅತ್ಯುತ್ತಮ ಸೃಷ್ಟಿಕರ್ತನಾಗಿರುವನು.

(ವರದಿ: ಹ. ಆಯಿಶಾ(ರ)- ಅಹ್ಮದ್, ಅಬೂ ದಾವೂದ್, ತಿರ್ಮಿದಿ, ನಸಾಈ, ಹಾಕಿಮ್)

"ನಾನು ಪ್ರವಾದಿವರ್ಯರ(ಸ) ಬಳಿ ಕುಳಿತಿದ್ದೆ. ಒಬ್ಬನು ಬಂದು ಈ ರೀತಿ ಹೇಳಿದನು: ನಾನು ರಾತ್ರಿ ಕನಸು ಕಂಡೆ. ನಾನು ಒಂದು ಮರದ ಬುಡದ ಕಡೆಗೆ ಮುಖಮಾಡಿ ನಮಾಝ್ ಮಾಡುತ್ತಿದ್ದೆ. ಕುರ್‌ಆನ್ ಪಠಿಸುತ್ತಾ ಸುಜೂದ್‌ನ ಸ್ಥಾನಕ್ಕೆ ತಲುಪಿದಾಗ ಸುಜೂದ್ ಮಾಡಿದೆ. ಮರವೂ ನನ್ನ ಜತೆ ಸುಜೂದ್ ಮಾಡಿತು. ಅದು ಆಗ ಈ ರೀತಿ ದುಆ ಪಠಿಸುತ್ತಿತ್ತು."

اَللّٰهُمَّ احْطُطْ عَنِّى وِزْرًا وَاكْتُبْ لِى بِهَآ اَجْرًا وَاجْعَلْهَا لِى عِنْدَكَ ذُخْرًا (ترمذی، ابن ماجة)

"ಅಲ್ಲಾಹುಮ್ಮಹ್‌ತುತ್ ಅನ್ನೀ ವಿಝ್ರನ್ ವಕ್ತುಬ್‌ಲೀ ಬಿಹಾ ಅಜ್ರನ್ ವಜ್‌ಅಲ್‌ಹಾ ಲೀ ಇಂದಕ ದುಖ್ರನ್."

ಅರ್ಥ: ಓ ಅಲ್ಲಾಹ್! ಈ ಸುಜೂದ್‌ನ ಮೂಲಕ ನನ್ನ ಒಂದು ಹೊರೆ (ಪಾಪ)ಯನ್ನು ನನ್ನ ಮೇಲಿಂದ ಇಳಿಸು ಮತ್ತು ಒಂದು ಪುಣ್ಯವನ್ನು ನನ್ನ ಪಾಲಿಗೆ ಬರೆದಿಡು ಮತ್ತು ಅದನ್ನು ನಿನ್ನ ಬಳಿ ನನಗಾಗಿ ಕೂಡಿಸಿಡು. (ವರದಿ: ಹ. ಇಬ್ನು ಅಬ್ಬಾಸ್(ರ)- ತಿರ್ಮಿದಿ, ಇಬ್ನು ಮಾಜಃ)

ತಿರ್ಮಿದಿಯಲ್ಲಿ ಈ ಪದಗಳು ಹೆಚ್ಚಿವೆ.

وَتَقَبَّلْهَا مِنِّى كَمَا تَقَبَّلْتَ مِنْ عَبْدِكَ دَاوُدَ

"ವತಕಬ್ಬಲ್‌ಹಾ ಮಿನ್ನೀ ಕಮಾ ತಕಬ್ಬಲ್ತ ಮಿನ್ ಅಬ್ದಿಕ ದಾವೂದ."

ಅರ್ಥ: ನೀನು ನಿನ್ನ ದಾಸರಾದ ದಾವೂದ್‌ರಿಂದ(ಅ) ಸ್ವೀಕರಿಸಿದಂತೆ ಅದನ್ನು ನನ್ನಿಂದ ಸ್ವೀಕರಿಸು."

ಇದರ ನಂತರ ಪ್ರವಾದಿ(ಸ) ತಿಲಾವತ್‌ನ ಸುಜೂದ್‌ನಲ್ಲಿ ಈ ದುಆ ಪಠಿಸುವುದನ್ನು ನಾನು ಕೇಳಿದ್ದೇನೆ ಎಂದು ಹ. ಇಬ್ನು ಅಬ್ಬಾಸ್(ರ) ಹೇಳುತ್ತಾರೆ. ತಿಲಾವತ್‌ನ ಸುಜೂದ್‌ನಲ್ಲಿ 'ಸುಬ್‌ಹಾನ ರಬ್ಬಿಯಲ್ ಅಅ್‌ಲಾ' ಎಂದು ಹೇಳಿದರೂ ಸಾಕಾಗುತ್ತದೆ.

**ನಮಾಝ್‌ನಲ್ಲಿ ತಿಲಾವತ್‌ನ ಸುಜೂದ್:**

ಮನುಷ್ಯನು ಒಬ್ಬಂಟಿಯಾಗಿ ಅಥವಾ ಇಮಾಮ್ ಆಗಿ ನಮಾಝ್ ಮಾಡುವಾಗ ಅದು ಫರ್ಝ್ ನಮಾಝ್ ಆಗಿರಲಿ, ನಫಿಲ್ ಆಗಿರಲಿ ಸುಜೂದ್‌ನ ಆಯತ್ ಪಠಿಸಿದರೆ ಸುಜೂದ್ ಮಾಡುವುದು ಅಪೇಕ್ಷಣೀಯವಾಗಿದೆಯೆಂಬುದು ಹೆಚ್ಚಿನ ಕರ್ಮಶಾಸ್ತ್ರ ಪಂಡಿತರ ಅಭಿಮತ.

"ನಾನು ಹ. ಅಬೂ ಹುರೈರಾರವರ(ರ) ಹಿಂದೆ ಇಶಾ ನಮಾಝ್ ಮಾಡಿದೆ. ಅವರು 'ಇದಸ್ಸಮಾಉನ್ ಶಕ್ಕತ್' ಎಂಬ ಸೂರಃ ಪಠಿಸುತ್ತಾ ಸುಜೂದ್ ಮಾಡಿದರು. ನಾನು ನಂತರ

ಅವರಲ್ಲಿ ಇದೆಂತಹ ಸುಜೂದ್ ಎಂದು ವಿಚಾರಿಸಿದೆ. ಆಗ ಅವರು ಹೇಳಿದರು- ನಾವು ಪ್ರವಾದಿವರ್ಯರ(ಸ) ಹಿಂದೆ ನಮಾಝ್ ಮಾಡಿದಾಗಲೂ ತಿಲಾವತ್‌ನ ಸುಜೂದ್ ಮಾಡುತ್ತಿದ್ದೆವು. ಇನ್ನು ನಾನು ಪ್ರವಾದಿವರ್ಯರನ್ನು(ಸ) ಭೇಟಿಯಾಗುವ ತನಕವೂ ಈ ಸುಜೂದ್ ಮಾಡುತ್ತಿರುವೆನು." (ವರದಿ: ಹ. ಅಬೂ ರಾಫಿಅ(ರ)- ಬುಖಾರಿ, ಮುಸ್ಲಿಮ್)